# ಅರ್ಪಣೆ

ಕಾಲಾಧೀನರಾದ

ನನ್ನ ಮಿತ್ರರಾದ

**ಸೀತಾರಾಮ್ - ಯಶೋ**

ಇವರಿಗೆ

**ಗಮನಿಸಿ**- ಸೀತಾರಾಮ್- ಎಂದರೆ, ವಿ. ಆರ್. ಸೀತಾರಾಮಾಚಾರಿ.
ಯಶೋ ಎಂದರೆ, ಎಂ. ಜಿ. ಯಶೋನಾಥ.

# ಅರಿಕೆ

ನಾನು S S. L C ಕ್ಲಾಸಿನಲ್ಲಿ ಓದುತ್ತಿದ್ದಾಗಿನಿಂದಲೂ ಪುಸ್ತಕವನ್ನು ಓದುವ ಹುಚ್ಚು, ನಾನೇ ಬರೆಯಬೇಕೆಂಬ ಹಂಬಲವೂ ಬೆನ್ನಟ್ಟಿದ್ದುವು ಶಾಲೆಯ ಪಠ್ಯಪುಸ್ತಕಗಳನ್ನು ಓದಬೇಕಾದ ಕಾಲದಲ್ಲಿ ಇತರ ಪುಸ್ತಕಗಳನ್ನು ಓದಿದುದರ ಪರಿಣಾಮವಾಗಿ, ಅನೇಕ ಬಾರಿ ನಮ್ಮ ಪೂಜ್ಯ ಮಾತೃಶ್ರೀಯವರಿಂದ ದಂಡಿಸಲ್ಪಟ್ಟಿದ್ದೇನೆ. ಎರಡು ಬಾರಿ ಇಂಟರ್‌ಮೀಡಿಯಟ್ ಪರೀಕ್ಷೆಯಲ್ಲಿ ತೇರ್ಗಡೆಯಾಗದೆ ಹೋಗಿದ್ದೇನೆ ನಾನು ತೆಗೆದುಕೊಂಡಿದ್ದ ಪಠ್ಯಭಾಗಗಳನ್ನು ಸರಿಯಾಗಿ ಓದಿ ಪರೀಕ್ಷೆಯಲ್ಲಿ ತೇರ್ಗಡೆಯಾಗದೆ, ನನ್ನ ತಂದೆತಾಯಿಗಳು ನಾನು ವೈದ್ಯವೃತ್ತಿಯನ್ನು ಪ್ರವೇಶಿಸಬೇಕೆಂದಿದ್ದ ಹೆಬ್ಬಯಕೆಯನ್ನು ಮಣ್ಣುಗೂಡಿಸಿ, ನಮ್ಮ ತೀರ್ಥರೂಪರು 'ನನ್ನ ಶತ್ರುವಿಗೂ ಬೇಡ' ಎಂದು ಪರಿತ್ಯಜಿಸಿ ನಮ್ಮ ಅಣ್ಣಂದಿರು ಪ್ರವೇಶ ಮಾಡಲು ಸಾಧ್ಯವಿದ್ದರೂ ಅವಕಾಶಗೊಡದ ಈ ವೃತ್ತಿಗೆ ಕಾಲಿಟ್ಟಿರುವುದಾದರೂ ಇದೇ ಕಾರಣದಿಂದಲೇ ಎಂದುಕೊಂಡಿದ್ದೇನೆ ಹೋಗಲಿ, ಈ ಹುಚ್ಚು, ಈ ಹಂಬಲ ಇಂದಾದರೂ ನನ್ನನ್ನು ಬಿಟ್ಟಿವೆಯೇ? ಇಲ್ಲ! ಈಗಲೂ ಮೇಲಣ ಅಧಿಕಾರಿಗಳಿಂದ ಇದಕ್ಕಾಗಿ ದಂಡಿಸಲ್ಪಟ್ಟಿದ್ದೇನೆ ಈ ಹುಚ್ಚು ಹಂಬಲಗಳಿಂದ ಜೀವನದಲ್ಲಿ **Practical** ಆಗಿ ಇರಲು ಸಾಧ್ಯವಿಲ್ಲದೆ, ನನ್ನದೇ ಒಂದಾದ ಭಾವನಾಪ್ರಪಂಚದಲ್ಲಿ ಸಿಲುಕಿ ನರಳುತ್ತಿದ್ದೇನೆ ಮನಸಾ ಒಂದಾಗಿ, ಕಾಯಾ ಕರ್ಮಣಾ ಬೇರೆಯಾಗಿ ಹಿಂಸೆಪಡುತ್ತಿದ್ದೇನೆ. ಸುಖಮಯವಾದ ಜೀವನದಿಂದಲೂ ವಂಚಿತನಾಗಿದ್ದೇನೆಂತ ಆಗಾಗ್ಗೆ ಅಂದುಕೊಳ್ಳುತ್ತೇನೆ

ಆದರೆ ಇದರಿಂದ ನನಗುಂಟಾಗಿರುವ ಅನುಕೂಲವೇನು? ನನ್ನ ಹಂಬಲದ ಮರಿಗಳನ್ನು ನಾನು ಸೃಷ್ಟಿಸುವಷ್ಟು ಕಾಲ ನನ್ನನ್ನೂ ನನ್ನ ಸುತ್ತಮುತ್ತಲಿರುವ ಈ ಘೋರ ಪ್ರಪಂಚದ ವಿಕಟ ಅಟ್ಟಹಾಸವನ್ನೂ ಭೀಕರ ನಗ್ನಸತ್ಯವನ್ನೂ ಮರೆತಿದ್ದೇನೆ. ಈ ಹಂಬಲದ ಶಿಶುಗಳಲ್ಲಿ ಕೆಲವಾದರೂ ಓದುಗರನ್ನು (**Critics** ಅನ್ನು ಸಂತೋಷಗೊಳಿಸದಿದ್ದರೂ ಬೇಡ) ಸಂತೋಷಪಡಿಸಿದರೆ,- ನನ್ನ ಹಂಬಲ ಅಡ್ಡಹಾದಿಯನ್ನು ಹಿಡಿಯದೆ ಸರಿಯಾದ ಮಾರ್ಗದಲ್ಲಿ ಹರಿದಿದೆ ಎಂದು ಸಂತೋಷಪಟ್ಟುಕೊಳ್ಳುತ್ತೇನೆ. ನನ್ನ ಜನ್ಮ ಸಾರ್ಥಕವಾದಂತೆ ಭಾವಿಸುತ್ತೇನೆ.

ನಾನು ಬರೆದ ಎಷ್ಟೋ ಕತೆಗಳನ್ನು ಇತರರಿಗೆ ಓದಿ ಅಭಿಪ್ರಾಯ ತಿಳಿಸಲು ಕೊಟ್ಟು, ಪ್ರತಿಮಾಡಿ ಇಟ್ಟುಕೊಳ್ಳದುದರಿಂದ ಕಳೆದುಕೊಂಡಿದ್ದೇನೆ. ಅವರ ಬಾಗಿಲಿಗೆ ಹತ್ತಾರು ಬಾರಿ ಅಲೆದಿದ್ದೇನೆ. ಕಳೆದುಳಿದ ಕೆಲವು ಕತೆಗಳಲ್ಲಿ ಕೆಲವು ಶ್ರೀ ಕಾರಂತರ ಸಹಾಯದಿಂದ ಇಂದು ಈ ಪುಸ್ತಕದ ರೂಪದಲ್ಲಿ ಹೊರಟಿದೆ

1936ನೆಯ ಇಸವಿಯಲ್ಲಿ ಶ್ರೀ ಗೋಪಾಲರಾಯರು 'ಕತೆಗಾರ'ನ ಸಂಪಾದಕರಾಗಿದ್ದರು (?) ಆಗ ನನ್ನ ಕತೆಗಳ ಪೈಕಿ 1) ನಾನೇ ಹೊಣೆ. 2) ಕೋಪವೋ

ಪ್ರಣಯುವ್ರೋ 3) ಬೆಳಗಿಸದ ಜ್ಯೋತಿಗಳು. 4) ಕಾಶ್ಮೀರಿ ಹುಡುಗಿಯ ಗಾನ. 5) ಚಪಲಾ ವಾಗ್ಲೆ 6) ಖಾನ ಎಂಬುವು 'ಕತೆಗಾರ'ನಲ್ಲಿ ಬಂದುವು ಇವುಗಳಲ್ಲಿ 1, 2, 6 ನನ್ನ ಮನಸ್ಸಿನ ಮರಿಗಳು. ಉಳಿದವು 'ತ್ರಿವೇಣಿ'ಯಲ್ಲಿ ಪ್ರಕಟವಾದ ಇತರ ಕತೆಗಾರರು ಬರೆದ ಕಥೆಗಳ ಅನುವಾದ ಅಥವ **adaptation.** ಶ್ರೀ ಗುರ್ಜರರ 'ಚಪಲ ವಾಗ್ಲೆ'ಯಂತೂ ಇನ್ನೊಬ್ಬ ಕನ್ನಡಿಗರಿಂದ ಅನುವಾದಿಸಲ್ಪಟ್ಟಿದೆ-ಇತ್ತೀಚೆಗೆ ಎಂತ ಕಾಣುತ್ತೆ ನಾನು 1936ರಲ್ಲಿ M. C S. ಪರೀಕ್ಷೆಗೆ ಕಟ್ಟತೇರ್ಗಡೆ ಹೊಂದಿದುದು ಈ ರೀತಿಯಲ್ಲಿ.

ಆ ಮೇಲೆ ಕತೆಗಾರನನ್ನು ಈಗಿರುವ ಸಂಪಾದಕರು ಹಿಡಿದರು. 1947ನೇ ವರ್ಷದ ಆನ್ಯುಯಲ್‌ನಲ್ಲಿ ಬಂದ ಮೊದಲನೆಯ ಕತೆ 'ಮಣಿ' ಗ್ರೇಟ್ ಇಟಾಲಿಯನ್ **'Short Stories'**ನ **'Miss Grief'** ಎಂಬ ಕತೆಯನ್ನೋದಿ, ನನ್ನ ಅನುಭವಕ್ಕನುಗುಣವಾಗಿ ಬರೆದುದೇ ಆ ಕತೆ. ಅದೇ ವರ್ಷದಲ್ಲಿ ಬಂದ 'ಹಿಂಗಿದ ಹಗೆತನ' 'ಜೋಗಪ್ಪನ ಬಂಡಿ'ಯೊಡನೆ ನಾನು 'ಕತೆಗಾರ'ನಿಗೆ ಕತೆಗಳನ್ನು ಕಳಿಸುವುದು ಕಡೆಯಾಯಿತು. ಅವರು ನನ್ನ ಕೆಲವು ಕತೆಗಳನ್ನು ಕಥಾಗುಚ್ಛದ ರೀತಿಯಲ್ಲಿ ಪ್ರಕಟಿಸುತ್ತೇನೆಂದರು. ಮತ್ತು ಶ್ರೀ ಸಿದ್ಧವ್ವನ ಹಳ್ಳಿ ಕೃಷ್ಣಶರ್ಮರು ನನ್ನ ಕತೆಗಳನ್ನು ಓದಿ ಪ್ರಕಟಿಸಲು ಸಹಾಯಮಾಡುತ್ತೇನೆಂದರು ಆದರೆ ಉದ್ಯೋಗದಲ್ಲಿರುವ ನನಗೆ, ಅವರ ಸಹಾಯಹಸ್ತಗಳನ್ನು ಹಿಡಿಯಲು ವಿರಾಮವಿಲ್ಲದುದರಿಂದ ಸಾಧ್ಯವಾಗಲಿಲ್ಲ.

ಶಿವಮೊಗ್ಗಾ ಜಿಲ್ಲೆಗೆ ಬಂದ ಮೇಲೆ ಶ್ರೀಯುತ ಪರಮೇಶ್ವರ ಭಟ್ಟರು ನನ್ನ ಕತೆಗಳಲ್ಲಿ ಕೆಲವನ್ನು ಓದಿ ಅವುಗಳನ್ನು ಮೈಸೂರಿನ ಕಾವ್ಯಾಲಯದ ಶ್ರೀ ಚಿದಂಬರಂ ಅವರಿಗೆ ಕೊಟ್ಟು ಕಳಿಸಬೇಕೆಂದು ಸೂಚಿಸಿದರು. ಅವರಿಗೆ ಕೊಟ್ಟು ಕಳಿಸಿದೆ. ಅವರು ಕತೆಗಳನ್ನು ಓದಿ ನೋಡಿ, 'ಚೆನ್ನಾಗಿದೆ, ಆದರೆ ಕಾಗದದ ಮುಗ್ಗಟ್ಟು'ಎಂತ ಉತ್ತರ ಬರೆದರು. ಆದಾದ ಮೇಲೆ ಅವುಗಳನ್ನು ಶ್ರೀಯುತ ಕಾರಂತರವರಿಗೆ ಕಳುಹಿಸಿ 'ಇವುಗಳಲ್ಲಿ ನಿಮಗೆ ಒಳ್ಳೆಯ ಕತೆಗಳೆಂದು ಕಂಡು ಬರುವುವು ಇದ್ದರೆ ಅವನ್ನು ಬೆಳಕಿಗೆ ತರಲು ಸಹಾಯಮಾಡಿ, ಇಲ್ಲದಿದ್ದರೆ ಪ್ರತಿಗಳನ್ನು ಬಿಸಾಕಿಬಿಡಿ' ಎಂತ ಬರೆದೆ.

ಆ ಕತೆಗಳಲ್ಲಿ ೧೪ ಕತೆಗಳ ಸಂಕಲನವೇ ಈ 'ಮಣಿ ಮುತ್ತುಗಳು'.

ಅವರಿಗೆ ಇದಕ್ಕಾಗಿ ನಾನು ಚಿರಋಣಿ. ಅವರು ಕೊಟ್ಟಿರುವ ಧೈರ್ಯದಿಂದ ಉಳಿದ ಕತೆಗಳನ್ನೂ ಓದುಗರು ನೋಡಬಹುದೆಂಬ ಆಶೆಯನ್ನು ನಾನಿಟ್ಟು ಕೊಂಡಿದ್ದೇನೆ

ಈ ಸಂಕಲನದಲ್ಲಿರುವ ಕತೆಗಳಲ್ಲಿ 1) ನನ್ನ ಕನಸು. 2) ಅಳಿಯನ ಕೆಲವು ಪತ್ರಗಳು. 3) ಯಾವುದು ಸರಿ. 4) ಈರದಿಮ್ಮಮ್ಮ. 5) ನನ್ನ ಮದುವೆ.

6) ಮಾಲತಿ ಬರೆದದ್ದು 7) ಕೋಪವೋ ಪ್ರಣಯವೋ. 8) ಯಾರು ಬಲ್ಲರು. 9) ಕಿಟ್ಟಿ ಕತೆ ಎಂಬ 9 ಕತೆಗಳು ನನ್ನ ಸ್ವಯಂಕೃತ. (ಖಂಡಿತವಾಗಿಯೂ ಅಪರಾಧವಲ್ಲ!) ಉಳಿದ ಐದು ಇಂಗ್ಲಿಷಿನಲ್ಲಿ ನಾನು ಓದಿದ ಕತೆಗಳ ಹಿನ್ನಲೆಯನ್ನಿಟ್ಟುಕೊಂಡು ಬರೆದುವು.

ಈ ಕತೆಗಳ ವಿಷಯವಾಗಿ ಇನ್ನೆರಡು ಮಾತು ಹೇಳಬೇಕೆನ್ನಿಸಿದೆ

**ನನ್ನ ಕನಸು-** ಗಂಡು ಹೆಣ್ಣುಗಳಲ್ಲಿ ಒಬ್ಬರು ಪ್ರೀತಿಸಿ ಇನ್ನೊಬ್ಬರು ಪ್ರೀತಿಸದಿದ್ದರೆ ಎಲ್ಲಿಯು ವರೆಗೂ ಅನಾಹುತ ನಡೆಯಬಹುದೆಂಬುದನ್ನು ತೋರಿಸುವ ಚಿತ್ರ.

**ಅಳಿಯನ ಕೆಲವು ಪತ್ರಗಳು-** ಇದು ಒಂದೆರಡು ಸಂಸಾರದಲ್ಲಿ ಕಂಡು ಬಂದ ಒಂದೆರಡು ಅಂಶಗಳನ್ನು ವಿಕಸಿಸಿ ಬರೆದ ಚಿತ್ರ. ಇಂತಹ ಭೀಕರ ದಾರುಣ ದೃಶ್ಯಗಳನ್ನು ಇಂದು ನಾವು ಅನೇಕ ಸಂಸಾರಗಳಲ್ಲಿ ನೋಡಬಹುದು **mere in-compatability** ಯಿಂದಲೂ ಅನುಸರಣೆಯಿಲ್ಲದುದರಿಂದಲೂ ಎಷ್ಟೋ ಸಂಸಾರಗಳು ನಾಶವಾಗಿ ಹೋಗಿವೆ ಒಲ್ಲದಿರುವ ಗಂಡಸಿಗೆ ಅನುಸರಣೆಯಿಲ್ಲದ ಹೆಂಡತಿಯನ್ನು ಬಲಾತ್ಕಾರದಿಂದ ಕಟ್ಟಿ, ಅಥವ ಯೋಗ್ಯಳಾದ ಪತ್ನಿಯ ಮೇಲೆ ಅಯೋಗ್ಯನಾದ ಪತಿಯನ್ನು ಹೊರಿಸಿ, ಅನುಭವಿಸಲಾರದ ಯಾತನೆಯನ್ನು ಪತಿಪತ್ನಿಯರಾಗಿರತಕ್ಕವರೂ, ಅವರಿಗೆ ಸಂಭಂಧಪಟ್ಟವರೂ ನಿರಂತರ ಅನುಭವಿಸುತ್ತಿರುವುದೂ, ಕಾಲೇಜಿನ ವಿದ್ಯಾಭ್ಯಾಸಕ್ಕೂ, ನವನಾಗರಿಕ ರೀತಿಯ ಕುಲಕು ಒನಪು ಒಯ್ಯಾರಗಳ ಬಲೆಗೂ ಬಿದ್ದು, ಮದುವೆಯಾದ ಮೇಲೆ ಒಟ್ಟಿಗಿರಲು ಪ್ರಾರಂಭಿಸಿದೊಡನೆ ಉಪಪತ್ತಿಯು ಸಾಲದಾಗಲು. **Love at firstsight** ಎಲ್ಲ ಮಾಯವಾಗಿ, ಒಬ್ಬರನ್ನೊಬ್ಬರು ಅನುಸರಿಸಲು ಸಾಧ್ಯವಿಲ್ಲದೆ ಹಿಂಸೆಪಡುತ್ತಿರುವ ಪತಿಪತ್ನಿಯರನ್ನೂ ನೋಡುವುದು ಸಾಧಾರಣ ದೃಶ್ಯವಾಗಿದೆ ಈ ಯಾತನೆಯಿಂದ ಹೊರಗಾಗಲು ಇಂದು ನಮ್ಮ ಸಮಾಜವು ಒಂದು ಮಾರ್ಗವನ್ನು ಕಂಡು ಹಿಡಿಯಬೇಕಾಗಿದೆ

**ಯಾವುದು ಸರಿ-** ಎಂಬುದು ಇಂದಿನ ಹಿಂದೂ ಸಮಾಜದಲ್ಲಿ ಪ್ರತಿಯೊಬ್ಬ ತಾರ್ಕಿಕನ (ದಾರ್ಶನಿಕನ) ಕಣ್ಣಮುಂದೆ ನರ್ತನಮಾಡುತ್ತಿರುವ ನಗ್ನ ಪ್ರಶ್ನೆ ಓದಿ ಊಹಿಸಿಕೊಳ್ಳಲು ತಕ್ಕದ್ದೇ ಹೊರತು ಹೇಳತಕ್ಕುದಲ್ಲ.

**ಕೋಪವೋ ಪ್ರಣಯವೋ** ಮತ್ತು **ನನ್ನ ಮದುವೆ** ಎಂಬುವು ಸಾಮಾನ್ಯವಾದ ಪ್ರಣಯ ಚಿತ್ರಗಳು

**ಈರದಿಮ್ಮಮ್ಮ**ನೂ ನಡೆದಿರುವ ಒಂದು ಕತೆಯೆಂದು ಕೋಲಾರ ಡಿಸ್ಟ್ರಿಕ್ಟಿನ ಚಿಕ್ಕ ಬಳ್ಳಾಪುರ ಮತ್ತು ಗೋರಿ ಬಿದನೂರು ತಾಲೂಕಿನವರು ನಂಬು

ತ್ತಾರೆ. ಈ ಎರಡು ಊರುಗಳಿಗೂ ಮಧ್ಯೆ ಒಂದು ಕಣಿವೆ ಇದೆ ಅದಕ್ಕೆ ಈರದಿಮ್ಮಮ್ಮನ ಕಣಿವೆಯೆಂದೇ ಹೆಸರು. ಆ ಕಣಿವೆ ಮುಗಿದೊಡನೆ ಒಂದು ದೇವಸ್ಥಾನ ಇದೆ. ಅದು ಈರದಿಮ್ಮಮ್ಮನ ಹೆಸರಿನಲ್ಲಿ ಕಟ್ಟಿರುವ ದೇವಸ್ಥಾನ. ಅನೇಕರು ಇಂದೂ ಅಲ್ಲಿಗೆ ಹರಕೆ ಹೊತ್ತು ಸಲ್ಲಿಸುವರು ಹಿಂದೆ ನಡಿಯಿತೆಂದು ಪ್ರತೀತಿ ಇರುವ ಅಂಶವೊಂದಕ್ಕೆ, ರೂಪಕೊಟ್ಟು ಮಸಾಲೆ ಸೇರಿಸಿ ಬರೆದಿರುವ ಕತೆ.

**'ಮಾಲತಿ ಬರೆದ ಕತೆ'** 1949ರಲ್ಲು ನಮ್ಮ ಸಮಾಜದಲ್ಲಿ ನಡೆಯುತ್ತಿರುವ, ಹಿಂದೆ ಹೇಳಿದ್ದರೂ ಇಂದೂ ಹೇಳಬೇಕಾದ, ವರ ವಿಕ್ರಯದ ಪ್ರಶ್ನೆ

**ಕಿಟ್ಟುಕತೆ** ಎಂಬುದು ಹೆಂಗಸು ತನ್ನ ಛಲವನ್ನು ತೀರಿಸಿಕೊಳ್ಳಲು ಎಲ್ಲಿಯ ವರೆಗೂ ಹೋಗಬಲ್ಲಳು ಎಂಬುದನ್ನು ತೋರಿಸುವ ಒಂದು ಕತೆ

ಹಿಂದೆ ಕನ್ಯೆಯನ್ನು ಪರಿಗ್ರಹಿಸಬೇಕಾದರೆ ಕನ್ಯಾಶುಲ್ಕವನ್ನು ಕೊಡಬೇಕೆಂಬ ನಿಯಮವಿತ್ತು. ಇಂದು ನಮ್ಮ ಸಮಾಜದಲ್ಲಿ ವರವಿಕ್ರಯವನ್ನೇ ಏಕೆ ಕಾನೂನನ್ನಾಗಿ ಮಾಡಿಬಿಡಬಾರದು!

ಕೊನೆಯದಾಗಿ, ಈ ಸಂಕಲನವನ್ನು, ನಮ್ಮ ಕಣ್ಮುಂದಿನಿಂದ ಅಕಾಲ ಮರಣದಿಂದ ಮರೆಯಾಗಿರುವ ಇಬ್ಬರು ಮಿತ್ರರಿಗೆ ಅರ್ಪಿಸಿದ್ದೇನೆ ಇವರಲ್ಲಿ V R. ಸೀತಾರಾಮಾಚಾರಿಯು Prodigy wrestler ಆಗಿದ್ದು ಅಕಾಲ ಮರಣಕ್ಕೆ ತುತ್ತಾದ; ಯಾವಾಗಲೂ ಹಸನ್ಮುಖಿ, ಹಾಸ್ಯಪ್ರಿಯ ಇತರರನ್ನು ನಕ್ಕು ನಲಿಸಿ, ತಾನೂ ನಗುತ್ತಿದ್ದವನು.

ಇನ್ನೊಬ್ಬ M. G ಯಶೋನಾಥ್. ಪತಂಜಲಿಯ 'ಯಮ'ದ ಕೆಲವು ನಿಯಮಗಳಾದ ಅಹಿಂಸೆ, ಸತ್ಯ, ಅಸ್ತೇಯ, ಅಪರಿಗ್ರಹಗಳನ್ನು ಕಾಯಾ ವಾಚಾ ಮನಸಾ ಪರಿಪಾಲಿಸುತ್ತ ಇನ್ನೊಬ್ಬರ ಹಿತಕ್ಕಾಗಿ ತನ್ನ ಜೀವನವನ್ನೇ ಅರೆಯುತ್ತಿದ್ದವನು.

ಇಂದು ನಮ್ಮಲ್ಲಿ ಎಷ್ಟು ಮಂದಿ ಈ ಯಮದ ಕೆಲವು ನಿಯಮಗಳನ್ನು ಅನುಸರಿಸಲು ಶಕ್ತಿ ಸಾಮರ್ಥ್ಯಗಳಿರಬಲ್ಲವರು!

೫-೫-೧೯೪೯<br>ಶಿಕಾರಿಪುರ

**ತಿ. ಶೇ. ಮಣಿ.**

# ಕಥಾ ಸಂಕಲನ


| | | |
|---|---|---|
| | | ಪುಟ |
| 1. | ನನ್ನ ಕನಸು – – – – | ೧. |
| 2 | ಅಳಿಯನ ಕೆಲವು ಪತ್ರಗಳು – – | ೧೨. |
| 3. | 'ಮತ್ತೆ' – – – – – | ೩೨. |
| 4. | ಯಾವುದು ಸರಿ! – – – – | ೪೨. |
| 5 | ಕೋಪವೋ, ಪ್ರಣಯವೋ – – | ೬೦. |
| 6. | ಚಿಕ್ಕೀ ಪರಿಣಯ. – – – | ೭೩. |
| 7. | ವೀರ ಚೆನ್ನೀನ ಹಳ್ಳಿ. – – – | ೯೩. |
| 8. | ಈರದಿಮ್ಮಮ್ಮ – – – – | ೧೦೯. |
| 9. | ನನ್ನ ಮದುವೆ – – – – | ೧೨೫. |
| 10. | ಮಾಲತಿ ಬರೆದ ಕತೆ. – – – | ೧೪೩. |
| 11. | ಯಾರು ಹೆಚ್ಚು. – – – – | ೧೬೬. |
| 12. | ಯಾರು ಬಲ್ಲರು! – – – – | ೧೮೬. |
| 13. | ಕಿಟ್ಟು ಕತೆ – – – – | ೧೯೪. |
| 14. | ಮಣಿ – – – – – | ೨೧೯. |




# ಮುನ್ನುಡಿ

ಶ್ರೀಮಾನ್ ಮಣಿಯವರು ತಮ್ಮ ಕೆಲವು ಸಣ್ಣ ಕತೆಗಳನ್ನು ನನ್ನ ಪರಿಶೀಲನೆಗೆ ಕಳುಹಿಸುವುದಾಗಿ ಬರೆದರು ಆಯಿತೆಂದೆ ಸಾಮಾನ್ಯವಾಗಿ ಅನೇಕ ಹೊಸ ಬರಹಗಾರರು ಆ ರೀತಿ ಕಳುಹಿಸುವುದುಂಟು ಹೂಂ—ಎಂದು, ಬರಹ ಓದಿ ಬೇಸರ ಉಂಟಾಗುವುದೂ ಇದೆ. ಇವರ ಬರಹಗಳು ಬಂದಾಗ, ನಾನಾದರೂ ಹೆಚ್ಚಿನ ಆಸೆ ಇಟ್ಟುಕೊಂಡಿರಲಿಲ್ಲ ಒಮ್ಮೆಗೇ ೫೦ ಕತೆಗಳ ಕಟ್ಟು ಬಂದು ನನ್ನನ್ನು ತಬ್ಬಿಬ್ಬಾಗಿ ಮಾಡಿತು. ಓದತೊಡಗುವುದಕ್ಕೇ ಕೆಲವು ದಿನ ತೆಗೆದೆ

ಕೊನೆಗೆ ಒಂದು ಗಳಿಗೆಯಲ್ಲಿ ಅವನ್ನು ಓದತೊಡಗಿದೆ ಕತೆಗಳ ಸವಿ, ಓಟ ಅನುಭವ, ರೀತಿ, ಎಲ್ಲವನ್ನು ತಿರುವಿಹಾಕುವಂತೆ ಮಾಡಿದುವು. ಶ್ರೀ ಮಣಿಯವರು ತಮ್ಮ ೧೫ ವರ್ಷಗಳ ಮೇಲಿನ ಬರಹಗಳನ್ನು ಇಷ್ಟು ದಿನ ಬಚ್ಚಿಟ್ಟುದಾಗಲಿ, ಅವು ಈ ತನಕ ಬೆಳಕನ್ನು ಕಾಣದೆ ಹೋದುದಾಗಲಿ ಆಶ್ಚರ್ಯ ಹುಟ್ಟಿಸಿತು. ಇದು ಅವರ ಸಂಯಮದ ಮಹಿಮೆಯೋ ಅಥವಾ–ನಮ್ಮ ಜನರ ವಾಚನಾಭಿರುಚಿಯ ಇಲ್ಲವೆ ಪ್ರೋತ್ಸಾಹ ಶೂನ್ಯತೆಯ ಮಹಿಮೆಯೋ

ಈ ಸಂಕಲನ ನನ್ನಿಷ್ಟದಂತೆ ಆರಿಸಿಕೊಂಡದ್ದು ವೈವಿಧ್ಯಕ್ಕಾಗಿ, ಅದರಲ್ಲೂ ದಾಂಪತ್ಯ ಜೀವನದ, ಶೃಂಗಾರ ಜೀವನಗಳ ವಿವಿಧ ರೂಪಗಳನ್ನು ಕೊಡಬಲ್ಲ ಕತೆಗಳನ್ನು ಆರಿಸಿಕೊಂಡು ನಾನೇ ಅವುಗಳ ಪ್ರಕಾಶಕನಾಗಲು ಒಪ್ಪಿದೆ. ಇದು ಹೊಸ ಲೇಖಕರಿಗೆ ಪ್ರೋತ್ಸಾಹವೆಂದೂ ನನಗೆ ಅನಿಸುವುದಿಲ್ಲ. ಈ ತೆರನ ಬರವಣಿಗೆ ತನ್ನ ಯೋಗ್ಯತೆಯ ದೆಸೆಯಿಂದಲೇ, ನನ್ನ ಮುನ್ನುಡಿಯ ಬೆಂಬಲವಿಲ್ಲದೆಯೆ ನಿಲ್ಲಬಲ್ಲುದು ಎಂದು ನನಗೆ ಅನಿಸುತ್ತದೆ

ಮಣಿಯವರ ಚಿತ್ರಣ ರೀತಿ ಸರಳವಾದದ್ದು ಅನುಭವದ ಹಿನ್ನೆಲೆಯಿಂದ ಬೆಳೆದು ಬಂದುದು ಹೊಂದಿಸಿಕೊಂಡ ಕತೆಗಳಲ್ಲೂ ನಮ್ಮ ನಾಡಿಗೆ ಹೊಂದುವ ಆವರಣ ಕಲ್ಪಿಸಿ ಕೊಟ್ಟುದು ಕಾಣುತ್ತದೆ ಅಲ್ಲದೆ ಮನಶ್ಶಾಸ್ತ್ರದ ಸಹಜ ವಿಕಾಸ ಕಥಾ ವ್ಯಕ್ತಿಗಳಲ್ಲಿ ಕಾಣುತ್ತದೆಯೆಂದು ನನಗನಿಸುತ್ತದೆ. ಕನ್ನಡ ಸಣ್ಣ ಕತೆಗಳಲ್ಲಿ ಇವು “ಮುತ್ತುಗಳೇ”

ಒಂದು ಹೆಣ್ಣನ್ನೂ ಒಂದು ಗಂಡನ್ನೂ ಸೇರಿಸಿ, ಬಿಡಿಸಿ, ಆಡಿಸಿ, ಓಡಿಸಿದರೆ–ಕತೆಯಾಗುತ್ತದೆ ಎಂದು ಸುಲಭ ಕಥಾಸಾಹಿತ್ಯ ನಿರ್ಮಾಣದ ದಿನದಲ್ಲಿ––ಕಲಾವಿದನ ಪ್ರೇಮ–ವಿರಹ–ಶೃಂಗಾರಗಳ ಪಾಕ ಹೇಗೆ ಇರುತ್ತದೆ ಎಂಬುದರ ಬಗ್ಗೆ ಇಲ್ಲಿ ಯೋಗ್ಯ ನಿದರ್ಶನ ಕಾಣುತ್ತದೆ. ಈ ಲೇಖಕ, ಅಪರಾಧಿಗಳ ಸಲುವಾಗಿಯೂ ಮರುಗುವ ಹೃದಯವುಳ್ಳವನು

೩೦ – ೬ – ೪೯

ಪುತ್ತೂರು

ಇತಿ

**ಶಿವರಾಮ ಕಾರಂತ**

# ಮಣಿ-ಮುತ್ತುಗಳು

## 1. ನನ್ನ ಕನಸು

೧

**ಎನ್ನಿನಿಯೆ,**

ನಿನ್ನನ್ನು ನಾನು ಪ್ರೀತಿಸುತ್ತೇನೆ; ಅದೇಕೆ ನಿನ್ನನ್ನು ಪ್ರೀತಿಸುತ್ತೇನೋ, ಅದೇಕೆ ನಿನ್ನನ್ನೇ ಪ್ರೀತಿಸಬೇಕೋ ಅದನ್ನು ನಾನು ಹೇಳಲು ಸಾಧ್ಯವಿಲ್ಲ. ನೀನು ನನ್ನ ಕುಲದವಳಲ್ಲ; ನನ್ನ ಅಂತಸ್ತಿನವಳಲ್ಲ; ನಿನ್ನ ಊರು, ಹೆಸರುಗಳನ್ನರಿಯೆ. ಆದರೂ ನಿನ್ನನ್ನು ನಾನು ಪ್ರೀತಿಸುತ್ತೇನೆ ಪ್ರೀತಿಸುವುದೆಂದರೆ ಹೃತ್ಪೂರ್ವಕವಾಗಿ. ಕೇವಲ ದೈಹಿಕಹೃತ್ಪಿಪಾಸೆಯ ತಣಿಕೆಗಾಗಿ ಅಲ್ಲ ಇಷ್ಟು ಮಾತ್ರದಿಂದಲೇ ನಿನ್ನನ್ನು ನಾನು ಎಷ್ಟು ಪ್ರೀತಿಸುತ್ತೇನೆಂದು ಅರಿಯುವ ವಿದ್ಯಾಬುದ್ಧಿಗಳು ನಿನಗಿವೆಯೆಂದು ನನಗೆ ತಿಳಿದಿದೆ. ನೀನು ಅವಿದ್ಯಾವತಿಯಲ್ಲ. ಹೇಳಿದುದನ್ನು ಅರಿತುಕೊಳ್ಳುವ ಶಕ್ತಿಯಿಲ್ಲದೆ ಇಲ್ಲ.

ಮನುಷ್ಯನ ಹೃದಯವು ಇರುವುದಾದರೂ ಎಷ್ಟು? ಒಂದು ಹಿಡಿಯಷ್ಟು ತಾನೆ! ಆದರೆ ಪೂರ್ತಾ ಆ ಹಿಡಿಯಷ್ಟು ನಿನ್ನನ್ನು ಪ್ರೀತಿಸುತ್ತೇನೆ. ಅದರಲ್ಲಿ ಇನ್ನಾರಿಗೂ ಸ್ಥಳವಿಲ್ಲ.

ನನ್ನ ವಿಚಾರ ನಿನಗೇನೂ ಗೊತ್ತಿರಲಾರದು ನನಗೆ ಇರುವ ವಿದ್ಯೆಯೂದರೂ ಅಷ್ಟೇ ಇದೆ. ಆದರೆ ಪ್ರಪಂಚದ ವ್ಯವಹಾರ ಜ್ಞಾನ ಉಂಟು ನಾನು ಸಂಸಾರ ಸಮೇತ ಉಂಡುಟ್ಟು, ಇತರರಿಗೆ ಧಾರಾಳವಾಗಿ ಕೊಡುವಷ್ಟು ದೇವರು ನನಗೆ ಕೊಟ್ಟಿದ್ದಾನೆ

ಇದು ವರೆಗೂ ನನಗೆ ಮದುವೆಯಾಗಿಲ್ಲ. ಮದುವೆಮಾಡಿಕೊಳ್ಳೆಂದು ನಮ್ಮವರು ಬಲವಂತ ಮಾಡುತ್ತಿರುತ್ತಾರಾದರೂ ಇನ್ನೂ ಮದುವೆಯಾಗಿಲ್ಲ. ನಿನ್ನನ್ನು ನೋಡುವ ವರೆಗೆ ಮದುವೆಯಾಗಬೇಕೆಂಬ ಇಚ್ಛೆಯೂ ಇರಲಿಲ್ಲ. ನಿನ್ನನ್ನು ಕಂಡಾಗಿನಿಂದ ನನ್ನ ಮನಸ್ಸು ನಿನ್ನಲ್ಲೇ ನೆಲೆಗೊಂಡಿದೆ. ಅದೇಕೆ ಹಾಗಾಯಿತೋ ನಾನು ಹೇಳಲಾರೆ. ನಿನ್ನನ್ನು ನಿನ್ನ ರೂಪಿಗಾಗಲಿ

ನಿನ್ನ ಪ್ರಾಯಕ್ಕಾಗಲಿ ನಿನ್ನ ಅಷ್ಟೈಶ್ವರ್ಯಗಳಿಗಾಗಲಿ ಪ್ರೀತಿಸುತ್ತಿಲ್ಲ. ನೀನು ತನಗೆ ಬೇಕು ಎಂತ ನನ್ನ ಅಂತರಾತ್ಮ ನುಡಿಯುತ್ತಿದೆ. ನೀನೇ ನನ್ನ ಸರ್ವಸ್ವ. ನನಗೆ ಬೇಕಾದವಳು ನೀನು ಮಾತ್ರ. ಅಯಸ್ಕಾಂತವು ಕಬ್ಬಿಣವನ್ನು ತನ್ನ ಬಳಿಗೆ ಸೆಳೆಯುವಂತೆ ನೀನು, ಅದಾವ ನಾನರಿಯದ ನಿನ್ನ ಮಹತ್ವದಿಂದಲೋ, ನನ್ನನ್ನು ನಿನ್ನ ಬಳಿಗೆ ಸೆಳೆಯುತ್ತಿರುವೆ.

ಇಷ್ಟೇ ಅಲ್ಲ-ಹಗಲೂ ರಾತ್ರಿಯೂ ನಿನ್ನ ಧ್ಯಾನದಲ್ಲಿಯೇ ಕಳೆಯುತ್ತಿರುತ್ತೇನೆ. ನಿನ್ನನ್ನು ಧ್ಯಾನಿಸುವಷ್ಟು ಏಕಾಗ್ರಚಿತ್ತದಿಂದ ಆ ಪರಮಾತ್ಮನನ್ನು ಧ್ಯಾನಿಸಿದ್ದರೆ, ಇದುವರೆಗಾಗಲೇ ನನಗೆ ಆತನಲ್ಲಿ ಐಕ್ಯವಾಗುವ ಸುಯೋಗ ಒದಗುತ್ತಿತ್ತು. ನೀನು ನನ್ನ ಸಮೀಪದಲ್ಲಿಲ್ಲದಿದ್ದರೂ, ನೀನು ನನ್ನ ಬಳಿಯಲ್ಲಿಯೇ ನನ್ನ ಬಾಹುಗಳಲ್ಲಿ ಬಂಧಿತಳಾಗಿರುವಂತೆಯೇ ನಾನು ಭಾವಿಸಿಕೊಂಡು ಆನಂದ ಸಾಮ್ರಾಜ್ಯದಲ್ಲಿ ಮುಳುಗಿ ತೇಲಾಡುತ್ತಿದ್ದೇನೆ. ಇದು ಹೇಗೆ ಸಾಧ್ಯವೆಂದು ಕೇಳಬಹುದು. ಆತ್ಮಸಾಕ್ಷಾತ್ಕಾರ ಮಾಡಿಕೊಂಡಿರುವ ಮಹಾಮಹಿಮರು ಭಗವಂತನನ್ನು ಸೇರಿರುವಂತೆ!

ಹೆಚ್ಚಿಗೆ ಬರೆಯಲು ಶಕ್ತನಲ್ಲ. ನನ್ನ ಹೃದಯದಲ್ಲಿನ ಭಾವನೆಗಳನ್ನೆಲ್ಲ ನಿನ್ನ ಮುಂದಿಡುವ ಸುಯೋಗವನ್ನು ದೇವರು ಯಾವಾಗ ಕೊಡುವನೊ! ಈಗ ಅದು ಸಾಧ್ಯವಿಲ್ಲದಿರುವುದರಿಂದ, ಪತ್ರ ಇಷ್ಟು ಮಾತ್ರ ಬರೆದಿದ್ದೇನೆ.

ಅವನು ತನಗೆ ಪತ್ರ ಬರೆಯಲು ಎಷ್ಟು ಧೈರ್ಯ, ಅವನು ಎಷ್ಟು ಧೂರ್ತನಿರಬೇಕು, ಎಂದು ದಯವಿಟ್ಟು ಭಾವಿಸಬೇಡ,-ಕಂಡೆಯಾ.

ಈ ದೇಹ, ಈ ಆತ್ಮ ಸಮರ್ಪಿಸಿ ಶಿವಾರ್ಪಣವಾಯಿತೆಂದು ತಿಳಿದಿದ್ದೇನೆ.

## ೨

**ದೇವಿ,**

ನನ್ನಲ್ಲಿ ನಿನಗೆ ಇನ್ನೂ ಅನುಮಾನವೆ! ನನ್ನ ಪತ್ರದಿಂದ ನನ್ನ ಮೇಲೆ ನಿನಗೆ ವಿಶ್ವಾಸ ಹುಟ್ಟಲಿಲ್ಲವೆ! ನನ್ನ ಹೃದಯವನ್ನು ಸೀಳಿ ಅದರಿಂದ ಜನಿಸುವ ಭಾವನಾತರಂಗಗಳನ್ನು ನೀನು ಓದಲು ಅನುಕೂಲವಾಗು

ವಂತೆ ನಿನ್ನ ಮುಂದಿಡುವ ಶಕ್ತಿ ಎನಗಿದ್ದರೆ! ನೀನೆನ್ನನ್ನು ಪ್ರೀತಿಸಿದರೂ ಸರಿಯೆ, ಪ್ರೀತಿಸದಿದ್ದರೂ ಸರಿಯೆ, ನಾನು ನಿನ್ನನ್ನು ಪ್ರೀತಿಸುತ್ತೇನೆ. ನಾನು ನಿನ್ನನ್ನು ಪ್ರೀತಿಸುವುದರಿಂದಲಾದರೂ ನೀನೆನ್ನನ್ನು ಪ್ರೀತಿಸುವಂತಾಗಲಿ! ನೀನೆನ್ನನ್ನು ನಂಬದಿದ್ದರೂ ಸರಿಯೆ, ನಾನು ನಿನ್ನನ್ನು ನಂಬಿದ್ದೇನೆ.

ಉಳಿದರೂ ನಿನ್ನಿಂದ ಉಳಿಯಬೇಕು!
ಅಳಿದರೂ ನಿನ್ನಿಂದ ಅಳಿಯಬೇಕು!!

೬

**ಮತ್ಪ್ರಿಯತಮೆ,**

ಈ ದಿನ ನೀನು ನನ್ನ ಮೇಲೆ ಮುನಿಸುಕೊಂಡಾಗ ನೀನೆಷ್ಟು ಸುಂದರಿಯಾಗಿ ಕಂಡು ಬಂದೆ, ಗೊತ್ತೆ! ನಿನ್ನ ಪ್ರಶಂಸೆಯೇ ನನ್ನ ಜೀವದ ಉಸಿರಾಗಿರುವಂತೆ ನನಗೆ ತೋರುತ್ತಿದೆ. ಆದರೆ ಅದು ಹೊಗಳುಭಟ್ಟರ ಪ್ರಶಂಸೆಯಲ್ಲ. ನೀನು ಕೋಪಗೊಂಡಾಗ ಒಂದು ಕ್ಷಣಕಾಲ ನಿನ್ನ ಕಪ್ಪು ಕಣ್ಣು ಹೊಳೆದುವು—ಕಗ್ಗತ್ತಲೆಯ ರಾತ್ರೆ ಮಿಂಚು ಹೊಳೆಯುವಂತೆ! ಆ ದೃಶ್ಯವನ್ನು ನಾನು ಮರೆಯಲು ಸಾಧ್ಯವೇ! ಆ ನೋಟವನ್ನು ನನ್ನ ಕಣ್ದಣಿಯೆ ನೋಡಿದೆ.

ನಿನ್ನ ನೋಟದ ಭಾವವೇನು! ನಾನು ನಿನ್ನನ್ನು ಪ್ರೀತಿಸಕೂಡದೆಂದೇನು? ನಾನು ಈ ರೀತಿ ನಿನಗೆ ಪತ್ರ ಬರೆಯಕೂಡದೆಂದೇನು! ನಾನು ನಿನ್ನನ್ನು ಹಿಂಬಾಲಿಸಿ ನೀನಿರುವ ಮಂದಿರದ ತನಕ ಬರಕೂಡದೆಂದೇನು!

ನಿನ್ನನ್ನು ಪ್ರೀತಿಸುವುದು ತಪ್ಪೇ! ನಾನು ಇನ್ನೂ ಅವಿವಾಹಿತ. ನಿನ್ನ ಜೀವನದಿಂದ ನೀನೂ ಅವಿವಾಹಿತೆಯೆಂದು ನಾನು ನಂಬಿದ್ದೇನೆ. ನಿನ್ನನ್ನು ಸಂರಕ್ಷಿಸುವ ಯೋಗ್ಯತೆ ನನಗಿದೆ. ನಿನ್ನನ್ನು ಮದುವೆಯಾಗಿ ನಿನ್ನನ್ನು ಸುಖವಾಗಿರಿಸಿ ನಾನೂ ಸುಖಪಡಬೇಕೆಂಬ ಆಸೆ ನನಗಿದೆ. ಇದು ತಪ್ಪೆ! ಇದು ಮಹಾಪರಾಧವೆಂದೇ ಇಟ್ಟುಕೊಳ್ಳೋಣ. ಆದರೂ ನಿನ್ನನ್ನು ನಾನು ಪ್ರೀತಿಸುತ್ತೇನೆ. ಏಕೆ ಗೊತ್ತೆ? ನಿನ್ನನ್ನು ಪ್ರೀತಿಸದಿರುವುದು, ನಿನ್ನ ಮೂರ್ತಿಯನ್ನು ನನ್ನ ಹೃದಯ ಮಂದಿರದಿಂದ ಕಿತ್ತು ದೂರವಿಡುವುದು, ನಿನ್ನಿಂದ ಸಾಧ್ಯವಿಲ್ಲ. ನನ್ನಲ್ಲಿ ಅಡಗಿರುವ ನನ್ನ ಶಕ್ತಿಗೆ ಮೀರಿದ ಇನ್ನೊಂದು ಶಕ್ತಿ

ನಿನ್ನನ್ನು ಪ್ರೀತಿಸುವಂತೆ ನನಗೆ ಬೋಧಿಸುತ್ತಿದೆ. ಪ್ರೀತಿಸುವುದು ತಪ್ಪೇ! ಎಂದಿಗೂ ಇಲ್ಲ! ನಿನ್ನಿಂದ ನಾನು ಏನೂ ಬಯಸುವುದಿಲ್ಲ. ಪ್ರೀತಿಯು ಆತ್ಮಯಜ್ಞ. ಅದು ನಾವು ಇನ್ನೊಬ್ಬರಿಗೆ ಎಷ್ಟು ಕೊಡಬಲ್ಲೆವೆಂಬುದನ್ನು ತೋರಿಸುವುದೇ ಹೊರತು, ಇತರರಿಂದ ನಾವು ಎಷ್ಟು ಹೊಂದುತ್ತೇವೆಂದಾಗಲೀ, ಎಷ್ಟು ಹೊಂದಬೇಕೆಂಬ ಆಸೆ ಉಂಟೆಂಬುದನ್ನಾಗಲೀ ಸೂಚಿಸುವುದಿಲ್ಲ.

ನಿನ್ನನ್ನು ನಾನು ಪ್ರೀತಿಸುತ್ತೇನೆ. ಅದಕ್ಕಾಗಿ ನಿನ್ನಿಂದ ನಾನು ಏನನ್ನೂ ಬಯಸುವುದಿಲ್ಲ. ಈ ವಿಷಯವನ್ನು ನನ್ನೊಡನೆ ಜತೆಗೆ ಒಯ್ಯಬೇಕೆಂದು ನನ್ನ ಇಷ್ಟವಾಗಿತ್ತು. ಆದರೆ ನೀನಿನ್ನೂ ಕನ್ಯೆಯೆಂಬ ವಿಷಯ ಅರಿತು, ನಾನು ನಿನ್ನ ಹೃದಯವನ್ನು ಹೊಂದುವೆನೆಂಬ ಆಸೆಯಿಂದ, ಈ ರೀತಿ ಬರೆದಿರುತ್ತೇನೆ. ಇದರಿಂದ ನಿನ್ನನ್ನು ನಾನು ಹಿಂಸಿಸುತ್ತೇನೆಂದು ನೀನು ಭಾವಿಸಕೂಡದು. ನನ್ನ ಆರಾಧ್ಯ ದೇವತೆಯನ್ನು ನಾನು ಹಿಂಸಿಸಲೆ!

೬

**ಪ್ರಾಣಾಧಿಕೆ,**

ನನ್ನೊಡನೆ ಮಾತನಾಡಿದರೆ ಅಥವಾ ನನ್ನೊಡನೆ ಪತ್ರವ್ಯವಹಾರ ನಡೆಯಿಸಿದರೆ, ಸಮಾಜದ ದೋಷಾರೋಪಣೆಗೆ ಅವಕಾಶಕೊಡಬೇಕಾಗುವುದೆಂದು, ನನ್ನೊಡನೆ ಸಂಭಾಷಿಸಲಾಗಲೀ, ಅಥವಾ ಪತ್ರವ್ಯವಹಾರ ನಡೆಸುವುದಕ್ಕಾಗಲಿ, ನಿನಗೆ ಇಷ್ಟವಿಲ್ಲವೆ!

ಅಥವ ನೀನೆನ್ನನ್ನು ಪ್ರೀತಿಸುವುದಿಲ್ಲವೆ? ನನ್ನ ಮನಸ್ಸಿನಲ್ಲಿ ಸಂಶಯವಿಕಾರವು ಕುಣಿದಾಡುವುದಕ್ಕೆ ಎಡೆಕೊಡುವ ಬದಲು, ಸ್ಪಷ್ಟವಾಗಿ ತಿಳಿಸಲಾರೆಯಾ? ಪ್ರತಿದಿನ ನಿನ್ನನ್ನು ಹಿಂಬಾಲಿಸಿ ಬರುವುದು ಸೂಕ್ತವಲ್ಲವೆಂದು ನನಗೆ ತೋಚುತ್ತದೆ. ಎನ್ನದೇವತೆಯೆ, ನಾವು ನಮ್ಮ ಅಂತರಾತ್ಮಕ್ಕೆ ಹೆದರಿ ನಡೆಯಬೇಕೇ ಹೊರತು ಸಮಾಜಕ್ಕೆ ಯಾಕೆ ಹೆದರಬೇಕು? ಸಮಾಜವಾವುದು? ಆರಿಗೆ? ನಮ್ಮಿಂದಲೇ ಅಲ್ಲವೆ, ಸಮಾಜ. ನಮಗಾಗಿಯೇ ಅಲ್ಲವೆ, ಸಮಾಜ. ನಾವು ಮಾಡಿರುವ ಸೂತ್ರಗಳೇ

ಅಲ್ಲವೆ ಸಮಾಜ ಸೂತ್ರಗಳು. ನಾವು ಅಂತಸ್ಸಾಕ್ಷಿಯಾಗಿ ನಡೆದು ಅದರಿಂದ ಇನ್ನೊಬ್ಬರಿಗೆ ತೊಂದರೆಯಾಗದಿದ್ದರೆ ಅದು ಪಾಪವಲ್ಲ. ಅದನ್ನು ಪಾಪವೆಂದು ಸಮಾಜ ಭಾವಿಸಿದರೆ, ಅಂತಹ ಸಮಾಜದಲ್ಲಿ ಏನೋ ದೋಷವಿರಬೇಕು. ಅಂತಹ ಸಮಾಜವನ್ನು ಸರಿಪಡಿಸಬೇಕು.

ಎನ್ನ ಮನದನ್ನೆ, ಇದಕ್ಕಿಂತ ಹೆಚ್ಚಿಗೆ ಬರೆಯುವ ಇಷ್ಟವೆನಗಿಲ್ಲ. ಅದಕ್ಕೆ ಕಾರಣವನ್ನು ಹೇಳುತ್ತೇನೆ. ನನ್ನ ಭಾವನೆಗಳು ನಿನ್ನ ಮನೋಭಾವನೆಯನ್ನು ಮಾರ್ಪಡಿಸಕೂಡದು ನಿನಗೆ ವಿದ್ಯೆಯಿದೆ, ಬುದ್ಧಿಯಿದೆ, ಸ್ವಂತವಾಗಿ ಯೋಚಿಸುವ ಶಕ್ತಿಯಿದೆ.

ನೀನಾಗಿ ನೀನು ಉತ್ತರ ಕೊಡುವುದಾದರೆ ಬಹಳ ಸಂತೋಷ.

೫

**ಮನೋಹರೆ,**

ಇಷ್ಟಾದರೂ ನನ್ನ ಕಾಗದಗಳಿಗೆ ಉತ್ತರವಿಲ್ಲ ನಿನಗೆ ಆಲಸ್ಯವೇ? ದೇಹಕ್ಕೋ, ಮನಸ್ಸಿಗೋ? ಅಥವ ನನ್ನೊಡನೆ ಮಾತನಾಡುವುದಕ್ಕೆ ನಿನಗೆ ಇಷ್ಟವಿಲ್ಲವೋ? ನನ್ನ ದೇಹ ನನ್ನ ಮನೆಯಲ್ಲಿದೆ. ಆದರೆ ನನ್ನ ಆತ್ಮ! ನಿನ್ನ ಬಳಿಯಲ್ಲಿದೆ. ನೀನಿರುವ ಕೊಠಡಿಯ ಕಿಟಕಿಯಿಂದ ನಿನ್ನ ಬಳಿಗೆ ಬಂದು ನೀನು ಕುಳಿತಿರುವ ಕುರ್ಚಿಯ ಪಕ್ಕದಲ್ಲಿ ನಿಂತಿದೆ.

ಈ ಆತ್ಮವು ಇನ್ನೆಷ್ಟು ಕಾಲ ತಾನೆ ಈ ಅನುಮಾನವನ್ನು ತಡೆದೀತು?

ನನ್ನ ಮೇಲೆ ನಿನಗೆ ಕೋಪವೇ? ನಿನ್ನ ಮನಸ್ಸಿಗೆ ಅಸಮಾಧಾನವುಂಟಾಗುವ ಕೆಲಸವನ್ನೇನಾದರೂ ಮಾಡಿರುವೆನೆ? ದಯವಿಟ್ಟು ತಿಳಿಸು. ಈ ಕ್ಷಣ ನನ್ನ ತಪ್ಪನ್ನು ತಿದ್ದಿಕೊಳ್ಳುತ್ತೇನೆ. ನಿನಗಾಗಿ ಯಾವ ಶಿಕ್ಷೆಯನ್ನಾದರೂ ಅನುಭವಿಸಲು ಸಿದ್ಧನಾಗಿರುತ್ತೇನೆ. ನಿನ್ನನ್ನು ಪ್ರೀತಿಸುತ್ತೇನೆಂದು ತೋರಿಸಲು ನನ್ನ ಹೃದಯವನ್ನಾದರೂ ಬಗೆದು ನಿನ್ನ ಮುಂದಿಡಲೆ? ಪ್ರಿಯೆ, ನೀನೆನ್ನ ಕಣ್ಬೆಳಕು! ನನ್ನ ಜೀವದ ಜೀವ! ನಿನ್ನನ್ನು ನೋಡದಿದ್ದರೆ, ನಿನಗೆ ಬರೆಯದಿದ್ದರೆ, ನನ್ನ ವಿಚಾರವಾಗಿ ಚಿಂತಿಸದಿದ್ದರೆ ನನ್ನ ಜೀವವನ್ನು ಹಿಂಡಿದಂತಾಗುತ್ತೆ.

ಎನ್ನ ಜೀವನ ಸರ್ವಸ್ವ, ನನ್ನ ಪ್ರಾರ್ಥನೆಯನ್ನು ಲಾಲಿಸಿ, ನನ್ನನ್ನು

ಉದ್ಧಾರಮಾಡು. ನನ್ನನ್ನು ಕೊರೆಯಬೇಡ! ನಾನು ಮೋಸಗಾರನಲ್ಲ, ದ್ರೋಹಿಯಲ್ಲ, ವಂಚನೆಮಾಡುವವನಲ್ಲ.

೬

**ಇನಿಯೆ,**

ಎನ್ನ ದೈವವೆ, ಕುಲೀನ ಹೆಣ್ಣುಮಕ್ಕಳಿಗೆ ಕಾಗದ ಬರೆಯುವುದೂ, ಅವರನ್ನು ಹಿಂಬಾಲಿಸುವುದೂ, ಅವರನ್ನು ಮಾತನಾಡಿಸಲು ಪ್ರಯತ್ನಿಸುವುದೂ ಅಯೋಗ್ಯರ ಕೆಲಸವೆಂದೂ ಅದು ಕ್ಷೇಮಕಾರಿಯಲ್ಲವೆಂದೂ ಇತರರ ಹೆಣ್ಣುಮಕ್ಕಳನ್ನು ಅಕ್ಕ ತಂಗಿಯರಂತೆ ಭಾವಿಸಬೇಕೆಂದೂ ನಾನು ಹಿಂಬಾಲಿಸುತ್ತಿರುವ, ಕಾಗದ ಬರೆದು ಹಿಂಸಿಸಿತ್ತಿರುವ ಹೆಣ್ಣು ಮಗಳ ಚಿಂತೆ ಬಿಡಬೇಕೆಂದೂ ನನಗೆ ಈ ದಿನ ಬೇನಾಮ್ ಕಾಗದ ಬಂದಿರುತ್ತೆ.

ಅದರಿಂದ ಒಂದು ಕಡೆ ನನ್ನ ಮನಸ್ಸಿಗೆ ಸಂತೋಷ, ಇನ್ನೊಂದೆಡೆ ಯಾತನೆ. ನನ್ನ ಪತ್ರಗಳಿಗೆ ಉತ್ತರ ಬಂತಲ್ಲ ಎಂಬ ಸಂತೋಷ. ನನ್ನ ಒಂದೇ ಒಂದು ಆಸೆ ಮಣ್ಣುಗೂಡುವುದರಲ್ಲಿದೆ ಎಂದು ಯಾತನೆ.

ಆ ಕಾಗದಕ್ಕನುಸಾರವಾಗಿ ನಾನು ನಿನ್ನನ್ನು ನೋಡುವಂತೆಯೇ ಇಲ್ಲ! ನೀನಿರುವ ಕಡೆ ಬಂದು ನೋಡಲು ನಾನು ನಿನ್ನ ಸಂಟನಲ್ಲ! ನಾನು ವಿದ್ಯಾರ್ಥಿ ಮಂದಿರಕ್ಕೆ ಬಂದುದು ನೀನು ನೋಡಿ, ಸಂತೋಷದಿಂದಲೋ, ನನ್ನಮೇಲಿನ ಆಕ್ರೋಶದಿಂದಲೋ, ಬೇರಾವ ಕಾರಣದಿಂದಲೋ ನನ್ನನ್ನು ನೋಡಲು ಇಷ್ಟಪಡುವುದಿಲ್ಲವೆಂಬ ವಿಷಯ, ಮಂದಿರದ ಅಧಿಕಾರಿಣಿಗೆ ತಿಳಿದರೆ ನಾನು ಪಡಬೇಕಾದ ಅವಮಾನ ಅರ್ಧಚಂದ್ರ ಪ್ರಯೋಗವಲ್ಲವೆ! ನಿನ್ನನ್ನು ಇನ್ನೆಲ್ಲಿ ನೋಡಲು ಸಾಧ್ಯ! ರಸ್ತೆಯಲ್ಲಿ ಸಂಧಿಸಿದರೆ ನನ್ನನ್ನು ನೀನು ಗುರ್ತಿಸುವುದೇ ಇಲ್ಲ! ಅಲ್ಲವೆ ರಸ್ತೆಯಲ್ಲಿ ಮಾತನಾಡಿಸುವುದು ನಮ್ಮಿಬ್ಬರ ಗೌರವಕ್ಕೂ ಕಮ್ಮಿಯಲ್ಲವೆ! ನನ್ನ ಮನೆಗೆ ಬರುವೆಯಾ? ನನ್ನ ತಂಗಿಯು ನಿನ್ನನ್ನು ಆದರಿಸಿ ಉಪಚರಿಸುವಳು ನಿನಗೆ ಅಷ್ಟು ಧೈರ್ಯವಿದೆಯೆ! ನಿನ್ನ ಒಪ್ಪಿಗೆಯಿಲ್ಲದೆ ನೀನುಊರಿಗೆ ಹೋದಾಗ ಅಲ್ಲಿಗೆ ಬರಲೆ? ನಿನ್ನ ತಂದೆತಾಯಿ ಅಣ್ಣತಮ್ಮಂದಿರು, ಅಕ್ಕತಂಗಿಯರು, ಅತ್ತಿಗೆಯರು ನಿನ್ನನ್ನೂನನ್ನನ್ನೂಅನುಮಾನದಿಂದ ನೋಡುವುದಿಲ್ಲವೆ? ಅವರು ನನ್ನನ್ನು

ನಿಕೃಷ್ಟವಾಗಿ ಕಂಡರೂ ಚಿಂತೆಯಿಲ್ಲ. ಆದರೆ ನನ್ನ ಹೃದಯದಧಿಷ್ಠಾತ್ರಿಯಾದ ನಿನ್ನನ್ನು ಗೌರವಿಸದಿದ್ದರೆ ನನಗೆ ಯಾತನೆಯಾಗುವುದು.

ನೀನು ಒಪ್ಪಿದರೆ ನಾನು ಬರುತ್ತೇನೆ. ನಿನ್ನ ಹಿರಿಯರೊಡನೆ ಮಾತನಾಡುತ್ತೇನೆ.

ನಿನ್ನ ಪ್ರೀತಿಯೇ ನನಗೆ ಬೇಕಾದುದು. ನಿನಗಾಗಿ ನಾನು ಬರಬೇಕೇ ಹೊರತು ಅವರಿಗಾಗಿ ಅಲ್ಲ.

ಆದರೆ ನಿನ್ನ ಕಾಗದ! ನನಗೇನು ಕನಸೊ! ಅಥವ ನಿನ್ನ ಕಡೆಯಿಂದ ನನಗೆ ನಿಶ್ಚಯವಾಗಿ ಈ ವಿಧದ ಕಾಗದ ಬಂದಿರುವುದು ನಿಜವೊ! ಅದರ ತೀಕ್ಷ್ಣತೆಯಿಂದ ನಾನಾಗಲೇ ಬೆಂದು ಬಾಡಿರುತ್ತೇನೆ. ನಾನೇನು ತಪ್ಪು ಮಾಡಿರುತ್ತೇನೆ! ನಿನ್ನ ಪ್ರೀತಿ ವಿಶ್ವಾಸಗಳಿಗೆ ನಾನು ಅಯೋಗ್ಯನೆ! ನಿನಗಾಗಿ ಯಾವ ನರಕ ಯಾತನೆಯನ್ನಾಗಲೀ ನಾನು ಅನುಭವಿಸಲು ಸಿದ್ಧನಾಗಿದ್ದೇನೇ ಹೊರತು, ಆ ಕ್ರೂರ ಲೇಖನಿಯ ಗದಾಪ್ರಹಾರವನ್ನು ಸಹಿಸಲು ಸಿದ್ಧನಾಗಿರಲಿಲ್ಲ.

## ೭

**ಜೀವನ ಸರ್ವಸ್ವೆ,**

ಪುನಃ ಅದೇ ರೀತಿಯ ಪತ್ರ! ಇದು ನನ್ನ ದುರದೃಷ್ಟ!

ಇರಲಿ. ಹಿಂದೂ ಸಮಾಜದಲ್ಲಿನ ನಾವು--ಮದುವೆಯಾದ ಮೇಲೆ ಪ್ರೀತಿಸಲು ಕಲಿಯುತ್ತೇವೆ. ಪ್ರೀತಿಸುವುದಕ್ಕೆ ಪ್ರಯತ್ನಿಸಿ ಮದುವೆಯಾಗುವ ಪಂಗಡದವರಿಗೆ ಹತ್ತಾರು ಹೆಣ್ಣು, ಗಂಡು. ಮದುವೆಯಾದ ಮೇಲೆ ಪ್ರೀತಿಸುವವರಿಗೆ ಒಂದೇ ಗಂಡು, ಒಂದೇ ಹೆಣ್ಣು. ನಮ್ಮಲ್ಲಿ ಒಬ್ಬರ ಮನಸ್ಸು ಇನ್ನೊಬ್ಬರಿಗೆ ಸರಿಹೋಗದಿದ್ದರೆ ದಾಂಪತ್ಯವಿಚ್ಛೇದನವಿಲ್ಲ; ಒಬ್ಬರನ್ನು ಇನ್ನೊಬ್ಬರು ಅನುಸರಿಸಿಕೊಂಡು ಹೋಗಲು ಪ್ರಯತ್ನಿಸುತ್ತೇವೆ. ನೀನು ಹಾಗೆಯೇ ನನ್ನನ್ನು ಮದುವೆಯಾದ ಮೇಲಾದರೂ ಪ್ರೀತಿಸಲಾರೆಯಾ? ನಿನ್ನ ಇಷ್ಟಕ್ಕೆ ವಿರೋಧವಾಗಿ ನಡೆಯದೆ, ನಿನ್ನ ಮನಃ ಸಂತೋಷಪಡಿಸಲು ಯಾವಾಗಲೂ ಪ್ರಯತ್ನಿಸುತ್ತೇನೆ.

ಮೊತ್ತ ಮೊದಲು--ನನ್ನ ನಿನ್ನ ಭೇಟಿಯಾದ ವಿಷಯ ನಿನ್ನ ಜ್ಞಾಪಕ

ದಲ್ಲಿದೆಯೆ? ಆ ದಿನ ನೀನೂ ನಿನ್ನ ಸ್ನೇಹಿತಳೊಬ್ಬಳೂ ಪೇಟೆಯ ಕಡೆ ಗಾಡಿಯಲ್ಲಿ ಹೊರಬಿದ್ದಿರಿ. ಅಡ್ಡ ರಸ್ತೆಯ ಬಳಿ ನಾನು ತಿರುಗಿ ಸೈಕಲ್ ಮೇಲೆ ಜೋರಾಗಿ ಬಂದೆ. ಆ ಸಮಯಕ್ಕೆ ಸರಿಯಾಗಿ ಎದುರು ಮನೆಯಿಂದ ಒಂದು ಮಗು ಓಡುತ್ತಾ ಬಂದುಬಿಟ್ಟಿತು. ಆ ಸನ್ನಿವೇಶದಲ್ಲಿ ಮಗುವು ನಿಮ್ಮ ಗಾಡಿಗೋ ನನ್ನ ಸೈಕಲಿಗೋ ಸಿಕ್ಕಿಯೇ ಬಿಡಬೇಕಾಗಿದ್ದಿತ್ತು. ಮಗು ಸಿಕ್ಕಿಕೊಂಡಿತೆಂದು ನೀವು ಗಾಬರಿಯಾಗಿ ಕೂಗಿ ಕೊಂಡಿರಿ. ಅಷ್ಟರಲ್ಲಿ ನಾನು, ಕೂತಿದ್ದಂತೆಯೇ ಬಗ್ಗಿ, ಮಗುವು ನಿಮ್ಮ ಗಾಡಿಯ ಚಕ್ರದ ಕೆಳಗೆ ಸಿಕ್ಕದ ಹಾಗೆ ಆತುಕೊಂಡೆ.

ಅಂದು ನೀನೆನ್ನನ್ನು ಕಂಡು ನಕ್ಕೆಯಲ್ಲವೆ?

ಅಂದಿನಿಂದ ನೀನು ನನ್ನ ಮೇಲೆ ಅಭಿಮಾನವಿಟ್ಟಿರುತ್ತೀಯೆಂದೇ ನನ್ನ ಭಾವನೆ.

ಈಗಲಾದರೂ ನನ್ನ ಮೇಲೆ ಕರುಣೆ ತೋರಲಾರೆಯಾ?

೮

**ಮನ್ಮನೋಹರೆ,**

ಹಿಂದಿನ ಕಾಗದಕ್ಕಿಂತ ಈ ಕಾಗದ ಬಿರುಸಾಗಿದೆ. ಇದರಲ್ಲಿ ಎಚ್ಚರಿಕೆ ಸಹ ಕೊಟ್ಟಿದೆ. ನಾನು ಪುನಃ ಪತ್ರ ಬರೆದರೆ ಪೋಲೀಸರಿಗೆ ತಿಳಿಸುವಿರಾ? ತಿಳಿಸಿ. ನಾನೇ ತಿಳಿಸಲೇನು? ನಾನು ನಿನಗಾಗಿ ಹೆದರುವುದು. ನಾನು ದುಡುಕಿ ನಿನ್ನ ಪ್ರೀತಿಯನ್ನು ಕಳೆದುಕೊಳ್ಳಲು ಸಿದ್ಧನಾಗಿಲ್ಲ. ಇನ್ನಾರಿಗೂ ನಾನು ಹೆದರುವುದಿಲ್ಲ ಒಂದು ಸಲ, ಒಂದೇ ಒಂದು ಸಲ, ನಿನ್ನೊಡನೆ ಮಾತನಾಡಲು ಅವಕಾಶ ಕೊಡಲಾರೆಯಾ! ನೀನು ಅವಕಾಶ ಕೊಡುವ ವರೆಗೆ ನಿನ್ನನ್ನು ನಾನು ಎಡೆಬಿಡದೆ ಹಿಂಬಾಲಿಸುತ್ತೇನೆ. ಅದರಿಂದಲಾದರೂ ನೀನು ಬೇಸರಗೊಂಡು ನನ್ನನ್ನು ನೋಡಲು ಸಮ್ಮತಿಸು.

೯

**ಮನದನ್ನೆ,**

ಅಬ್ಬ! ಇಷ್ಟು ದಿನಕ್ಕೆ ನನ್ನ ಭಾಗ್ಯದೇವತೆ ಒಲಿದುದಕ್ಕೆ ನನ್ನ

ಆನಂದಕ್ಕೆ ಎಣೆಯೇ ಇಲ್ಲದಾಗಿದೆ. ನಾಳೆ ರಾತ್ರಿ ಸುಮಾರು ಒಂಭತ್ತು ಗಂಟೆಗೆ ನಿಮ್ಮ ಮಂದಿರದ ಬಳಿ ಬಂದು ನಿನ್ನನ್ನು ನೋಡುತ್ತೇನೆ.

ನನಗೆ ಇಷ್ಟು ಮಟ್ಟಿಗೆ ನೀನು ಅವಕಾಶ ಕೊಟ್ಟುದಕ್ಕೆ ನಾನು ನಿನಗೆ ಚಿರಋಣಿ ಕಂಡೆಯಾ!

ನನಗೆ ಮೋಸ ಮಾಡಬೇಡ. ಹಾಗೂ ಮಾಡಿದರೆ ನನ್ನ ಪ್ರಾಣವನ್ನೇ ನಿನಗೆ ಧಾರೆಯೆರೆಯಲು ಸಿದ್ಧನಾಗಿದ್ದೇನೆಂಬುದನ್ನು ಅರಿತುಕೋ.

೧೦

**ದೇವಿ,**

ನಿನ್ನ ದರ್ಶನಕ್ಕೆಂದು ಬಂದ ನನಗೆ ನಿನ್ನ ದರ್ಶನದ ಬದಲು, ಲಭಿಸಿದ ಏಟುಗಳಿಂದ ನನ್ನ ದೇಹವು ಜರ್ಝರೀಭೂತವಾಗಿದ್ದರೂ ಅದರಿಂದ ನನಗೊಂದು ಆನಂದ ಅದೇನು ಬಲ್ಲೆಯಾ, ನಿನಗೆ ತೃಪ್ತಿಯಿಲ್ಲದಿದ್ದರೆ ನನ್ನನ್ನು ಹೊಡೆಸುತ್ತಿದ್ದೆಯಾ? ನಿನ್ನ ತೃಪ್ತಿಗಾಗಿ ನಾನು ಆತ್ಮಯಜ್ಞ ಮಾಡಿದ್ದೇನೆ, ನನ್ನ ಯಜ್ಞದಿಂದ ನಿನಗೆ ಆನಂದವಾಗಿದೆಯೆಂದೇ ನನ್ನ ನಂಬಿಕೆ.

ನಿನ್ನ ಆನಂದವೇ ನನ್ನ ಆನಂದ.

ನಿನ್ನಿಂದ ಬಂದ ಪತ್ರವು ನನ್ನನ್ನು ಸಂಕೇತ ಸ್ಥಾನಕ್ಕೆಳೆದೊಯ್ದು ನನ್ನನ್ನು ಮರ್ದನ ಮಾಡಿಸಿತು. ಚಿಂತೆಯಿಲ್ಲ. ನಿನ್ನ ಬಳಿ ಬರುವ ಮೊದಲು ನಿನ್ನ ತಂದೆತಾಯಿಗಳಲ್ಲಿ ಹೋಗಿದ್ದರೆ ಹೀಗಾಗುತ್ತಿತ್ತೇ! ನಾನು ದಾರಿ ತಪ್ಪಿ ಹೋದುದಕ್ಕೆ ಇದು ತಕ್ಕ ಪ್ರಾಯಶ್ಚಿತ್ತವಿದ್ದರೂ ಇರಬಹುದು.

ಈ ನಡವಳಿಕೆಯಿಂದ ನನ್ನ ಮೇಲೆ ನಿನಗಿರುವ ಅಭಿಪ್ರಾಯ ವ್ಯಕ್ತಪಟ್ಟಂತಾಯಿತು. ನಿನಗೂ ಭಾರವಾದ ಈ ಜೀವವನ್ನು ನಾನಿನ್ನೇಕೆ ಹೊರಬೇಕು! ನನ್ನನ್ನು ನೋಡುವುದಿಲ್ಲವೆಂಬ ನಿನ್ನ ಈ ಜನ್ಮದ ಸಂಕಲ್ಪ ಯಜ್ಞಕ್ಕೆ ನಾನೇ ಪಶುವಾಗಿ ಹೋಗುತ್ತೇನೆ.

ಪುನರ್ಜನ್ಮವಿದ್ದರೆ ಅದರಲ್ಲಾದರೂ ನನಗೆ ದಯೆತೋರು.

* * * * *

ಅಯ್ಯೋ! ಅಯ್ಯಯ್ಯೋ!! ಎಂತ ಕನವರಿಸುತ್ತ ಮಂಚದಿಂದ

ಕೆಳಗೆ ಉರುಳಿಬಿದ್ದೆ. ನನ್ನೊಡನೆಯೇ ನನ್ನ ಎದೆಯ ಮೇಲಿದ್ದ ವೃತ್ತ ಪತ್ರಿಕೆಯೂ ಕೆಳಗೆ ಬಿದ್ದಿತ್ತು.

ದೀಪ ಉರಿಯುತ್ತಾ ಇತ್ತು. ಗಡಿಯಾರ ಎರಡು ಗಂಟೆ ತೋರಿಸುತ್ತಾ ಇತ್ತು. ತಲೆಕೆಳಗಿಟ್ಟಿದ್ದ ಹಾಸಿಗೆ ಸುರುಳಿ ಹಾಗೇ ಇತ್ತು.

ರಾತ್ರಿ ಊಟಮಾಡಿದವನು ಹಿಂದೂ ಪತ್ರಿಕೆಯ, 'ಸ್ವಂತ ಬಾತ್ಮೀದಾರರಿಂದ' ಕೊಡಲ್ಪಟ್ಟಿದ್ದ ಸುದ್ದಿಯನ್ನು ಓದುತ್ತಾ ಮಲಗಿದವನಿಗೆ ಹಾಗೆಯೇ ನಿದ್ದೆ ಬಂದುಬಿಟ್ಟಿತು. ಅದರಲ್ಲಿ ಆ ದಿನ ಕೆರೆಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಂಡಿದ್ದ ಒಂದು ಹೆಣದ ಮೇಲಿನ ತನಿಖೆಯ ವರದಿ ಬಂದಿತ್ತು. ಅದರಲ್ಲಿ-ತಾನು ಪ್ರೀತಿಸಿದವಳು ತನ್ನನ್ನೊಲಿಯದೆ, ಒಲಿದಂತೆ ನಟಿಸಿ, ತನ್ನನ್ನು ಸಂಕೇತ ಸ್ಥಾನಕ್ಕೆ ಒಯ್ದು ಅಲ್ಲಿ ಹೊಡೆಸಿದ ಕಾರಣ, ತನಗೆ ಬಾಳಿನಲ್ಲಿ ಬೇಸರಿಕೆ ಬಂದುದರಿಂದ ಆತ್ಮಹತ್ಯಮಾಡಿಕೊಂಡಿರುವಂತೆ ಆ ಮೃತನ ಜೇಬಿನಲ್ಲಿದ್ದ ಕಾಗದಗಳಿಂದ ವ್ಯಕ್ತಪಟ್ಟಿತ್ತು.

ಕನಸಿನಲ್ಲಿ ನಾನು ಪೋಲೀಸಿನವನಂತೆಯೂ, ಹುಡುಗಿಯ ಹಿರಿಯರು ಮೃತನು ಮಾಡುತ್ತಿದ್ದ ಕಾರ್ಯವು ಸರಿಯಾದುದಲ್ಲವೆಂತ ಪದೇ ಪದೇ ತಿಳುವಳಿಕೆ ಕೊಟ್ಟಾಗ್ಯೂ ಹುಡುಗನು ಕೇಳದೆ ಹುಡುಗಿಯನ್ನು ಹಿಂಬಾಲಿಸಿ ತೊಂದರೆಕೊಟ್ಟುದರ ಪ್ರಯುಕ್ತ ಆಕೆ ಶಾಲೆಗೆ ಹೋಗಲು ಅಸಾಧ್ಯವಾದುದರಿಂದ ಆಕೆ ತನ್ನ ವಿದ್ಯಾರ್ಥಿಮಂದಿರದ ಅಧಿಕಾರಿಣಿಗೆ ಈ ವಿಚಾರ ತಿಳಿಸಿದ ಹಾಗೂ, ಆಕೆ ಪೋಲೀಸ್ ಅಧಿಕಾರಿಯಾದ ನನ್ನನ್ನು ಸಲಹೆ ಕೇಳಿದಂತೆಯೂ, ನಾನು ಹುಡುಗಿಯ ಕೈಯಿಂದ ಮೃತನಿಗೆ, 'ನಿನ್ನ ಈ ನಡತೆ ಸರಿಯಾದುದಲ್ಲ.ಎಚ್ಚರಿಕೆ! ಇಲ್ಲದಿದ್ದರೆ ಮಗ್ಗುಲು ಮುರಿದೀತು' ಎಂತ ತಿಳುವಳಿಕೆ ಕೊಡಿಸಿದಂತೆಯೂ, ಅದಕ್ಕೂ ಆತನು ಬಗ್ಗದಿದ್ದ ಕಾರಣ ಅಭಿಸಾರಕ್ಕೆ ಸ್ಥಳ ಏರ್ಪಡಿಸಿ, ಅಲ್ಲಿಗೆ ಆತನು ನಿಸ್ಸಹಾಯನಾಗಿ ಬರಲು ನಾನೂ ಇನ್ನೂ ನಾಲ್ಕು ಜನ ನನ್ನವರೂ ಆತನನ್ನು ಸಾಯದ ಹಾಗೆ, ಆದರೆ ಪೂರಾ ಹೊಡೆದು, ರಸ್ತೆಯಲ್ಲಿ ಮಲಗಿಸಿದ ಹಾಗೂ ಈ ಅವಮಾನ ಸಹಿಸಲಾರದೆ ಆತನು ಕೆರೆಯಲ್ಲಿ ಬಿದ್ದು ಪ್ರಾಣ ಕಳೆದುಕೊಂಡಂತೆಯೂ, ಅವನ ಹೆಣದ ತನಿಖೆಗಾಗಿ ನಾನೇ ಹೋದಂತೆಯೂ, ಅದನ್ನು ಪೂರೈಸಿ ರಾತ್ರಿ ಮನೆಯಲ್ಲಿ ಮಲಗಿದ್ದಾಗ ಅವನ ಅವಮಾನ ಮತ್ತು ಮರಣಗಳಿಗೆ ನಾನೇ ಕಾರಣನೆಂದೂ, ಅದಕ್ಕೆ ಪ್ರತೀಕಾರ ಮಾಡುತ್ತೇ

ನೆಂದು ಹೇಳುತ್ತಾ ಆತನ ಪ್ರೇತ ನನ್ನ ಎದೆಯ ಮೇಲೆ ಕುಳಿತು ಕತ್ತು ಹಿಸುಕುತ್ತಿದ್ದಂತೆ ಕನಸಾಗಲು, ಭಯದಿಂದ ಕಿರಿಚಿಕೊಂಡು ಮಂಚದ ಮೇಲಿನಿಂದ ಕೆಳಗೆ ಉರುಳಿಬಿದ್ದೆ.

ಈ ವಿಚಾರವೆಲ್ಲ ಜ್ಞಾಪಿಸಿಕೊಂಡು ಕನಸಾದುದಕ್ಕೆ ನಗುಬರಲು, ದಿನಾ ಹೆಣ ನೋಡುವ ಪೋಲೀಸಿನವರಿಗೂ ಡಾಕ್ಟರುಗಳಿಗೂ ಇನ್ನೆಂತಹ ಕನಸಾಗಬಹುದೆಂದು ಆಶ್ಚರ್ಯಪಡುತ್ತಾ ಹಾಸಿಗೆಯನ್ನು ಹಾಸಿಕೊಂಡು ಮಲಗಿ ನಿದ್ರಿಸಿದೆ.



## 2. ಅಳಿಯನ ಕೆಲವು ಪತ್ರಗಳು

**ಮಾವನವರಿಗೆ,**

ನನ್ನಿಂದ ನಿಮಗೆ ಕಾಗದ ಬಂದು ವರ್ಷಾಂತರಗಳಾಗಿರಬಹುದಲ್ಲವೆ! ಆದ್ದರಿಂದ ಈ ಕಾಗದದಲ್ಲಿ ಏನೋ ಬಹಳ ಹೆಚ್ಚಿನ ಸಮಾಚಾರವಿರಬಹುದೆಂತ ನಿಮಗೆ ಅನ್ನಿಸಬಹುದು. ಅಹುದು, ಬಹಳ ಮುಖ್ಯವಾದ ವಿಷಯವೊಂದನ್ನು ನಿಮಗೆ ತಿಳಿಸಲೊಸುಗವೇ ಈ ಕಾಗದವನ್ನು ನಿಮಗೆ ಬರೆದಿರುತ್ತೇನೆ.

ಈ ಪತ್ರ ನಿಮಗೆ ಸೇರುವುದರೊಳಗಾಗಿ ನಾನು ಬಹಳ ದೂರ ಹೊರಟು ಹೋಗಿರುತ್ತೇನೆ. ಎಲ್ಲಿಗೆ? ಎಲ್ಲಿಗೆ ಎಂತ ಹೋಗುವ ನನಗೇ ತಿಳಿಯದು! ಮತ್ತೆ ನಿಮಗೆ ತಿಳಿಸುವುದಾದರೂ ಹೇಗೆ ಸಾಧ್ಯ!

ನಾನು ಮಾಡಿರುವ ಕಾರ್ಯದಿಂದ ನಿಮಗೆ ಅಸಮಾಧಾನ, ಕೋಪ, ಸಂಕಟಗಳು ಉಂಟಾಗಬಹುದು. ಈ ಕಾಗದವನ್ನೂ ಇದರಲ್ಲಿ ಬರೆಯಲ್ಪಟ್ಟಿರುವ ಕೆಲವು ನಡವಳಿಕೆಗಳನ್ನೂ ಓದಿನೋಡಿಕೊಂಡ ಮೇಲಾದರೂ ನಿಮ್ಮ ಮನಸ್ಸಿಗೆ, ಸಮಾಧಾನ ಉಂಟಾಗಬಹುದೆಂತ ಭಾವನೆ. ನಿಮ್ಮ ವಯಸ್ಸಿಗೆ, ಅನುಭವಕ್ಕೆ ನಿಮ್ಮ ಜ್ಞಾನಕ್ಕೆ ಇಂತಹ ಅನೇಕ ಸಂದರ್ಭಗಳು ಗೋಚರಿಸಿರಬಹುದು.

ಹೆಚ್ಚು ತಿಳಿದವರಿಗೆ ಅಲ್ಪನು ಏನು ಹೇಳಿಯಾನು! ಕ್ಷಮಿಸಿ ಎಂತ ಮಾತ್ರ ಕೇಳಿಕೊಳ್ಳಬಲ್ಲನು.

ನೀವು ನನಗೆ ಹಿರಿಯರು; ಪೂಜ್ಯರು. ನಾನು ಚೆನ್ನಾಗಿ ಬದುಕಿ ಬಾಳಬೇಕೆಂಬುದು ನಿಮ್ಮ ಹಿರಿಯ ಆಸೆ ಎಂಬುದನ್ನು ಬಲ್ಲೆ. ಆದ್ದರಿಂದಲೇ ನನಗೆ ನಿರಂತರವೂ ಶ್ರೇಯಸ್ಸನ್ನು ಕೋರುವ ನಿಮ್ಮ ಮನಸ್ಸಿಗೆ ಹಿಂಸೆಯಾಗಬಾರದೆಂತ, ನನಗೆ ತೊಂದರೆಯಾದರೂ ನಿಮ್ಮ ಒಬ್ಬಳೇ ಮಗಳಿಗೆ ತೊಂದರೆಯಾಗದಿರಲೆಂತ, ಆಕೆ ಬಾಯಾರೆ ಹೇಳಿರುವಂತೆ, ತನ್ನ ತಂದೆ ತಾಯಿಗಳ ಬಳಿ ಆಕೆ ಸುಖವಾಗಿರಲೆಂತ ಆಕೆಯು ಅಂದಂತೆ, ನನ್ನ ಕಾಟವಿಲ್ಲದಿರಲೆಂತ, ಆಕೆಯ ಸುಖ ನನ್ನ ಸುಖವೆಂತ ಭಾವಿಸಿ ನಾನು ಈ ರೀತಿ ಮಾಡಿರುತ್ತೇನೆ.

ಹೇಗಾದರೂ ಆಕೆ ಸುಖಿಯಾಗಿದ್ದರೆ ನನಗೆ ಸಂತೋಷ.

ಜನ ಸಾಮಾನ್ಯರಲ್ಲಿ ಮದುವೆಯಾದ ಗಂಡಹೆಂಡಿರು ಒಬ್ಬರನ್ನೊಬ್ಬರು ಆದಷ್ಟು ಮಟ್ಟಿಗೆ ಅನುಸರಿಸಿ, ಆದರಿಸಿ, ಮನ್ನಿಸಿ, ಜೀವನವನ್ನು ಜರುಗಿಸಬೇಕಾದುದು ಧರ್ಮ. ಹಾಗೆ ಮಾಡಲು ನಾನು ಪ್ರಯತ್ನಿಸಿದೆ. ಅದು ಸಾಧ್ಯವಾಗಲಿಲ್ಲ. ನನ್ನಿಷ್ಟ ಬಂದಂತೆ ನಡೆಯಲು ಒಪ್ಪುವ ಹೆಂಡತಿಯನ್ನೋ ಅಥವಾ ಬೇರೆ ಹೆಂಗಸನ್ನೋ ನಾನು ಕರೆದು ತಂದು, ನಿಮ್ಮ ಮಗಳನ್ನು ದೂರಮಾಡಬಹುದಾಗಿತ್ತು. ಆದರೆ ಅದರಿಂದ ನಾನು ಕೆಟ್ಟವನೆಂತಲೂ ಕಟ್ಟಿಕೊಂಡ ಹೆಂಡತಿಯನ್ನು ಸರಿಯಾಗಿ ಬಾಳಿಸಲಾರದೆ ಹೋದನೆಂತಲೂ ನಿಮ್ಮಿಂದ ಅನ್ನಿಸಿಕೊಳ್ಳುವುದಕ್ಕಿಂತ, ಸಂಸಾರವನ್ನು ನಿರ್ವಹಿಸಲಾರದೆ ಹೊರಟುಹೋದ ಹೇಡಿ—ಎಂತ ಅನಿಸಿಕೊಳ್ಳುವುದು ಮೇಲೆಂತ, ಬಹಳವಾಗಿ ಆಲೋಚಿಸಿದ ಮೇಲೆ ನಿಶ್ಚಯಿಸಿ, ಆಕೆಯು ಇಷ್ಟಪಟ್ಟಂತೆ, ಬಾಯಿಬಿಟ್ಟು ಹತ್ತಾರು ಬಾರಿ ಹೇಳಿದಂತೆ ಮಾಡಿರುತ್ತೇನೆ.

ಆಕೆಗೆ ಇನ್ನೂ ಅರಿಯದ ವಯಸ್ಸು ಎಂದು ಹೇಳುವ ಕಾಲವು ಮೀರಿಹೋಗಿದೆ. ಬುದ್ಧಿಯಿಲ್ಲವೆನ್ನುವುದಕ್ಕೆ—ಆಕೆಗೆ ಇರುವಷ್ಟು ಬುದ್ಧಿ ಯಾರಿಗೂ ಇಲ್ಲವೆಂತ ಪ್ರಪಂಚವೇ ಸಾರುತ್ತಿದೆ. ವಿದ್ಯೆ ಇಲ್ಲದವಳು ಎನ್ನುವುದಕ್ಕೆ ಅನಕ್ಷರಸ್ಥೆಯಲ್ಲ! ರಾಜ್ಯವಾಳಿದ ಹೈದರನಿಗೆ ಅಕ್ಷರ ಬರುತ್ತಿತ್ತೆ?

ನನ್ನಿಂದ ಆಕೆಗೆ ಕಷ್ಟವಾಗುತ್ತಿತ್ತೆಂದೇ ಭಾವಿಸೋಣ. ಯಾವಾಗಲೂ ಕಷ್ಟವಾಗುತ್ತಿತ್ತೇ? ನನ್ನೊಡನೆ ಆಕೆ ಸುಖವನ್ನೇ ಕಂಡು ಅರಿಯಳೇ?

ಆಕೆಯನ್ನು ತಿದ್ದಲು, ಎಂದರೆ ನನ್ನ ದೃಷ್ಟಿಯಿಂದ ನೋಡುವಂತೆ ಮಾಡಲು ಪ್ರಯತ್ನಪಟ್ಟು ವಿಫಲನಾದ ಮೇಲೆ ನಾನು ಈ ರೀತಿ ಮಾಡಿರುತ್ತೇನೆ.

ಗಂಡನ ಮನೆಗಿಂತ ತೌರುಮನೆಯೇ ಹಿರಿದು ಎಂಬ ಬದಲಾಯಿಸಲ್ಪಡದ ಮನೋಭಾವನೆಯುಳ್ಳವಳು ಆಕೆ. ಇನ್ನು-ತೆಗೆದುಕೊಂಡ ಮನೆ ಹೇಗೆ ಉದ್ಧಾರವಾಗಬೇಕು?

ಮತ್ತೊಮ್ಮೆ ಬೇಡಿಕೊಳ್ಳುತ್ತೇನೆ. ಕ್ಷಮಿಸಿ.

ಪ್ರತಿಯೊಂದು ಘಟನೆಯೂ ನಡೆದಾಗಲೆಲ್ಲ ಅದನ್ನು ನಿಮಗೆ ತಿಳಿಸೋಣವೆಂತ ಪತ್ರ ಬರೆದಿಡುತ್ತಿದ್ದೆ. ಆದರೆ ಈ ವಿಷಯಗಳೆಲ್ಲ ನಿಮಗೆ ತಿಳಿಸಿ, ನಿಮ್ಮ ಮನಸ್ಸಿಗೆ ಬೇಸರಿಕೆಯನ್ನುಂಟುಮಾಡಕೂಡದೆಂತಲೂ

ನನ್ನ ಮತ್ತು ನಿಮ್ಮ ಮಗಳ ಮೇಲೆ ನಿಮಗೆ ಅಸಮಾಧಾನವಾಗಲು ಎಡೆಗೊಡಕೂಡದೆಂತಲೂ, ನಿಮಗೆ ತಿಳಿಸದೆ, ಅದರಿಂದ ನನಗಾಗುವ ದುಃಖವು ನನ್ನೊಬ್ಬನನ್ನೇ ದಹಿಸಿದರೂ ಚಿಂತೆಯಿಲ್ಲವೆಂದೂ ಮುಚ್ಚಿಡುತ್ತಿದ್ದೆ. ಇನ್ನೂ ಪರೀಕ್ಷೆಮಾಡಿ ನೋಡೋಣ, ಇನ್ನೂ ಎರಡು ದಿನ ತಳ್ಳಿ ನೋಡೋಣ ಎಂತ ಇದುವರೆಗೂ ತಡೆದಿದ್ದೆ.

ಆದರೆ ಈಗ ಕಟ್ಟೆ ಒಡೆದ ಕೆರೆಯು ತಡೆದಿಟ್ಟ ನೀರು ಹುಚ್ಚುಹುಚ್ಚಾಗಿ ಹರಿಯುವಂತೆ ಮನಹರಿಯುತ್ತಿದೆ. ಅದನ್ನು ತಡೆಗಟ್ಟಲು ಆರಿಗೆ, ಹೇಗೆ ಸಾಧ್ಯ!

ಒಂದೊಂದು ಘಟನೆಯೂ ಸೇರಿ, ಅದು ವಿಪರೀತ ಘಟನೆಯಲ್ಲಿ ಹೀಗೆ ಪರ್ಯವಸಾನ ಹೊಂದಬೇಕೆಂತ ಆತನ ಇಷ್ಟವಾಗಿತ್ತೇನೋ, ಆರು ಬಲ್ಲರು!

ಇಂತಹ ಸ್ಥಿತಿ ಬಂದೊದಗಬಹುದೆಂತ ಆಕೆಗೆ ನಾನು ಪದೇ ಪದೇ ತಿಳುವಳಿಕೆ ಕೊಟ್ಟಿಲ್ಲವೆಂತ ಆಕೆ ಹೇಳಲು ಸಾಧ್ಯವೆ? ಹಾಗಿರುವಾಗ ನಾನು ಮಾಡಿರುವುದು ನನ್ನ ಮನಸ್ಸಿಗೆ ತಪ್ಪಾಗಿ ಕಾಣದುದು ನಿಮ್ಮ ದೃಷ್ಟಿಗೆ ತಪ್ಪಂತೆ ಕಂಡುಬಂದಲ್ಲಿ ಅದು ನನ್ನ ದೌರ್ಭಾಗ್ಯವಲ್ಲದೆ ಮತ್ತಿನ್ನೇನು!

ಆದರೆ ಪರಿಸ್ಥಿತಿಯನ್ನು ಸರಿಯಾಗಿ ತುಲನ ಮಾಡುವ ಶಕ್ತಿ ನಿಮಗೆ ಇದೆಯೆಂಬ ಧೈರ್ಯದ ಮೇಲೆ, ನಾನು ಮಾಡಿರುವ ಕೆಲಸ ಆಕ್ಷೇಪಣೀಯವಾದುದಲ್ಲವೆಂತ ನಾನು ಭಾವಿಸಿದ್ದೇನೆ.

## ೨

ನಾನು ಬಡ ತಾಬೇದಾರ. ಅದೂ ದೊಡ್ಡ ಆಫೀಸರರ ಬಳಿ. ಕೆಲಸವಾದರೂ ಬಹಳ ಜವಾಬ್ದಾರಿಯುಳ್ಳದು. ಹಗಲೂ ರಾತ್ರಿಯೂ ವಿರಾಮವಿಲ್ಲದೆ ದುಡಿಯಬೇಕಾದ ಕೆಲಸವೆಂತ ನಾನು ನಿಮಗೆ ಹೇಳಬೇಕಾಗಿಲ್ಲ. ಇದು ನೀವು ಅರಿತ ವಿಚಾರ. ನಿಮಗಿಂತ ಹೆಚ್ಚಾಗಿ, ಆಕೆ ಅನುಭವಿಸುತ್ತಿರುವ ವಿಚಾರ. ನಮ್ಮ ದಣಿಯ ಮನೆಯ ಬಳಿಗೆ ಅಂಚೆಯ ಸಮೇತ ನಾನು ಎಂಟುಗಂಟೆಗೆ ಹೋಗಬೇಕು. ಅಷ್ಟು ಬೇಗ ಅಲ್ಲಿಗೆ ಹೋದರೆ ಮನೆಗೆ ಬರುವುದು ಮಧ್ಯಾಹ್ನ ಒಂದೋ, ಎರಡೋ, ಮೂರೋ; ಅಥವ

ಬಂದರೆ ಬಂದೆ, ಇಲ್ಲದಿದ್ದರೆ ಇಲ್ಲ. ಮಧ್ಯಾಹ್ನ ಮನೆಗೆ ಬಂದು ಉಂಡು ಪುನಃ ಹೋದರೆ ರಾತ್ರಿ ಮನೆಗೆ ಬರಬೇಕಾದರೆ ಬಹಳ ಹೊತ್ತೇ ಆಗುತ್ತೆ.

ಬೆಳಿಗ್ಗೆ ಮನೆ ಬಿಡುವ ಮುನ್ನ, ಸ್ನಾನ, ದೇವರ ಪೂಜೆ ವಗೈರೆ ಮಾಡದೆ ನಾನು ಏನೂ ತಿಂಡಿತೀರ್ಥ ಮುಟ್ಟುವುದಿಲ್ಲ. ಸ್ನಾನಮಾಡದೆ ಹೊರಟ ದಿನ-ನನ್ನ ಯಜ್ಞವಾಗಿಬಿಡುತ್ತೆ. ಇದನ್ನು ತಿಳಿದ ಯಾವ ಸದ್ಗೃಹಿಣಿ ತಾನೆ, ಗಂಡ ತನ್ನ ಕೆಲಸಕ್ಕೆ ಉಪವಾಸ ಹೋಗಲು ಇಷ್ಟಪಡುತ್ತಾಳೆ?

ಇದು ತಾನು ಮಾಡಬೇಕಾದ ಕೆಲಸವೆಂತ ಹೇಳಿಸಿಕೊಳ್ಳದೆ ಒಂದು ದಿನವಾದರೂ ನಿಮ್ಮ ಮಗಳು ಮಾಡಿದುದನ್ನು ನಾನು ಕಾಣೆ.

ಪ್ರತಿದಿನ ಬೆಳಗಿನ ಝಾವ ಐದೂವರೆ ಗಂಟೆಗೆ ಎದ್ದು ನೀರು ಕಾಯಿಸಿ ನಾನು ಸ್ನಾನಕ್ಕೆ ಹೋಗುವಾಗ, ಆಕೆಯನ್ನು ಎಬ್ಬಿಸಿ ದೇವರ ಮನೆ ಸ್ವಚ್ಛಮಾಡಿ ಅಣಿಮಾಡೆಂತ ಹೇಳಿದರೂ, ಆಕೆ ಏಳುವುದು ಕಷ್ಟ. ನಾನು ಎಬ್ಬಿಸಹೋದರೆ ನನ್ನ ಮುಖ ಮುರಿಯುವಂತೆ—ತಾನು ಏಳು ಗಂಟೆಗೆ ಮೊದಲು ಏಳುವುದಕ್ಕೆ ಸಾಧ್ಯವಿಲ್ಲವೆಂತಲೂ, ಎದ್ದರೆ ಮೈಸ್ವಾಧೀನವಿರುವುದಿಲ್ಲವೆಂತಲೂ, ನಾನು ಹೋಗಬೇಕಾದರೆ ತಾನೇಕೆ ಸರಿರಾತ್ರಿಯಲ್ಲಿ ಎದ್ದು ಕೂತಿರಬೇಕೆಂತ ಉತ್ತರಕೊಡುತ್ತಾಳೆ. ಆಕೆ ದೇವರ ಪೂಜೆ ಮಾಡುವಾಗ ದೀಪ ಹಚ್ಚುವುದರಿಂದ, ನಾನು ಪೂಜೆಮಾಡುವಾಗ ಬೇಕಿಲ್ಲ! ದೇವರ ಪೂಜೆಗೆ ನಾನೇ ಅಣಿಮಾಡಿ ಕೂತುಕೊಂಡಲ್ಲಿ ಪರಮ ಸಂತೋಷ!

ಇದೆಲ್ಲ ಎಷ್ಟು ದಿನ ಸಹಿಸುವುದಕ್ಕೆ ಆಗುತ್ತದೆ! ನನಗೆ ಕೋಪ ಬಂದು, ನಾನೇನಾದರೂ ಅಂದರೆ ನನ್ನನ್ನೂ ನನ್ನ ತಂದೆತಾಯಿಗಳನ್ನೂ ನನ್ನ ವಂಶವನ್ನೂ ಬೈದು 'ಈ ದುಷ್ಟರ ಮನೆಗೆ ನಮ್ಮ ತಂದೆ ನನ್ನನ್ನು ಯಾಕೆ ಕೊಟ್ಟನೋ' ಎಂತ ನಿಮ್ಮನ್ನೂ ನಿಂದಿಸುತ್ತಾಳೆ. ಅದರ ಮೇಲೆ ನನಗೆ ಕೋಪ ಹೆಚ್ಚಾಗಿ-ನಿನ್ನನ್ನು ಈ ರೀತಿ ಬೆಳೆಸಿದ ನಿಮ್ಮ ತಂದೆತಾಯಿಗಳನ್ನೂ ಸುಡಬೇಕು, ನಿಮ್ಮ ವಂಶ ನಿರ್ವಂಶವಾಗಲಿ ಎಂತ ಬೈದರೆ, 'ನನ್ನ ತಂದೆ ವಂಶ ಆರಬೇಕೆ! ಅವರಿಗೆ ನೀವೇಕೆ ಬೆಂಕಿ ಇಡಬೇಕು' ಎಂತ ಇನ್ನೂ ಇದೇ ರೀತಿ ಮಾತಿಗೆ ಮಾತು ಜೋಡಿಸುತ್ತಾಳೆ.

ನಿಮ್ಮ ಮಗಳಿಗೆ ನೀವಾದರೂ ಒಂದೆರಡು ಬುದ್ಧಿಮಾತು ಹೇಳಬಾರದೇ?

೩

ನಿಮ್ಮ ಮಗಳು ಹಿಡಿದ ಪಟ್ಟು ಬಿಡುವುದಿಲ್ಲ ತಾನು ಮಾಡುವ ಕೆಲಸ ತಪ್ಪೇ, ಸರಿಯೇ ಎಂತ ಪರ್ಯಾಲೋಚಿಸುವುದಿಲ್ಲ. ಇತರರು ಹೇಳಿದರೆ ಗ್ರಹಿಸುವುದಿಲ್ಲ. ನಾನು ಹೇಳಿದರೆ ದಂಡಿಸುತ್ತೇನೆಂತ ಭಾವಿಸುತ್ತಾಳೆ. ಅನ್ನುವ ಹಾಗಿಲ್ಲ, ಅನುಭವಿಸುವ ಹಾಗಿಲ್ಲ. ನಾನು ಗಟ್ಟಿಯಾಗಿ ಮಾತನಾಡಿದರೆ, ಹೊಡೆದರೆ, ಬಡಿದರೆ .ಈಗ ನಾನು ಜನ ಸಮುದಾಯದಲ್ಲಿ ಕೆಟ್ಟವನಾಗಿರುವವನು ಇನ್ನೂ ಕೆಟ್ಟವನಾಗಬೇಕಾಗುತ್ತದೆ. ನಿಮ್ಮ ಮಗಳು ಒದ್ದೆ ಬಟ್ಟೆಯಿಂದ ಕತ್ತು ಕೊಯ್ಯುವುದು ಯಾರಿಗೆ ಗೊತ್ತಾಗುತ್ತದೆ!

ಅವಳಿಗೆ ಸಿನೀಮಕ್ಕೆ ಹೋಗುವ ಚಟ ಬಹಳ. ನಾನೇನೂ ಸಿನೀಮಕ್ಕೆ ಹೋಗಲು ಕಾಸು ಕೊಡಬೇಕಿಲ್ಲವಾದರೂ, ಪುಕ್ಕಟ್ಟೆ ಸಿನೀಮಕ್ಕೆ ಹೋಗಲವಕಾಶವಿದೆಯೆಂತ ಪ್ರತಿಯೊಂದು ಬದಲಾವಣೆಗೂ ಹೋಗುವುದು ಚೆನ್ನಾಗಿರುತ್ತದೆಯೇ? ನಾನು ಆಕೆಯನ್ನು ಕರೆದುಕೊಂಡು ಹೋಗುವುದಕ್ಕೆ ಸಾಧ್ಯವಿಲ್ಲವೆಂದರೆ, ತಾನು ಒಬ್ಬಳೇ ಹೋಗುವುದಕ್ಕೂ ಸಿದ್ಧ ತಾನು ಹಾಗೆ ಹೋಗುವುದು ತನಗಾಗಲೀ, ಅಥವಾ ಅನ್ಯರಿಗಾಗಲೀ ಗೌರವ ತರುವುದಿಲ್ಲವೆಂತ ನಾನು ಹೇಳಿದರೆ, ನನ್ನ ಮಾತಿನಲ್ಲಿರುವ ಒಳ್ಳೆಯ ಅಂಶವನ್ನು ಗ್ರಹಿಸಿ, ತನ್ನ ಹಟವನ್ನು ಬಿಡುವುದು ಆಕೆಯ ರಕ್ತಕ್ಕೇನೆ ಬಂದಿಲ್ಲ. ನಾನು ಖಂಡಿತವಾಗಿ ಹೋಗಲೇ ಕೂಡದೆಂತ ಹೇಳಿದರೆ, ನನ್ನ ಸಂಗಡ ಜಗಳವಾಡಿ, ಕನಿಷ್ಟ ಪಕ್ಷ ಎಂಟು ದಿವಸವಾದರೂ ಮಾತನ್ನು ಸಹ ಆಡದೆ ಇದ್ದು ಬಿಡುತ್ತಾಳೆ. ಅಷ್ಟೇ ಅಲ್ಲ, ಹೊತ್ತು ಹೊತ್ತಿಗೆ ತಿಂಡಿ ಊಟಗಳನ್ನು ಸಹ ಕಾಣಿಸುವುದಿಲ್ಲ ನಾನು ಒಳ್ಳೆಯ ಮಾತಿನಲ್ಲಿ 'ಈ ಚಿತ್ರಕ್ಕೆ ಬೇಡ, ಬೇರೆ ಚಿತ್ರಕ್ಕೆ ಹೋಗೋಣ' ಎಂತ ಹೇಳಿದರೆ, ನಾನು ಯಾವಾಗ ಕೇಳಿದರೂ ಹೀಗೆಯೇ; ಕರೆದುಕೊಂಡೇ ಹೋಗುವುದಿಲ್ಲ. ಎಂತ ಗೊಣಗುಟ್ಟಿ ಮರು ಬದಲಾವಣೆ ಬರುವುದನ್ನು ಕಾದಿರುತ್ತಾಳೆ! ಅದಕ್ಕೆ ಕರೆದುಕೊಂಡು ಹೋಗದಿದ್ದರೆ ನನಗೆ ಬೈಗಳು ಹುಟ್ಟಿದ ಹಬ್ಬ ಮಾಡಿಬಿಡುತ್ತಾಳೆ. ನಿಮ್ಮ ಮಗಳು ವಿದ್ಯಾವಂತೆ; ಬುದ್ಧಿವಂತೆ, ಗಂಡನ ಮರ್ಜಿಯನ್ನನುಸರಿಸಿಕೊಂಡು ಹೋಗುವುದರಿಂದ ಅವನಿಗೂ ಸುಖ, ನನಗೂ ಸುಖ, ಅವನ ದಾರಿಯಲ್ಲಿ ಹೋಗುವುದರಿಂದ ನನ್ನಿಚ್ಛೆಯಂತೆ

ನಡೆಯಲಾಗದಿದ್ದರೂ ಅವನು ಹೇಳುವ ಮಾತು ಸಮಂಜಸವಾಗಿವೆ ಎಂತ ಆಕೆ ಭಾವಿಸದಿದ್ದರೆ ನಮ್ಮ ಸಂಸಾರವು ಎಷ್ಟು ಅಸಹ್ಯವಾಗುವುದೆಂದು, ತಿಳಿದ ನಿಮಗೆ, ನಾನು ಹೇಳಬೇಕಾಗಿಲ್ಲ

ಪ್ರತಿದಿನವೂ ಇಂತಹ ಏನಾದರೂ ಒಂದು ಘಟನೆ ನಡೆದರೆ ಸಂಸಾರದಲ್ಲಿ ಏನಾದರೂ ರುಚಿ ಇರುತ್ತದೆಯೆ? ಈ ಸಣ್ಣ ಪುಟ್ಟ, ಆದರೂ ಮಹತ್ವದ ಪರಿಣಾಮಗಳನ್ನುಂಟುಮಾಡುವ, ವಿಚಾರಗಳು ಈ ಸ್ಥಿತಿಯಲ್ಲಿರುವುದು ಯಾರಿಗಾದರೂ ಗೊತ್ತಾಗುತ್ತದೆಯೋ? ಜನ ತಪ್ಪನ್ನು ಯಾರ ಮೇಲೆ ಹಾಕುತ್ತಾರೆ; ಪ್ರಪಂಚದಲ್ಲಿ ಯಾರು ಕೆಟ್ಟಹೆಸರನ್ನು ಹೊರಬೇಕು?

೩

ನಮ್ಮ ತಂದೆಯವರು ತೀರಿಕೊಂಡ ಕಾಲದಿಂದ, ನಮ್ಮ ಮನೆಗೆ ನಮ್ಮ ತಾಯಿಯವರೇ ದೊಡ್ಡವರೆಂತ ನಾನು ಭಾವಿಸಿಕೊಂಡಿರುತ್ತೇನೆ. ಹಾಗೆ ಭಾವಿಸಕೂಡದೆಂತ ತಮ್ಮ ಅಭಿಪ್ರಾಯವಿದ್ದರೆ ತಿಳಿಸಿ. ನಿಮ್ಮ ಗಂಡು ಮಕ್ಕಳು, ನಿಮ್ಮ ಸೊಸೆ, ನಿಮ್ಮನ್ನು ಯಾವ ರೀತಿ ಗೌರವಿಸಬೇಕೆಂದು ನಿಮ್ಮಿಷ್ಟವಿರುತ್ತದೆಯೋ ಅದೇ ರೀತಿ ನಮ್ಮ ತಾಯಿಯವರಿಗೂ ಇರುವುದಿಲ್ಲವೆ? ಓದು ಕಲಿತ ನಿಮ್ಮ ಸೊಸೆ ನನ್ನ ತಂದೆ ತಾಯಿಗಳನು ಗೌರವಿಸಬೇಡವೇ; ಅವರ ಕಷ್ಟ ಸುಖಗಳಿಗೆ ಆಗಬೇಡವೆ?

ನಮ್ಮ ತಂದೆ ಬದುಕಿರುವವರೆಗೂ ತಮ್ಮ ಮಕ್ಕಳ ಹಂಗು ನಮ್ಮ ತಾಯಿಗೇನೂ ಇರಲಿಲ್ಲ. ಈಗಲೂ ನಮ್ಮಿಂದ ಆಕೆಗೇನೂ ಆಗಬೇಕಾದುದಿಲ್ಲವಾದರೂ, ಪತಿವಿಹೀನಳಾಗಿ ಆಶ್ರಯ ತಪ್ಪಿದ ಆಕೆಗೆ ಉಪಚಾರಕ್ಕಾಗಿಯಾದರೂ ಎರಡು ಸಮಯೋಚಿತವಾದ ಮಾತನ್ನಾಡಲು ನಿಮ್ಮ ಮಗಳಿಗೆ ತೋರದಿದ್ದರೆ–ಭಗವಂತನು ಉತ್ತಮವಾದ ಮನುಷ್ಯಜನ್ಮ ಕೊಟ್ಟು ಏನು ಸಾರ್ಥಕ! ನ್ಯಾಯವಾಗಿ ಯೋಚಿಸಿ ನೋಡಿದರೆ, ಆಕೆಯ ಕರ್ತವ್ಯವಲ್ಲವೆ, ಅಮ್ಮ!

ಹುಟ್ಟಿದವರಿಗೆ ಸಾವು ತಪ್ಪದು. ಅವರು ನಮ್ಮ ಸಂಗಡ ಇನ್ನೂ ನಾಲ್ಕು ದಿನ ಇರುವುದನ್ನು ನಾವು ಪಡೆದು ಬರಲಿಲ್ಲ. ಆದದ್ದು ಆಗಿಹೋಯಿತು. ಅವರು ಹೋಗಿ ತಮ್ಮನ್ನೂ ಇನ್ನೊಬ್ಬರ ಆಶ್ರಯದಲ್ಲಿ ತಳ್ಳಿದರಲ್ಲ

ಎಂಬ ಚಿಂತೆ ತಮಗೆ ಬರದ ಹಾಗೆ ನಾವು ನೋಡಿಕೊಳ್ಳಲು ಪ್ರಯತ್ನಪಡು ತ್ತೇನೆ. ಎಷ್ಟಾದರೂ ನಾವು ನಿಮ್ಮ ಮಕ್ಕಳಲ್ಲವೆ; ಇದುವರೆಗೂ ನಮಗೆ ತಂದೆ ಬೇರೆ ತಾಯಿ ಬೇರೆ ಇದ್ದರು. ಇನ್ನು ಮೇಲೆ ಎರಡೂ ನೀವೆ-ಎನ್ನುವ ಮಾತುಗಳು ಹೃದಯದಿಂದ ಬರದಿದ್ದರೂ ಚಿಂತೆಯಿಲ್ಲ, ಉಪಚಾರ ಕ್ಕಾದರೂ ಆಡದಿದ್ದರೆ ಭಗವಂತನು ಆಕೆಗೆ ಬಾಯಾದರೂ ಕೊಟ್ಟು ಏನು ಸಾರ್ಥಕ!

ಅಥವ ದೊಡ್ಡವರಿಗೆ ಈ ವಿಷಯಗಳನ್ನೆಲ್ಲ ನಾವು ಹೇಳಬಾರದು ಎಂಬ ಅಭಿಪ್ರಾಯದಿಂದ ಹೇಳುವುದಿಲ್ಲವೆನ್ನೋಣವೇ? ಅವರೇನಾದರೂ ತಪ್ಪು ಕಂಡುಹಿಡಿದರೆ, ತಪ್ಪು ಎಂಬುದನ್ನಾದರೂ ಗ್ರಹಿಸಿ ಸುಮ್ಮನಿರು ವುದನ್ನು ಬಿಟ್ಟು, ಅವರು ಹೇಳಿದುದೇ ತಪ್ಪು ಎಂತ ಕ್ಷಮಾಪಣೆ ಕೇಳಿ ಕೊಳ್ಳುವ ವರೆಗೆ, ನಿಮ್ಮ ಮಗಳು ಅತ್ತೆಯನ್ನು ದಂಡಿಸಿದ್ದನ್ನೂ ನಾನು ಕೇಳಿದ್ದೇನೆ. ಹಾಗೆ ಮಾತನಾಡುವುದು ತರವಲ್ಲವೆಂತ ನಾನಾಗಲೀ ಉಳಿ ದವರಾಗಲೀ ಸೂಚಿಸಬೇಕಾದರೆ, ನಮಗೆ ಜ್ಞಾನವಿಲ್ಲದೆಯೋ ಆ ಕೆಲಸಕ್ಕೆ ಪ್ರಯತ್ನಿಸಬೇಕು.

ನಾವು ಹೇಳಿದರೂ ಅವರು ಬರುವುದಿಲ್ಲ. ಆದುದರಿಂದ ನಾವು ಯಾಕೆ ಕರೆಯಬೇಕು. ಅವರಿಷ್ಟಬಂದರೆ ಬರಲಿ. ಇಲ್ಲದಿದ್ದರೆ ಬೇಡ, ಎನ್ನುವ ಭಾವನೆಗಿಂತ ಮರ್ಯಾದೆಗಾಗಿಯಾದರೂ ಕರೆಯುವುದು ನಮ್ಮ ಧರ್ಮ ವಲ್ಲವೆ? ಇವೆಲ್ಲ ಮನುಷ್ಯರಿಗೆ ತಾನಾಗಿ ಬರಬೇಕಾದ ವಿಷಯಗಳು. ಒಬ್ಬರು ಹೇಳಿಕೊಟ್ಟು ಬರಬೇಕಾದುವಲ್ಲ. ಆಕೆಗೆ ಈ ವಿಷಯ ಹೊಳೆಯಲಿಲ್ಲ ವೇನೋ ಎಂತ ನಾನು ಆಕೆಗೆ ಹೇಳಹೋದರೆ, ಆಕೆ ನನಗೆ ಕೊಟ್ಟ ಉತ್ತರ ನಾದರೂ ಏನು!

'ಅವರ ಇಷ್ಟ ಇದ್ದರೆ ಅವರೇ ಬರುತ್ತಾರೆ. ನಾವೇನು ಕರೆಯೋದು!'

೫

ನಿಮ್ಮ ಮಗಳಿಗೆ 'ಹಾಸಿಗೆ ಇದ್ದಷ್ಟು ಕಾಲು ಚಾಚು,' ಎಂಬ ಗಾದೆಯ ಅರಿವೇ ಇಲ್ಲವೆಂತ ಕಾಣುತ್ತೆ. ಇದು ನನ್ನ ಸಂಸಾರವಲ್ಲವೆ, ಇದನ್ನು ನಾನು ಹೇಗೆ ಇಟ್ಟುಕೊಳ್ಳಬೇಕು; ನನ್ನ ಗಂಡನ ವರಮಾನವೇನು,

ಖರ್ಚು ಎಷ್ಟಿರಬೇಕು—ಎಂಬ ಅಭಿಪ್ರಾಯವಾಗಲೀ, ಮಿತವ್ಯಯಮಾಡಿ, ಸಾಧ್ಯವಾದರೆ ಕಷ್ಟಕಾಲಕ್ಕೆ ಒಂದೆರಡು ಪುಡಿಕಾಸನ್ನಾದರೂ ಕೂಡಿಡೋಣವೆಂಬ ಅಭಿಪ್ರಾಯ, ಆಕೆಗೆ ಇಲ್ಲವೇ ಇಲ್ಲವೆಂತ ಕಾಣುತ್ತೆ. ಅಷ್ಟೇ ಅಲ್ಲ, ಆ ಕುತೂಹಲವೂ ಇಲ್ಲ. ನನ್ನ ಒಂದು ತಿಂಗಳ ವರಮಾನವನ್ನು ತಾನೇ ಖರ್ಚುಮಾಡಲೆಂತ ಆಕೆಯ ಕೈಗೇ ಕೊಟ್ಟೂ ಆಯಿತು. ನಾನೇ ಅಂಗಡಿಯಿಂದ ಸಾಮಾನು ತಂದುಹಾಕಿ, ಇಷ್ಟರಲ್ಲಿಯೇ ತಿಂಗಳೆಲ್ಲ ಕಳೆಯಬೇಕು ಎಂದು ಹೇಳಿಯೂ ಆಯಿತು. ಹಣ ಕೊಟ್ಟರೆ ಅದೆಲ್ಲ ತಿಂಗಳ ೨೦ನೆಯ ತಾರೀಖಿನೊಳಗೆ ಖರ್ಚಾಗಿಹೋಗುತ್ತದೆ. ಇನ್ನು ಹತ್ತುದಿನ ಕಳೆಯುವ ವಿಧಾನ! ಹಣ ಇಲ್ಲ, ಸಾಮಾನು ಸಹ ಇಲ್ಲ, ಎಂತ ಬಲವಂತಮಾಡುತ್ತಾಳೆ. ಆಗ ನಾನು ಎಲ್ಲಾದರೂ ಸಾಲಕ್ಕೆ ಹೊರಡಬೇಕು. ಸಾಮಾನು ತಂದು ಹಾಕಿದರೆ ಎಲ್ಲವೂ ಖರ್ಚು! ಅಂಗಡಿಯಲ್ಲಿ ಲೆಖ್ಖ ಇಟ್ಟರೆ ಉಳಿಬಾಳೇ ಇಲ್ಲ! ಹೀಗಲ್ಲ ಹೀಗೆ—ಎಂತ ನಾನೇನಾದರೂ ಹೇಳಹೋದರೆ, 'ನಾನು ಯಾವುದಕ್ಕೂ ಬರುವುದಿಲ್ಲ. ನಿಮ್ಮಿಷ್ಟ ಬಂದಂತೆ ಮಾಡಿಕೊಳ್ಳಿ' ಎಂತ ನನ್ನೊಡನೆ ಜಗಳವಾಡಿ, ಮುಖಗಂಟು ಹಾಕಿಕೊಂಡು ಹದಿನೈದು ದಿನವಾದರೂ ಸರಿ, ಮಾತು ಬಿಟ್ಟು ಇರುತ್ತಾಳೆ.

ಆಕೆಯನ್ನು ಹೇಗೆ ತಿದ್ದಬೇಕೆಂಬುದೇ ನನಗೆ ಹೊಳೆಯದೆ ಇದೆಯಲ್ಲ! ಆಕೆಗೆ ನೀವೇನಾದರೂ ಒಂದೆರಡು ಮಾತು ಹೇಳಲಾರಿರಾ?

೬

ನಿಮ್ಮ ಮಗಳ ದೃಷ್ಟಿಯಲ್ಲಿ 'ನಯ' ನಾಜೋಕಿನ ಪದದ ಅರ್ಥ ಅನರ್ಥವೆಂತ ಕಾಣುತ್ತೆ. ಸಂಸಾರದ ಮುಂದು ಸ್ವಲ್ಪ ಕಡಿಮೆ ಮಾಡೆಂತ ನಾನು ಹೇಳಿದರೆ, ಅದೂ ನಿಂದೆಯಾಡುವಂತಲ್ಲ, ಅದನ್ನು ಆಕೆ ಅರ್ಥಮಾಡಿಕೊಳ್ಳುವ ತರಹ ಎಷ್ಟು ವಿಚಿತ್ರವೆಂಬುದನ್ನು ಈ ಕೆಳಗೆ ನಾನು ಹೇಳಿರುವ ಒಂದೆರಡು ಸಣ್ಣ ವಿಷಯಗಳಿಂದ ನೀವೇ ಗ್ರಹಿಸಿಕೊಳ್ಳಿರಿ. 'ಈ ಸಲ ತುಪ್ಪದ ಖರ್ಚು ಸ್ವಲ್ಪ ಹೆಚ್ಚಿಲ್ಲವೆ!' ಎಂದರೆ–'ನಾನು ತುಪ್ಪ ಹೆಚ್ಚು ಹಾಕಿಕೊಳ್ಳುತ್ತೇನೆಂತ ಅಲ್ಲವೆ, ನೀವು ಹಾಗೆ ಹೇಳುವುದು?' ಎಂತ ತಾನು ತುಪ್ಪ ಬಡಿಸಿಕೊಳ್ಳದೆ, ಸ್ವಲ್ಪ ಖಾರ ಜಾಸ್ತಿಯಾದರೂ 'ಏನು ಬಂತಪ್ಪ,

ಇಂಥ ಕಡೆಗೆ ನನ್ನನ್ನು ನಮ್ಮ ತಂದೆ ತಾಯಿ ಕೊಟ್ಟು, ಪ್ರಾಣ ತೆಗೆಯುತ್ತಾರೆ' ಎಂತ ಗೊಣಗುಟ್ಟುವುದು.

'ಮಗುವನ್ನು ಪಕ್ಕದಲ್ಲಿ ಮಲಗಿಸಿಕೊಳ್ಳಬೇಡ, ಅದು ಪದೇ ಪದೇ ಏಳುತ್ತದೆ. ಕಾಲಕ್ಕೆ ಸರಿಯಾಗಿ ಹಾಲುಕೊಟ್ಟು ತೊಟ್ಟಿಲಿನಲ್ಲಿ ಹಾಕಿಬಿಡು. ಪಕ್ಕದಲ್ಲಿ ಮಲಗಿಸಿಕೊಂಡರೆ ನಿನಗೇ ತೊಂದರೆಯಾಗುತ್ತದೆ. ಜಲಮಲಗಳಿಂದ ಹಾಸಿಗೆ ಸಹ ಕೆಟ್ಟುಹೋಗುತ್ತದೆ' ಎಂದರೆ, 'ಮಗು ಗಲಾಟೆಮಾಡಿ ಅಳುವುದರಿಂದ ನಿಮಗೆ ನಿದ್ರೆ ಕೆಡುವುದಾದರೆ ನೀವು ಆಚೆ ಮಲಗಿಬಿಡಿ. ಹಾಸಿಗೆ ನಮ್ಮ ತಂದೆ ಕೊಟ್ಟಿರುವುದು ತಾನೇ, ಇದು ಹೋದರೆ ಇನ್ನೊಂದು ಹೊಲಿಸಿ ಕೊಡುತ್ತಾರೆ' ಎನ್ನುತ್ತಾಳೆ.

ಸಂಸಾರದ ನಿತ್ಯ ಕಟ್ಲೆಯ ಜೀವನದಲ್ಲಿ ಇಂತಹ ಸಣ್ಣ ಪುಟ್ಟ ವಿಷಯಗಳು ದಿನೇ ದಿನೇ ನಡೆಯುತ್ತಿದ್ದರೆ, ಸಂಸಾರದಲ್ಲಿ ಎಷ್ಟು ಮಟ್ಟಿನ ಉತ್ಸಾಹವಿರಬಹುದು ಎಂಬುದನ್ನು ನೀವೇ ಊಹಿಸಿಕೊಳ್ಳಿರಿ.

ನಾನು ನಿರಕ್ಷರ ಕುಕ್ಷಿಯೆ? ಸಂಸಾರದ ಸೌಖ್ಯವನ್ನು ಅನುಭವಿಸಿ ಶಾಂತಚಿತ್ತದಿಂದ ನಿರಾಲೋಚನೆಯಾಗಿ ಕಾಲವನ್ನು ಕಳೆಯಬೇಕೆಂಬ ಇಷ್ಟ ನನಗಿಲ್ಲವೆ!

ಸಾಮಾನ್ಯವಾಗಿ ಎಲ್ಲರಿಗಿಂತ ಹೆಚ್ಚಾಗಿ ಬಾಹ್ಯ ಪ್ರಪಂಚದ ರೀತಿ ನೀತಿಗಳನ್ನು ನೋಡಿ, ಬೇಸರಗೊಂಡು ಮನೆಗೆ ಬರುವ ನನಗೆ, ಮನೆಯ ಈ ದುರವಸ್ಥೆಯನ್ನು ಕಂಡು, ಇನ್ನೂ ಹುಚ್ಚು ಹಿಡಿಯದಿರುವುದು ಒಂದು ವಿಶೇಷ ವಿಷಯವೆ. ಈ ವಿಷಯದಲ್ಲಿ ಇನ್ನು ಹೆಚ್ಚುಯೋಚಿಸಿದರೆ ಹುಚ್ಚು ಹಿಡಿದುಬಿಟ್ಟೀತೆಂಬ ಭಯದಿಂದಲೂ ನನ್ನ ಮನಸ್ಸು ಅತ್ತಿತ್ತ ಹರಿದಾಡೀತೆಂಬ ಭಯದಿಂದಲೂ, ಮನೆಯೊಳ್ಳಿರುವ ಕಾಲವನ್ನೆಲ್ಲ, ಊಟ ಮಾಡುವಾಗ ಸಹ, ಓದಿನಲ್ಲಿ ಕಳೆಯುತ್ತಿರುತ್ತೇನೆ.

ಹೆಚ್ಚಿಗೆ ಬರೆಯಲಾರೆ. ನನ್ನ ಹೃದಯದ ಯಾತನೆಯನ್ನು ಹೊರಕ್ಕೆ ತೋಡಿ ಇತರರಿಗೆ ತೋರಿಸುವ ಚೈತನ್ಯವಿಲ್ಲ.

ಆಕೆಯೊಡನೆ ಸಂಸಾರ ಮಾಡಿರುವ ಇದಿಷ್ಟು ಕಾಲದಲ್ಲಿ ನಾನು ಸುಖಿ ಎಂತ ಹೇಳಿಕೊಳ್ಳುವ ಗಳಿಗೆಗಳನ್ನು ಲೆಕ್ಕಿಸಬಹುದು. ನನ್ನಿಂದ ಆಕೆಗೆ ಸುಖವಿಲ್ಲ. ಆಕೆಯಿಂದ ನನಗೆ ಸುಖವಿಲ್ಲ.

ಒಬ್ಬರಿಂದೊಬ್ಬರು ಬೇರೆಯಾಗುವುದರಿಂದ ಇಬ್ಬರಿಗೂ ಸುಖವಾಗ

ಬಹುದು. ನಾನು ಅನೇಕಬಾರಿ ಪರೀಕ್ಷಿಸದೆ ಈ ನಿಶ್ಚಯಕ್ಕೆ ಬಂದಿಲ್ಲ. ಯಾವ ವಿಷಯಕ್ಕೂ ಪ್ರವೇಶಿಸದಂತೆ, ಆಕೆಯು ಹೋದ ದಾರಿಯಲ್ಲೇ ಆಕೆಯನ್ನು ಬಿಟ್ಟು ಬಿಟ್ಟು ನೋಡೋಣವೆಂದು ಅನೇಕ ಸಾರಿ ನಿಶ್ಚಯಿಸಿ ಪರೀಕ್ಷೆ ಮಾಡಿದ್ದೇನೆ. ಹಾಗೆ ಮಾಡಿದರೆ ಹುಚ್ಚು ಹೊಳೆಯಲ್ಲಿ ಅಂಬಿಗ ನಿಲ್ಲದ ನಾವೆಯನ್ನು ಬಿಟ್ಟಂತೆಯೇ-ಎಂಬ ವಿಷಯವನ್ನೂ ಮನಗಂಡು ನನ್ನ ಈ ನಿರ್ಧಾರಕ್ಕೆ ಬಂದಿರುತ್ತೇನೆ.

ದೇವರೇ ಸಹಾಯ!

## ೭

ಈಗ್ಗೆ ಎಂಟು ದಿನಗಳಿಂದ ಆಕೆ ತವರು ಮನೆಗೆ ಹೋಗಬೇಕೆಂತ ಆತುರಪಡುತ್ತಿದ್ದಳು. ಆಕೆ ಊರಿನಿಂದ ಬಂದು ಇನ್ನೂ ಎರಡು ತಿಂಗಳು ಸಹ ಆಗಿಲ್ಲ. ವಿಧಿಯಿಲ್ಲದೆ ತಂಪಯುವರ ವರ್ಷಾಬ್ದಿಕವಾಗುವವರೆಗೆ ಆಕೆಯನ್ನು ಅಲ್ಲಿಯೇ ಬಿಟ್ಟಿರಬೇಕಾದ ಕಾರಣದಿಂದಲೂ ಹೋಟಲು ಊಟ, ಪರಾನ್ನ ಇವುಗಳಿಂದ ಇರಲು ಸಾಧ್ಯವಿಲ್ಲವಾದುದರಿಂದಲೂ—ಆಕೆಗೆ ಹೋಗಬೇಡವೆಂತ ಹೇಳುತ್ತಿದ್ದ.

ಈ ದಿನ ನಮ್ಮೂರಿನಿಂದ, ನಮ್ಮ ಅಕ್ಕ ಬಹಳ ದಿನದ ಮೇಲೆ ಬಸಿರಾಗಿರುವಳೆಂತಲೂ ತನಗೆ ಆಕೆಯನ್ನು ಕರೆಸಿ ಉಪಚರಿಸುವ ಶಕ್ತಿ ಸಾಮರ್ಥ್ಯಗಳು ಸಾಲವೆಂತಲೂ ನಮ್ಮ ತಾಯಿಯವರಿಂದ ಕಾಗದ ಬಂತು. ಈ ಕಾಗದವನ್ನು ಮೊದಲು ನೋಡಿಕೊಂಡವಳೇ ಆಕೆ. ಆದರೆ ಏನೂ ಉತ್ತರ ಕೊಡಲಿಲ್ಲ. ನನಗೆ ಇನ್ನು ಹೆಚ್ಚು ಸುಮ್ಮನಿರಲು ಮನಸ್ಸು ನಿಲ್ಲದೆ ನಾವು ಏನು ಉತ್ತರ ಬರೆಯಬೇಕು—ಎಂದೆ. 'ಹದಿನೆಂಟು ವರ್ಷಗಳ ಮೇಲೆ ಬಸಿರಾದ ಹೆಣ್ಣುಮಗಳಿಗೆ ತಂಪೆ ಹೋದೊಡನೆಯೇ ತವರು ಮನೆಯೂ ಹೋಯಿತು ಎಂತ ನೊಂದುಕೊಳ್ಳುವಂತೆ ಮಾಡಬಾರದು. ಆಕೆಯನ್ನು ಇಲ್ಲಿಗೇ ಕರೆತಂದು ಉಪಚರಿಸೋಣ' ಎಂತ ಹೇಳುವ ಔದಾರ್ಯ ಬುದ್ಧಿಯಾಗಲೀ, 'ನಿಮ್ಮಿಷ್ಟ ಬಂದಂತೆ ಬರೆಯಿರಿ, ನನ್ನವೇನೂ ಅಡ್ಡಿಯಿಲ್ಲ' ಎಂಬ ಬುದ್ಧಿವಂತಿಕೆಯ ನುಡಿಯಾಗಲೀ ಆಕೆಯಿಂದ ಬರಲಿಲ್ಲ. ತನಗೆ ತೌರೂರಿನ ಆಶೆಯು ಇರುವಂತೆಯೇ ಆಕೆಗೂ ಇರಬಹುದೆಂದೂ. ತನ

ವರ ಸಮಯಕ್ಕೆ ಆಗದ ಬಾಳು ವ್ಯರ್ಥವೆಂದೂ ತನ್ನ ಗಂಡನ ಮತ ತನ್ನ ಮತವೆಂದೂ ಆಕೆಗೆ ಹೇಳುವ ಸಹನೆ ಇಲ್ಲ! ಅದಕ್ಕೆ ಬದಲು 'ಆಕೆ ಇಲ್ಲಿಗೆ ಬಂದರೆ ನನಗೆ ಕಷ್ಟವಾಗುತ್ತೆ. ಆಕೆಯನ್ನು ಇಲ್ಲಿ ಕರೆಯಿಸುವ ಹಾಗಿದ್ದರೆ ಆಕೆ ಬರುವ ಮೊದಲೇ ನನ್ನನ್ನು ಊರಿಗೆ ಕಳುಹಿಸಿಬಿಡಿ' ಎಂತ ಆಕೆ ಉತ್ತರ ಹೇಳಿದಳು.

ಇದರಿಂದ ನನ್ನ ಮನಸ್ಸಿಗೆ ಎಷ್ಟು ಯಾತನೆಯಾಗಿರಬಹುವೆಂತ ನೀವೇ ಯೋಚಿಸಿಕೊಳ್ಳಿ. ಈಕೆ ಇತರರ ಕಷ್ಟನಿಷ್ಠುರಗಳಿಗೆ ಆದರೆ ಇತರರೂ ಈಕೆಗೆ ಸಹಾಯಮಾಡಲು ಹಿಂತೆಗೆಯುವರೆ! ತವ್ಮು ಮನೆಗೆ ಹೋಗಿರುವ ಹೆಣ್ಣು ಮಕ್ಕಳು ನಮ್ಮ ಮನೆಗೆ ಪದೇಪದೇ ಬರುತ್ತಾರೆಯೇ?

ಆಕೆಗೆ ಈ ವಿಷಯವನ್ನು ತಿಳಿಯಹೇಳಲು ನಾನು ಪಟ್ಟ ಪ್ರಯತ್ನ ನಿರರ್ಥಕವಾಯಿತು.

ಇಷ್ಟೇ ಅಲ್ಲ. ಇದ್ದ ಒಂದೇ ಒಂದು ಮಗುವನ್ನು ಕಳೆದುಕೊಂಡಿರುವ ನನ್ನ ತಂಗಿಯಿಂದ, ಈಗ ಮಗು ಹೋದ ವಿಷಯ ಪತ್ರ ಬಂದಿದೆ. ಆಕೆಯ ಮನಸ್ಸಿನ ದುಃಖವೆಷ್ಟಿರಬಹುದು. ಒಂದೆರಡು ತಿಂಗಳಾದರೂ ಇರಲು ಇಲ್ಲಿಗೆ ಬಂದರೆ ಅಕ್ಕನೂ ಬರುವ ಸಂಭವವಿದೆ. ಆಕೆಯೊಡನೆ ಎರಡು ದಿನ ಇದ್ದು ತನ್ನ ಸಂಕಟವನ್ನು ಮರೆಯಲು ಯತ್ನಿಸಬಹುದು ಎಂಬ ಉಪಚಾರದ ಮಾತುಗಳನ್ನಾದರೂ ಆಕೆಗೆ ಬರೆದು, ಆಕೆಯು ಬಂದರೆ ಗೌರವಿಸಿ, ಆಕೆಯ ವ್ಯಥೆಯನ್ನು ಮರೆಯುವಂತೆ ಮಾಡಬಾರದೆ?

ನಾನು ಈ ವಿಷಯಗಳೊಂದನ್ನೂ ಹೇಳಿಕೊಡದೆ ಆಕೆಯೇ ಇವುಗಳನ್ನೆಲ್ಲ ಸತಃ ಮಾಡಲಿ ಎಂತ ನನ್ನ ಇಚ್ಛೆ! ಆದರೆ ನನಗದೊಂದು ಹುಚ್ಚು! ಅತ್ತೆ, ಅತ್ತಿಗೆ, ನಾದಿನಿ, ಓರಗಿತ್ತಿಯರು ತನ್ನ ಗಂಡನಿಗೆ ಬರೆಯುವ ಪ್ರತಿಯೊಂದು ಪತ್ರದಲ್ಲಿಯೂ ತನ್ನ ಮತ್ತು ಮಕ್ಕಳ ಯೋಗಕ್ಷೇಮವನ್ನು ತಪ್ಪದೆ ವಿಚಾರಿಸುತ್ತಿದ್ದುದನ್ನು ತಾನೇ ಪ್ರತಿಯೊಂದು ಪತ್ರದಲ್ಲಿಯೂ ಓದಿನೋಡಿಕೊಂಡಿದ್ದರೂ,ಅವರ ಯೋಗ ಕ್ಷೇಮ ಸಮಾಚಾರಕ್ಕೆ ತಾನು ಒಂದು ಪತ್ರವನ್ನಾದರೂ ಅವರಿಗೆ ಬರೆಯುವ ಔದಾರ್ಯವನ್ನಾಗಲಿ, ಸಹನೆಯನ್ನಾಗಲೀ ಹೊಂದಿರದಿದ್ದವಳು ಇನ್ನು ಅವರನ್ನು ಸ್ವಾಗತಿಸಿ ಉಪಚರಿಸುತ್ತಾಳೆಯೇ?

ಇನ್ನು ಆಕೆಯೂ ಬಂದು ಬಿಟ್ಟರೆ ನನ್ನ ಗತಿಯೇನು ಎಂತ ಹೊರ

ಡಲು ಸಿದ್ಧವಾಗಿರುತ್ತಾಳೆ!

ಇಂತಹ ಪೂರ್ಣ ವ್ಯತಿರಿಕ್ತ ಮನೋಭಾವನೆಯುಳ್ಳ ಹೆಂಗಸಿನೊಡನೆ ಸಂಸಾರ ಮಾಡುವುದು ಎಷ್ಟು ಹಿತವಿರಬಹುದು!

ಅಥವಾ ಕಟ್ಟಿಕೊಂಡ ಒಬ್ಬ ಹೆಂಗಸಿಗಾಗಿ-ತಂದೆ ತಾಯಿ, ಅಣ್ಣ ತಮ್ಮ, ಅಕ್ಕತಂಗಿ, ಬಂಧುಬಳಗ, ಇಷ್ಟಮಿತ್ರ ಇವರನ್ನೆಲ್ಲ ತ್ಯಜಿಸುವುದು ಒಳ್ಳೆಯದೋ, ಅಥವ ಅವರಿಗಾಗಿ ಒಬ್ಬ ಹೆಂಗಸನ್ನು ತ್ಯಜಿಸುವುದು ಒಳ್ಳೆಯದೋ.

ಅಥವ ಆಕೆಗೆ ಕಷ್ಟ ಬರದಿರುವಂತೆ ತಾನೇ ಸಂಸಾರ ತ್ಯಾಗಿಯಾಗುವುದು ಒಳ್ಳೆಯದೊ, ನೀವೇ ಯೋಚಿಸಿ ಸಲಹೆಕೊಡಿ.

ಅವರು ನನ್ನ ಮನೆಗೆ ಬರುವುದು ಸಹನೆ ಇಲ್ಲದಿರುವುದರಿಂದ. ತಾನು ಹೊರಡಲೇ ಬೇಕಂತೆ. ಏನಾದರೂ ನಿಲ್ಲುವುದಿಲ್ಲವಂತೆ. ಮಕ್ಕಳೆಲ್ಲರನ್ನೂ ಓದುತ್ತಿರುವ ದೊಡ್ಡಮಕ್ಕಳನ್ನೂ ಸಹ ಕರೆದೊಯ್ಯುವಳಂತೆ. ಕೊನೆಯ ಮಗುವಿಗೆ ಖಾಯಿಲೆಯಾಗಿದ್ದು, ಈಗ ಚೇತರಿಸಿಕೊಳ್ಳುತ್ತಿದೆ. ಈಗ ಪ್ರಯಾಣಮಾಡುವುದು ಆ ಮಗುವಿನ ಆರೋಗ್ಯದೃಷ್ಟಿಯಿಂದ ಸೂಕ್ತವಲ್ಲದಿದ್ದರೂ ಇನ್ನೆರಡು ದಿನ ಸಹ ತಡೆಯಲು ಸಾಧ್ಯವಿಲ್ಲವಂತೆ.

ನನ್ನಮನೆಯಲ್ಲಿ ಆಕೆಗೆ ಇರುವುದು ಅಷ್ಟುಕಷ್ಟವಾದರೆ,ಆಕೆ ನಿಮ್ಮಲ್ಲಿ ಇರುವುದರಿಂದ ಸುಖದೊರೆವುದಾದರೆ, ಆಕೆ ಅಲ್ಲಿಯೇ ಇದ್ದು ಸುಖಪಡಲಿ. ಆಕೆ ಸುಖಪಡಲಿ ಎಂಬ ಅಭಿಪ್ರಾಯದಿಂದಲ್ಲದೆ ಬೇರೆ ವಿಧವಾದ ಅಭಿಪ್ರಾಯದಿಂದ ನಾನು ಈ ರೀತಿ ಹೇಳುತ್ತಿಲ್ಲವೆಂಬುದನ್ನು ನನ್ನ ಆತ್ಮವು ಬಲ್ಲುದು.

ಪರಮಾತ್ಮನು ಬಲ್ಲ!

ಸಂಕಟದಿಂದ ಹೃದಯ ತುಂಬಿ ಲೇಖನಿಯನ್ನು ತಡೆದು ನಿಲ್ಲಿಸಿದೆ.

ಹೆಚ್ಚಿಗೆ ಬರೆಯಲಾರೆ!

## ೮

ನನಗೆ.......ಊರಿಗೆ ವರ್ಗವಾಗಿದೆ. ಅದೂ ಹೆಚ್ಚಿನ ಉದ್ಯೋಗ ಮತ್ತು ಸಂಬಳದ ಮೇಲೆ. ನನ್ನ ದೃಷ್ಟಿಯಿಂದ ಸಂತೋಷವೆಂದು ಭಾವಿ

ಸಿದ ನಾನು, ಈ ವಿಚಾರವನ್ನು ನನ್ನ ಹೆಂಡತಿಗೆ ತಿಳಿಸೋಣವೆಂತ ಆತುರ ದಿಂದ ಮನೆಗೆ ಬಂದು ಆಕೆಗೆ ಹೇಳಿದರೆ, ಆಕೆ ಅದಕ್ಕೆ ಏನು ಉತ್ತರ ಕೊಡಬೇಕು! 'ಏನು ಹಾಳು ಕೆಲಸವೋ; ಇದಕ್ಕೆ ಬೆಂಕಿ ಹಾಕ! ಮೂರು ಮೂರು ದಿನಕ್ಕೆ, ಒಂದು ಊರಿಗೆ ಹಂಡಿ ಎತ್ತಿಕೊಂಡು ತಿರುಗುವುದಕ್ಕೆ ಯಾರಿಂದ ಆಗುತ್ತದೆ! ಇಲ್ಲೇ ಇದ್ದು ಬಿಡೋಣ.'

'ಇದು ವಿವೇಕವಿರುವವರ ಮಾತೇ! ಇದರಿಂದ ನನ್ನ ಮನಸ್ಸಿಗೆ ಎಷ್ಟು ತೃಪ್ತಿಯಾಗಬಹುದೆಂತ ನೀನೇ ಊಹಿಸಿಕೊಳ್ಳುವುದೊಳ್ಳೆಯದು.

ಅದು ಅಷ್ಟಕ್ಕೇ ನಿಂತಿತೇ!

ನಾನು ನನ್ನ ಸ್ವಂತ ಸಾಮಾನನ್ನು ಕಟ್ಟಲಾರಂಭಿಸಿದೆ. 'ಇದೇನು, ನೀವು ನಮ್ಮ ಸಾಮಾನು ಕಟ್ಟುವುದಕ್ಕೆ ಮೊದಲೇ ನಿಮ್ಮ ಸಾಮಾನು ಕಟ್ಟಿಕೊಳ್ಳುತಿದ್ದೀರಿ' ಎಂದಳು ನಾನು ಕೆಲಸದ ಮೇಲೆ ಹೋದ ದಿನ ದಿಂದ ಹೆಚ್ಚು ಸಂಬಳ ಬರುವ ಕಾರಣ, ಎಷ್ಟು ಬೇಗ ಹೋದರೆ ಅಷ್ಟು ಒಳ್ಳೆಯದೆಂದೂ, ನಾನು ಅಲ್ಲಿ ಒಂದೆರಡು ದಿನ ಇದ್ದು, ಆ ಮೇಲೆ ಕೆಲವು ದಿವಸ ರಜ[illegible]ಡೆದು ಬರುತ್ತೇನೆ'ಂದೆ.

'ಆಗುವುದಿಲ್ಲ, ನಮ್ಮನ್ನೂ ಕರೆದುಕೊಂಡು ಹೋಗಿ'

'ಹೋದರೆ ಎಲ್ಲಿರಬೇಕು, ಇಳಿಯುವುದೆಲ್ಲಿ?'

'ಎಲ್ಲಿಯಾದರೂ ಇರೋಣ'

'ಎಲ್ಲಿಯಾದರೂ ಇದ್ದರೆ ಹುಚ್ಚರೆನ್ನುತ್ತಾರೆ'

'ಹಾಗಾದರೆ ನಿಮ್ಮಿಷ್ಟವೇನು?'

'ನಾನು ಹೋಗಿಬರುವುದರೊಳಗಾಗಿ ನೀನು ಆಳಿನ ಕೈಲಿ ಸಾಮಾನು ಕಟ್ಟಿಸಿಡು. ಇಂದೋ ನಾಳೆಯೋ, ನಾನು ಇಲ್ಲಿರುವಾಗಲೇ ನಮ್ಮೂರಿಗೆ ಸ್ವಲ್ಪ ಸಾಮಾನು ಸಾಗಿಸೋಣ. ಆ ಮೇಲೆ ಇಲ್ಲಿಯ ಅಧಿಕಾರಿಗಳಿಗೆ ಹೇಳಿ ಹೋಗುತ್ತೇನೆ. ಅವರು ಮೋಟಾರು ಇಲ್ಲಿಗೇ ತಂದು ನಿನ್ನನ್ನು ಸುಖವಾಗಿ ಊರಿಗೆ ತಲಪಿಸುತ್ತಾರೆ. ನೀನು ನಮ್ಮೂರು ಸುಖವಾಗಿ ತಲ ಪುವ ವರೆಗೂ ಆಳು ಮನೆಯ ಬಳಿ ಇರುತ್ತಾನೆ.'

'ನಾನು ನಿಮ್ಮೂರಿಗೆ ಹೋಗಲಾರೆ. ನಿಮ್ಮ ತಾಯಿಯ ಕೈಕೆಳಗೆ ಆಕೆ ಹಾಕಿದ ಹಿಡಿಕೂಳಿಗಾಗಿ ಕಾದು ಕೂತಿರಲಾರೆ. ಅಲ್ಲದೆ ಆಕೆಗೆ ಉಪ ಚಾರ ಮಾಡಲು ನನಗೆ ಶಕ್ತಿ ಸಾಲದು. ಆಕೆಯ ಬಳಿ ಒಂದು ಕ್ಷಣ ಕಳೆ

ಯುವುದು ಒಂದು ಗಂಡಾಂತರ; ಎದ್ದರೆ ತಪ್ಪು, ಕೂತರೆ ತಪ್ಪು. 'ಇಲ್ಲ-ನಮ್ಮ ತಂದೆ ಮನೆಗೆ ಕಳಿಸಿಬಿಡಿ ಅಥವಾ ಇಲ್ಲಿಯೇ ಇದ್ದುಬಿಡುತ್ತೇನೆ. ನಾನು ನಿಮ್ಮೂರಿಗೆ ಹೋಗುವುದಿಲ್ಲ'.

'ಹೀಗೆ ಮೊಂಡಾಟ ಮಾಡಿದರೆ ಹೇಗೆ? ಊರಲ್ಲಿರೋ ಸ್ವಂತ ಮನೆಗೆ ಹೋಗುವುದಿಲ್ಲವೆನ್ನುತ್ತೀಯೆ; ಅಲ್ಲಿಗೆ ಹೋಗಲು ಸ್ವಲ್ಪವೂ ಶ್ರಮವಾಗುವುದಿಲ್ಲ ಅಲ್ಲಿ ಹೋಗಿ ಎರಡು ದಿನ ಇರಬಾರದೇ? ಇಲ್ಲಿ ನಾನು ಇದ್ದರೆ ಆಳುಂಟು. ನಾನು ಹೋದೊಡನೆಯೇ ಅವನೂ ಹೊರಟುಹೋಗುತ್ತಾನೆ. ಆಗ್ಗೆ ನೀನೊಬ್ಬಳೇ ಇಷ್ಟು ದೊಡ್ಡ ಮನೆಯಲ್ಲಿ ಇಷ್ಟು ಹೆಚ್ಚು ಬಾಡಿಗೆ ಕೊಟ್ಟುಕೊಂಡು ಜನಸಹಾಯವಿಲ್ಲವೆ ಇರುವುದು ಹೇಗೆ? ನೀನು ರಾತ್ರೆ ಮಲಗಿ ಬೆಳಗಾಗೆದ್ದು ನೋಡುವುದರೊಳಗಾಗಿ ಮನೆ ದೋಪಾಗಿಹೋಗಿರುತ್ತೆ ಅಂಗಡಿಯಿಂದ ಸಾಮಾನು ತರುವವರಾರು? ಖಾಯಿಲೆ ಬಂದರೆ ಆಸ್ಪತ್ರೆಗೆ ಹೋಗಿ ಮದ್ದು ತಂದುಕೊಟ್ಟು ಉಪಚರಿಸುವವರಾರು? ನಾನು, ಅಲ್ಲಿ ನನ್ನ ಖರ್ಚಿಗೂ ಹಣ ಉಳಿಸಿಕೊಂಡು, ನಿನ್ನ ಖರ್ಚಿಗೂ ಹಣ ಕಳಿಸಿ, ಊರಿಗೆ ನಮ್ಮ ತಾಯಿಗೆ ಅಲ್ಪಸ್ವಲ್ಪವಾದರೂ ಕಳಿಸದಿದ್ದರೆ ಹೇಗೆ? ಆಕೆ ನನ್ನನ್ನು ಹೆತ್ತ ತಪ್ಪಿಗಾದರೂ, ಆಕೆ ಬದುಕಿರುವ ವರೆಗೆ ನನ್ನ ಸಹಾಯ ತಾನಾಗಿ ಅಪೇಕ್ಷಿಸದಿದ್ದರೂ ಆಕೆಯ ಕಷ್ಟಸುಖಗಳನ್ನು ನಾನು ನೋಡಿಕೊಳ್ಳದಿದ್ದರೆ ಜನರು ನನ್ನ ಮುಖಕ್ಕೆ ಸೆಗಣಿ ನೀರು ಹಾಕುವುದಿಲ್ಲವೆ!....'

'ನಿಮ್ಮ ಉಪನ್ಯಾಸ ಸಾಕು, ಇದೇನು ಶಾಲೆಯಲ್ಲ; ಸಭೆಯೂ ಅಲ್ಲ. ನಾನು ಹೋಗುವುದಿಲ್ಲ. ಇಲ್ಲಿಯೇ ಇರುತ್ತೇನೆ. ಇಲ್ಲಿರುವುದು ಇಷ್ಟವಿಲ್ಲದಿದ್ದರೆ ನೀವು ಹೋಗುವ ಕಡೆ ಕರೆದುಕೊಂಡು ಹೋಗಿ ಅಥವಾ ನನ್ನ ತೌರುಮನೆಗೆ ಕಳಿಸಿ'

'ನಾನು ಎಲ್ಲಿರುತ್ತೇನೆಂದು ನೀನು ತಿಳಿದುಕೊಂಡಿರುವೆ?'

'ಎಲ್ಲಿಯೋ, ಯಾರಿಗೆ ಗೊತ್ತು! ಚಿಕ್ಕಪ್ಪನ ಮನೆಗೆ ಹೋಗ್ತೀರಿ, ಇಲ್ಲ ಅಣ್ಣನ ಮನೆಗೆ ಹೋಗ್ತೀರಿ. ನಮ್ಮನ್ನೂ ಅಲ್ಲಿಗೆ ಕರೆದುಕೊಂಡು ಹೋಗಿ.'

'ಮೊನ್ನೆ ಮುಂಜಿಗೆ ಹೋದಾಗ ಜಾಗ ಇಲ್ಲದೆ ಪಟ್ಟ ಅವಸ್ಥೆ ಜ್ಞಾಪಿಸಿಕೋ. ಎದುರು ಮನೆಯವರೂ ಪಕ್ಕದ ಮನೆಯವರೂ ಸ್ಥಳ ಕೊಡದಿದ್ದರೆ ನಾವು ಬೀದೀಲಿ ನಿಲ್ಲಬೇಕಾಗಿತ್ತು ಎಂಬುದನ್ನು ಜ್ಞಾಪಿಸಿಕೋ.

ಚಿಕ್ಕಪ್ಪನವರ ಮನೆಯಲ್ಲಿ ನನಗೇ ಸ್ಥಳ ಸಾಲದೆ ಜಗುಲಿ ಮೇಲೆ ಮಲಗಿದ್ದುದನ್ನು ಮರೆತ ಹಾಗೆ ಕಾಣುತ್ತೆ. ಮಳೆಗಾಲ ಬೇರೆ ಹತ್ತಿರ ಬರುತ್ತಾ ಇದೆ. ನಮಗೆಷ್ಟು ತೊಂದರೆ, ಅವರಿಗೆಷ್ಟು ಹಿಂಸೆ.'

'ನಿಮ್ಮಿಷ್ಟ ಬಂದ ಕಡೆ ನೀವಿರಿ. ನಾನು ಮಕ್ಕಳ ಸಮೇತ ನಮ್ಮ ಚಿಕ್ಕಪ್ಪನ ಮನೆಯಲ್ಲಿರುತ್ತೇನೆ.'

'ಈಗಿನ ಕಷ್ಟಕಾಲದಲ್ಲಿ ನಾವು ಏಕ್‌ದಮ್ ಇನ್ನೊಬ್ಬರ ಮನೆಗೆ ಹೋದರೆ ಅವರು ನಮ್ಮನ್ನು ಸುಧಾರಿಸುವುದು ಹೇಗೆ! ಒಬ್ಬರೇ, ಇಬ್ಬರೇ? ಅದೂ ಒಂದು ಸಂಸಾರ! ರೂಪಾಯಿ ಕೊಟ್ಟರೂ ಒಂದು ಸೇರು ಹಾಲು ಸಿಗುವುದಿಲ್ಲ. ಇಲ್ಲಿಯ ಹಾಗೆ ಮನೆಗೆ ಪುಕ್ಕಟೆ ಗಾಡಿ ಸೌದೆ ಬರುತ್ತೆ ಎಂದು ಕೊಂಡಿದ್ದೀಯ? ಸರದಿ ಕಾದುನಿಂತು, ಒಂದು ರೂಪಾಯಿ ಹಸಿ ಸೌದೆ ತಂದು, ಆಗ ಒಡೆದು ಅಡಿಗೆ ಮಾಡಬೇಕು.'

'ಅವರು ಹೇಗೆ ಮಾಡಿಕೋತಾರೋ ನಮಗೂ ಹಾಗೆಯೇ ಮಾಡ್ತಾರೆ.

'ಅವರ ಪಾಡೇ ಅವರಿಗೆ ಒಂದು ಹೊರೆಯಾಗಿರುವಾಗ ಅವರ ಜೀವದ ಮೇಲೆ ನಾವು ಯಾಕೆ ಬೀಳಬೇಕು!'

'ಹಾಗಾದರೆ ನಮ್ಮ ತಂದೆಯ ಮನೆಗೆ ಕಳಿಸಿಬಿಡಿ.'

'ಆಗಬಹುದು. ಆದರೆ ಅಲ್ಲಿಗೆ ಹೋಗುವ ಮೊದಲು-ಒಬ್ಬ ಆಳಿಗೆ ಇಲ್ಲಿಂದ ಅಲ್ಲಿಗೆ ಹೋಗಲು ಎಷ್ಟು ದುಡ್ಡು ಬೇಕು, ನಿನ್ನ ಸಂಸಾರಕ್ಕೆಷ್ಟು ಬೇಕಾಗುತ್ತೆ, ಅಲ್ಲಿಂದ ಹಿಂತಿರುಗಿ ಬರಬೇಕಾದರೆ ಇನ್ನೆಷ್ಟು ಬೇಕು; ನನ್ನ ಆದಾಯವೇನು, ಎಂಬುದನ್ನು ಲೆಕ್ಕ ಹಾಕಿ ಹೇಳು. ನೀನು ಅಲ್ಲಿಂದ ಬಂದು ಎಷ್ಟು ದಿನವಾಯಿತು ಎಂತ ಜ್ಞಾಪಿಸಿಕೊ!'

'ಹಣ ಸಾಕಾಗದಿದ್ದರೆ ಸಾಲಮಾಡಿ. ನಿಮ್ಮಿಷ್ಟ ಬಂದಂತೆ ನಾನು ಕೇಳಲೇಬೇಕೇನು? ನನ್ನಿಷ್ಟದಂತೆ ನೀವೇಕೆ ನಡೆಯಬಾರದು?'

'ನನ್ನಿಷ್ಟದಂತೆ ನೀನು ನಡೆಯಬೇಕೆಂದು ಹೇಳುವಾಗ ಸೂಕ್ತವಾದ ಸಲಹೆಕೊಟ್ಟರೆ ನಿನ್ನಿಷ್ಟದಂತೆ ನಾನು ನಡೆಯದಿದ್ದರೆ ನನ್ನನ್ನು ದಡ್ಡನೆನ್ನುತ್ತಾರೆ. ಅದು ಸರಿ. ಸಾಲಮಾಡಬಹುದು. ತೀರಿಸುವ ವಿಧಾನ?

'ನಿನ್ನ ಮಾತು ನ್ಯಾಯವೋ, ನನ್ನ ಮಾತು ನ್ಯಾಯವೋ, ನಾಲ್ಕು ಜನರನ್ನು ಕೇಳೋಣ'

'ಹಣದ ಲೆಕ್ಕಾಚಾರ ನನಗೇಕೆ? ನಾಲ್ಕು ಜನರನ್ನು ಯಾಕೆ ಕೇಳ
ಬೇಕು? ಅದರ ಬದಲು ಊರಲ್ಲೆಲ್ಲ ಡಂಗುರ ಹೊಡೆಸಿ ಪಂಚಾಯತಿ
ಏರ್ಪಡಿಸಿ! ಸುಮ್ಮನೆ ಮಾತಾಡಿ ಏನು ಸಾರ್ಥಕ! ಇಲ್ಲ, ನಾನು ಇಲ್ಲಿಯೇ
ಇರಬೇಕು ಅಥವಾ ನಮ್ಮ ತಂದೆ ಮನೆಗೆ ಹೋಗಬೇಕು.'

ನನ್ನ ಮಾತು ಅವಳಿಗೆ ಸರಿಯೆನಿಸಲಿಲ್ಲ. ನಮ್ಮ ಮನೆಗೆ ಹಾಲು
ಮೊಸರು ಕೊಡುವ ಗೌಳಿಗಿತ್ತಿ ಕಾವಾಡಿಗಿತ್ತಿಯರು ನಿಮ್ಮ ಮಗಳಿಗೆ
ವಿವೇಚನೆ ಹೇಳಬೇಕಾಯಿತಲ್ಲ!

ಇಂತಹ ಹೆಂಗಸಿನ ಸಹವಾಸ ನರಕಶಿಕ್ಷೆಯಲ್ಲವೆ ಮತ್ತೇನು!

೬

ಕಳೆದ ಹತ್ತು ಹದಿನೈದು ದಿನಗಳಿಂದ ನನಗೂ ನನ್ನ ಹೆಂಡತಿಗೂ
ನಮ್ಮತ್ತೆಗೂ ನಡೆದ ಮಾತು ಕತೆ ಹೆಚ್ಚು ಕಡಿಮೆ ಕೆಳಗೆ ಬರೆದಿರುವಂತೆ
ಇವೆ. ನಾನು ಬೇಡವೆಂದರೂ ಅದರ ಪ್ರತಿಫಲ ವಿರಸವಾಗಿ ಪರಿಣಮಿಸ
ಬಹುದೆಂದು ಸಾರಿ ಸಾರಿ ತಿಳಿಯಹೇಳಿದರೂ ಕೇಳದೆ, ಆಕೆಯು ತನ್ನಿಷ್ಟ
ದಂತೆ ತನ್ನ ತೌರುಮನೆಗೆ ಹೊರಟಿದ್ದಾಳೆ. ನನ್ನ ಮಾತಿಗಿಂತ, ನನಗಿಂತ
ಆಕೆಗೆ ತೌರೇ ಹೆಚ್ಚು ಪ್ರೀತಿಯ ಅಂಶವಾಗಿರುವುದರಿಂದ, ಅಲ್ಲಿ ಆಕೆಗೆ
ಹೆಚ್ಚು ಸಂತೋಷ ದೊರೆಯಬಹುದಾದುದರಿಂದ ಆಕೆ ಅಲ್ಲಿಯೇ ಇರಲಿ.

'ಸುಮ್ಮನೆ ದಿನ ಈಗ ಕಳೆದು ಹೋಗುತ್ತಿರುವ ಹಾಗೆ ಕಳೆದು
ಹೋದರೆ ಮುಂದಕ್ಕೆ ಏನೂ ಮಾಡೋಕಾಗೋಲ್ಲ. ತೊಂದರೆಯಾಗುತ್ತೆ.
ಇಲ್ಲಿ ಸೂಲಗಿತ್ತಿಯೂ ಇಲ್ಲ. ನಿಮ್ಮೂರಿಗೇ ಹೋಗಬೇಕೆಂಬ ಇಷ್ಟವಿದ್ದರೂ
ಈಗಲೇ ಹೊರಡು. ಆ ಮೇಲೆ ನನಗೂ ತಿಕ್ಕಲ್ ತಿರಗಿ ಮನಸ್ಸು ಬದ
ಲಾಯಿಸಬಹುದು. ಆಗ ನೀನು ಹೋಗುವುದಕ್ಕೆ ಇಷ್ಟ ಪಟ್ಟರೂ ನಾನು
ಕಳಿಸದೆ ಇರಬಹುದು. ಇಲ್ಲಿ ಸೂಲಗಿತ್ತಿ ಕೂಡಾ ಇಲ್ಲ.'

'ನಾನು ಎಲ್ಲಿಗೂ ಹೋಗುವುದಿಲ್ಲ. ಯಾರೂ ಇಲ್ಲಿಗೆ ಬರಬೇಕಾದು
ದಿಲ್ಲ. ನಾನು ಇಲ್ಲಿಯೇ ಇರುತ್ತೇನೆ.'

'ನಮ್ಮ ತಾಯಿಗೆ ಬರುವಂತೆ ಬರೆ; ಅವರು ಸಂತೋಷದಿಂದ ಬಂದು
ನಿನ್ನ ಶುಶ್ರೂಷೆ ಮಾಡುತ್ತಾರೆ. ಮಕ್ಕಳಿಗೋಸ್ಕರ ಹಿರಿಯರು ಪ್ರಾಣ

ಹೋಗುವುದನ್ನೂ ಲೆಕ್ಕಿಸುವುದಿಲ್ಲ. ಇಲ್ಲದಿದ್ದರೆ ನಿನ್ನ ದೊಡ್ಡನಾದಿನಿಗೋ ಅಥವ ಹತ್ತಿರವಿರುವ ಚಿಕ್ಕ ನಾದಿನಿಗೋ ಬರೆ. ಅವರಲ್ಲಿ ಯಾರಾದರೂ ನೀನು ಬರೆದುದೇ ಸಾಕೆಂದು ಬಂದು ನಿನಗೆ ಉಪಚರಿಸುತ್ತಾರೆ. ಅವರೊಡನೆ ಎರಡು ದಿನ ನಕ್ಕು ನಲಿದಾಡು. ಅವರ ಮೇಲೆ ವೃಥಾ ಆಕ್ರೋಶವೇಕೆ? ಅವರಿಗೆ ನೀನು ಹೊರಿಸಿಕೊಟ್ಟಿರುವ ಕನಕ ಕನಕಾಂಬರಗಳೇನು.'

'ನನಗ್ಯಾರೂ ಬಂದುಮಾಡಬೇಕಾಗಿಲ್ಲ. ನಾನೇ ಮಾಡಿಕೋತೇನೆ'

'ಅದು ಹೇಗೆ ನಿನಗೆ ನೀನೇ ಮಾಡಿಕೋತಿಯೋ ನನಗೆ ಗೊತ್ತಾಗೋದಿಲ್ಲ'

'ಹೇಗೆ ಮಾಡಿಕೋತೇನೋ, ನನ್ನ ತಲೆ ಪಾಡು. ಚಂದಣ್ಣ ಅಡಿಗೆ ಮಾಡೋಕೆ ಇದ್ದಾನಲ್ಲ! ಇನ್ನು ಮಿಕ್ಕದ್ದೇನು ಮಹಾ, ನೋಡೋಣ'

ಯಾವಾಗಲೂ ಎಲ್ಲಾ ಒಂದೇ ಸಮನಾಗಿ ನಡೆಯುವುದಿಲ್ಲ. ಆತನಿಗೇ ಆಲಸ್ಯ ಎಂದರೆ, ನಿನಗೂ ಆಲಸ್ಯ ಎಂದರೆ! ನೋಡುವವರಾರು, ಮಾಡುವವರಾರು! ನೋಡು, ಹೋಗುವ ಹಾಗಿದ್ದರೆ ನಮ್ಮೂರಿಗೆ ಹೋಗು. ಅಲ್ಲಿ ನಿಮ್ಮೂರಿಗಿಂತ ಎಲ್ಲ ವಿಷಯದಲ್ಲೂ ಅನುಕೂಲ ಉಂಟು. ಹಾಲು, ಮೊಸರು, ತುಪ್ಪ, ತರಕಾರಿ ಅಗ್ಗವಾಗಿ ಸಿಗುತ್ತೆ. ದೇವರು ಕೊಟ್ಟ ಎರಡು ಕಾಳು ನೆಲ್ಲು ಮನೆಯಲ್ಲಿದೆ. ನನಗೂ ಹೆಚ್ಚು ಹಣ ಖರ್ಚಾಗುವುದಿಲ್ಲ. ನೀನು ನಿಮ್ಮೂರಿಗೆ ಹೋದರೆ, ನನ್ನ ಖರ್ಚಿಗೆ ಹಣ ಇಟ್ಟುಕೊಂಡು, ನಮ್ಮ ತಾಯಿಗೆ ಸ್ವಲ್ಪ ಕಳಿಸಿ, ನಿನಗೂ ಕಳಿಸುವುದೆಂದರೆ ನನಗೆ ಕಷ್ಟವಾಗಬಹುದು.'

'ನನ್ನನ್ನು ನಮ್ಮೂರಿಗೂ ಕಳಿಸಬೇಡಿ, ನನಗೆ ನಿಮ್ಮ ಹಣ ಬೇಡ. ನಿಮ್ಮ ತಾಯಿ ಬಳಿಗೂ ಹೋಗುವುದಿಲ್ಲ. ನಿಮ್ಮವರು ಯಾರೇ ಆಗಲಿ ಬಂದು ನನಗೇನು ಮಾಡಬೇಕಾದ್ದಿಲ್ಲ.'

ಅಂದೇ ಮಧ್ಯಾಹ್ನ ನಾನು ಮನೆಗೆ ಊಟಕ್ಕೆ ಬಂದಾಗ 'ಯಾಕೆ, ಹೇಗಿದ್ದೀಯ' ಎಂದು ಕೇಳಿದೆ.

'ನೀವು ಹೋದ ಮೇಲೆ ಇದುವರೆಗೆ ಐದಾರು ಸಲ ಪ್ರವೃತ್ತಿಯಾಯಿತು. ಸುಸ್ತು, ಸಂಕಟ'

'ನಾನು ಹೇಳಿದ ಹಾಗೆ ಮಾಡು. ಯಾರಿಗಾದರೂ ಬರೆ, ಅಥವ ಊರಿಗೆ ಹೋಗು.'

'ಊಹುಂ'

ಇದಾದ ಎರಡು ದಿನಕ್ಕೆ–'ನಿನ್ನ ಸ್ಥಿತಿ ಬಹಳ ಹೀನವಾಗುತ್ತಿದೆ; ನನ್ನ ಮಾತು ಕೇಳು' ಎಂದೆ.

'ನನ್ನ ಪಾಡು ನಿಮಗ್ಯಾಕೆ! ಇನ್ನೂ ಎರಡು ದಿನವಾದ ಮೇಲೆ ನಮ್ಮ ತಾಯಿಗೆ ಬಾ ಎಂತ ಬರೆದುಹಾಕುತ್ತೇನೆ. ಅವರು ಬರಲು ಹಣ ಕಳಿಸಿ' ಎಂದೆ.

'ಅವರು ಇಲ್ಲಿಗೆ ಬರಲು ನನ್ನ ಅಭ್ಯಂತರವಿಲ್ಲ. ಆದರೆ ಬರುವುದೇ ಒಳ್ಳೆಯದು ಎಂತ ನನಗೆ ತೋರುತ್ತೆ. ನಿಮ್ಮ ತಂದೆಯವರಿಗೆ ವಯಸ್ಸಾಗಿದೆ. ಮೈಯಲ್ಲಿ ಏನಾದರೂ ಒಂದು ವಿಧವಾದ ಆಲಸ್ಯ ನಿತ್ಯ ಇದ್ದೇ ಇರುತ್ತೆ. ದೇಹ ಸ್ಥಿತಿ ಒಂದು ದಿನ ಇದ್ದ ಹಾಗೆ ಇನ್ನೊಂದು ದಿನ ಇರಬೇಕಿಲ್ಲ. ನಾವು ಇರುವುದು ನಮ್ಮ ಸೀಮೆಯ ಪಶ್ಚಿಮದ ಗಡಿ. ಅವರು ಇರುವುದು ಪೂರ್ವದ ಗಡಿ. 250 ಮೈಲಿಗಳಿಗೆ ಕಡಿಮೆಯಿಲ್ಲ. ಪ್ರಯಾಣಕ್ಕೆ ಏನಿಲ್ಲ ಎಂದರೂ ಎರಡು ದಿನಬೇಕು. ಇಲ್ಲಿಗೆ ನಿಮ್ಮ ತಾಯಿ ಬಂದ ಮೇಲೆ ಅಲ್ಲಿ ನಿಮ್ಮ ತಂದೆಯ ದೇಹಸ್ಥಿತಿ ಚೆನ್ನಾಗಿಲ್ಲವೆಂತ ಕಾಗದ ಬರೆದರೆ, ನಿಮ್ಮ ತಾಯಿ ಮನಸ್ಸಿಗೆ ಬಹಳ ತಾಪತ್ರಯವಾಗುತ್ತೆ. ವಯಸ್ಸಾದ ರೋಗಿ ಗಂಡನನ್ನು ದೂರ ಬಿಟ್ಟು, ಇಲ್ಲಿ ನಿರಾಲೋಚನೆಯಾಗಿರುವ ಹಾಗಿಲ್ಲ. ಪೂರ್ಣ ಗರ್ಭಿಣಿಯಾದ ಮಗಳನ್ನು ಬಿಟ್ಟು ಹೋಗುವ ಹಾಗೂ ಇಲ್ಲ.

'ಸಾಲದ್ದಕ್ಕೆ ಈ ಕಷ್ಟಕಾಲದಲ್ಲಿ ನಾವು ಒಬ್ಬರ ಮೇಲೆ ಹೋಗಿ ಬೀಳುವುದು ಚೆನ್ನಾಗಿರುವುದಿಲ್ಲ.'

'ನೀವು ಹಣ ಕಳಿಸಿ. ನಮ್ಮ ತಂದೆ ದೇಹಸ್ಥಿತಿ ನೋಡಿಕೊಂಡು ನಮ್ಮ ತಾಯಿಗೆ ಬರಲು ಸಾಧ್ಯವಾದರೆ ಬಾ, ಎಂತ ಬರೀತೇನೆ'.

'ಇದರಿಂದ ನನಗೆ ಹಣ ಖರ್ಚು, ನಿನಗೆ ಸುಖವಿಲ್ಲ; ನಿಮ್ಮ ತಾಯಿ ಇಲ್ಲಿಗೆ ಬಂದ ಮೇಲೆ, ನಿಮ್ಮ ತಾಯಿ ಜೊತೇಲಿ ನೀನು ಹೋಗಬೇಕೆಂದರೆ ನಾನು ಕಳಿಸುವುದಿಲ್ಲ. ಯಾಕೆ ಅಂದರೆ–ನಿಮ್ಮ ತಾಯಿಯವರು ಬಂದು ಹೋಗುವುದಕ್ಕೆ ಬೇಕಾದಷ್ಟು ಹಣ ಖರ್ಚಾಗುತ್ತೆ. ಅವರು ಬರೋದು, ಹೋಗೋದು, ನೀನು ಹೋಗೋದು, ಇಷ್ಟಕ್ಕೂ ಎಷ್ಟು ದುಡ್ಡು ಬೇಕಾಗುತ್ತೆ, ಲೆಕ್ಕ ಹಾಕಿಕೊ.'

'ನೀವು ಹಣ ಕಳಿಸ್ತೀರೋ ಇಲ್ಲವೋ'

ಇದಾದ ಎಂಟು ದಿನಕ್ಕೆ ನಮ್ಮ ಅತ್ತೆ ನಮ್ಮ ನವರೊಡನೆ ನಡೆದ ಮಾತು ಕತೆ:-

'ಈ ದರಿದ್ರ ಕೊಂಪೇಲಿ ನನ್ನ ಕೈಲಿ ಸಾಧ್ಯವಿಲ್ಲಪ್ಪ; ನಮ್ಮೂರಿಗೆ ಕಳಿಸಿಕೊಂಡು, ಕರಕೊಂಡು ಹೋಗಿ ನನ್ನ ಕೈಲಾದಷ್ಟು ಮಟ್ಟಿಗೆ ಮಾಡಿ ಕಳುಹಿಸುತ್ತೇನೆ.'

'ಅದಾಗೊಲ್ಲ, ಹೋಗೋ ಹಾಗಿದ್ದರೆ ನೀವು ಹೊರಟುಹೋಗಿ, ಇದು ಒಳ್ಳೇ ಸ್ಥಳ ಅಲ್ಲ, ಅಲ್ಲಿಗೇ ಕರೆಸಿಕೊಳ್ಳಿ, ಎಂತ ಬರೆದಿದ್ದಾಗ ಕವಳ ಕಿವಿಲಿ ಇಟ್ಟುಕೊಳ್ಳುತ್ತಿದ್ದೀರಾ? ಇದೋ ಹಾಗಿದ್ದರೆ ಇರಿ, ಇಲ್ಲದಿದ್ದರೆ ನೀವು ಹೊರಡಬಹುದು. ಲೋ ರಂಗಪ್ಪಾ, ಅಮ್ಮಾವರು ನಾಳೆ ಊರಿಗೆ ಹೋಗ್ತಾರಂತೆ ರೈಲು ಹತ್ತಿಸಿ ಬಾಪ್ಪ... ....'

ಇದಾದ ಎರಡು ದಿನಕ್ಕೆ-

'ನಾನು ಏನು ಹೇಳಿದೆ, ನಿಮಗೆ? ನಿಮ್ಮ ಹಿಂದೇನೇ ಬಂದಿದೆ, ಕಾಗದ. ಮಾವನವರಿಗೆ ಮೈ ಹುಷಾರಿಲ್ಲ ಅಂತ. ಏನು ಮಾಡ್ತೀರಿ ಈಗ'?

'ಮಾಡೋದೇನು, ನಾನು ಊರಿಗೆ ಹೋಗಲೇ ಬೇಕು. ನಾನು ಇಲ್ಲಿ ಇರೋಕೆ ಆಗೋದಿಲ್ಲ. ಅವರನ್ನು ಬಿಟ್ಟು ಇರೋಕೆ ಸಾಧ್ಯವಿಲ್ಲ'

'ಹಾಗಾದರೆ ಹೊರಡಿ'

'ಇವಳನ್ನು ಏನು ಮಾಡಬೇಕು? ಇವಳ ದೇಹಸ್ಥಿತಿ ಉತ್ತಮವಾಗ ಲಿಲ್ಲ, ಇವಳನ್ನೂ ಕಳಿಸಿದರೆ ಕರೆದುಕೊಂಡು ಹೋಗುತ್ತೇನೆ'

'ನಾನು ಹೀಗೆಲ್ಲ ಆಗುತ್ತೆ ಎಂತ ಮೊದಲೇ ಹೇಳಿದ್ದೆ.'

'ಹೇಗಪ್ಪ ಈಗ? ಇವಳನ್ನು ಬಿಟ್ಟು ಹೋಗೋಕೂ ಮನಸ್ಸಿಲ್ಲ ಇರೋದಕ್ಕೆ ಆಗೋದಿಲ್ಲ.'

'ನೀವು ಹೊರಡಿ, ನಮ್ಮ ಪಾಡು ಹೇಗಾದರೂ ಆಗುತ್ತೆ. ನಮ್ಮವ ರಿಗೆ ಯಾರಿಗಾದರೂ ಬರೆದು ಹಾಕು ಎಂತ ಹೇಳಿ.'

'ನಾನು ಇಲ್ಲಿಗೆ ಬಂದ ದಿನದಿಂದ ಹೇಳ್ತಾ ಇದೇನೆ. ನಿಮ್ಮ ಅತ್ತೆಯವ ರಿಗೆ ಬರೆದು ಹಾಕೆಂತ. ಅವಳು ಕಿವೀ ಮೇಲೆ ಹಾಕಿಕೊಳ್ಳಲಿಲ್ಲವಲ್ಲ!'

'ಅವಳ ಹಣೆಬರಹ ಎಂತ ಬಿಟ್ಟುಹೋಗಿ.'

'ಅವಳೊಬ್ಬಳನ್ನೇ ಬಿಟ್ಟು ಹೋಗೋದು ಹೇಗೆ? ತಳಿದು, ಕರ ಕೊಂಡು ಹೋಗುತ್ತೇನೆ.'

'ಇದುವರೆಗೂ ನೀವೆಲ್ಲ ಹೇಳಿದ ಹಾಗೆ ಕೇಳಿ ನನಗೆ ಬೇಜಾರಾಗಿದೆ. ಆದ್ದರಿಂದ ನಾನು ಹೇಳುವುದರಲ್ಲಿ ಯಾವುದು ನಿಮಗೆ ಇಷ್ಟವೋ ಅದನ್ನು ಮಾಡಿ. ಒಂದನೆಯದು,-ದೇವರ ಮೇಲೆ ಭಾರಹಾಕಿ, ತಾನು ಮೊದಲು ಯಾರ ಹಂಗೂ ಬೇಡ ಎಂತ ಹೇಳ್ತಾ ಇದ್ದ ಹಾಗೆ ಇದ್ದು ಬಿಡೋದು; ಎರಡನೆಯದು-ನಮ್ಮತಾಯಿ ಬಳಿ ಹೋಗುವುದು; ಮೂರನೆಯದು-ನಮ್ಮ ತಾಯಿಯನ್ನೋ ಅಕ್ಕ ತಂಗಿಯರಲ್ಲಿ ಯಾರನ್ನೂ ಬೇಕಾದರೆ ಅವರನ್ನು ಕರೆಸುವುದು. ಇವೇ ಆಗೊಲ್ಲ ಅಂತ ಅಂದರೆ, ನಿಮ್ಮ ಹಿಂದೆ ಹೋಗುವುದು. ನಿಮ್ಮ ಹಿಂದೆ ಈಗ ಹೋಗೋಕೆ ಅಭ್ಯಂತರ ಇಲ್ಲ, ಆದರೆ ಪುನಃ ನನ್ನ ಮನೆಯೊಳಗೆ ಕಾಲಿಡಕೂಡದು. ಗಂಡನ ಮನೆಬೇಕೋ ತೌರು ಮನೆಬೇಕೋ ಹೇಳಿಬಿಡಲಿ.'

'ಹಾಗೆ ಹೇಳಿದರೆ ಹೇಗಾಗುತ್ತೆ' 'ಅಷ್ಟು ಖಂಡಿತವಾಗಿ ಹೇಳಿದರೆ ಹೇಗೆ?' 'ಖಂಡಿತವೇ ಮತ್ತೆ. ಇದೇನು ಸಂಸಾರವೋ ಮಕ್ಕಳಾಟವೊ; ನೀವು ಮಾಡುವುದು ಸರಿಯಾದರೂ ಆಗಿರಲಿ, ತಪ್ಪಾದರೂ ಆಗಿರಲಿ, ನಿಮ್ಮ ಮೂಗಿನ ನೇರಕ್ಕೇ ಎಲ್ಲವೂ ಎಷ್ಟು ದಿನ ನಡೆಯುವುದು?'

'ಹೀಗೆಲ್ಲ ಹೇಳಿದರೆ ನನಗೆ ಏನೂ ತೋಚುವುದಿಲ್ಲ!'

'ಹಾಗಾದರೆ ನಾನು ಹೇಳಿದಂತೆಕೇಳಿ ನಿಮ್ಮಪಾಡಿಗೆ ನೀವು ಹೋಗಿ'

'ನಾನೊಬ್ಬಳೇ ಹೋಗುವುದಿಲ್ಲ. ಅವಳನ್ನೂ ಕಳಿಸು!'

'ನಿಮ್ಮಿಷ್ಟ'

ಈ ಸಾರಿ ತೌರುಮನೆಗೆ ಆಕೆ ಹೋದರೆ ಪುನಃ ನನ್ನಲ್ಲಿಗೆ ಬರಕೂಡದೆಂತ ನಾನು ಸಾರಿಸಾರಿ ಹೇಳಿದಾಗ್ಯೂ ಆಕೆ ನನ್ನ ಮಾತು ಲಕ್ಷಿಸದೆ ನಿಮ್ಮಲ್ಲಿಗೇ ಬಂದಿರುತ್ತಾಳೆ. ಅದರಿಂದ ನನಗಿಂತ ನಿಮ್ಮಲ್ಲೇ ಹೆಚ್ಚು ವಿಶ್ವಾಸವಿದೆ. ನನ್ನ ಬಳಿಗಿಂತ ನಿಮ್ಮ ಬಳಿಯಲ್ಲೇ ಹೆಚ್ಚು ಸೌಖ್ಯವಿದೆ ಎಂತ ನಾನು ಹೇಳಬೇಕಾಗುತ್ತೆ. ಹಿಂತಿರುಗಿ ಬರಕೂಡದು ಎಂತ ಹೇಳಿದರೂ ಆಕೆ ಹೋಗಿರುವುದರಿಂದ ಹಿಂತಿರುಗಿ ಬರಲು ಆಕೆಗೆ ಇಷ್ಟವಿಲ್ಲವೆಂತ ತಾನೆ ಅರ್ಥವಾಗುವುದು?

ಆದ್ದರಿಂದ ಆಕೆ ನಿಮ್ಮಲ್ಲೇ ಸುಖವಾಗಿರಲಿ. ಇನ್ನು ಮೇಲೆ ನನ್ನ ದಾರಿ ನನಗೆ; ಆಕೆಯ ದಾರಿ ಆಕೆಗೆ.

---

# 3. 'ಮತ್ತೆ'

ಎದೆ ಮೇಲೆ ಮಲಗಿ ನಿದ್ದೆ ಮಾಡುತ್ತಿದ್ದ ತನ್ನ ಮಗುವಿನ ಅಳುವಿನಿಂದಲೂ ಅದರ ಪುಟ್ಟ ಕಾಲುಗಳ ಒದೆತದಿಂದಲೂ ಎಚ್ಚರಗೊಂಡ ತಿಮ್ಮಿ ಅವನ ಬಾಯಿಗೆ ಮೊಲೆಯೂಡಿ, ಹಾಗೆಯೇ ದೂಳು ಬಾಜಾಳ ಮುಚ್ಚಿಕೊಳಕಾಗಿದ್ದ ಕಲ್ಲಿನ ಛಾವಣಿಯನ್ನು ನೋಡುತ್ತಾ ಆಲೋಚಿಸ ಹತ್ತಿದಳು.

ಚೈತ್ರಮಾಸದ ಆದಿಯಾದುದರಿಂದ ಆಗಲೇ ಬೆಳಕಾಗಿ, ಆ ಬೆಳಕು ಹರಕಲು ಗೋಣಿ ತಾಟನಿಂದ ಎರಡು ಕಂಬಗಳ ನಡುವೆಯೂ ಮುಂದೂ ಮರೆಮಾಡಿದ್ದ ಸ್ವಲ್ಪ ಪ್ರದೇಶವನ್ನುಳಿದು ಉಳಿದೆಡೆ ತಾನೇ ತಾನಾಗಿತ್ತು.

ಅವಳು ವಾಸವಿದ್ದುದು ಬೆಂಗಳೂರು ತುಳಸೀತೋಟದ ಪೂರ್ವಕ್ಕೆ ಇರುವ ಪೂರ್ಣಯ್ಯನವರ ಛತ್ರದ ವಸಾರೆಯಲ್ಲಿ. ಅವಳಂತಹ ಭಿಕಾರಿಗಳು, ಆ ವಸಾರೆಯಲ್ಲಿ ಬೇಕಾದಷ್ಟು ಮಂದಿ ಇದ್ದರು. ಪ್ರತಿ ಒಬ್ಬರಿಗೂ ಬಂದಿದ್ದುದು ಎರಡು ಕಂಬಗಳ ಮಧ್ಯೆ ಇರುವಷ್ಟು ಸ್ಥಳ. ಅಕ್ಕಪಕ್ಕದಲ್ಲಿ ತಮ್ಮಂತೆಯೇ ವಾಸಮಾಡುತ್ತಿದ್ದ ಭಿಕಾರಿಗಳೂ ವರಾಂಡದ ಆಚೆ ಇದ್ದ ಹೆಬ್ಬಾರ್ ಹಾಸ್ಟೆಲ್ ವರಾಂಡಕ್ಕೂ, ಹೆಬ್ಬಾರ್ ಹಾಸ್ಟೆಲಿಗೂ ಮಧ್ಯೆ ಇದ್ದ ಓಣಿಯಲ್ಲಿ ಓಡಾಡುವ ಜನರೆಲ್ಲರೂ ತಮ್ಮ ಸಂಸಾರದ ವೈಖರಿಯನ್ನು ಕಾಣದಿರಲೆಂತ ಮೂರು ಕಡೆ ಬಯಲಾಗಿದ್ದ ಪ್ರದೇಶವನ್ನೆಲ್ಲಾ ಹರಕು ಗೋಣಿಯ ತಾಟನಿಂದ ಮರೆಮಾಡಿದ್ದರು. ಅದೂ ನೆಲದ ಮಟ್ಟದಿಂದ ಸುಮಾರು ಆಳು ಪ್ರಮಾಣದಷ್ಟು ಎತ್ತರ ಇದ್ದು, ಮೇಲೆ ಬಯಲಾಗಿತ್ತು.

ಅದೂ ಮೂರು ದಿನಕ್ಕಿಂತ ಹೆಚ್ಚಾಗಿ ಅಲ್ಲಿರಲು ಆ ಛತ್ರದ ಕಾವಲುಗಾರನಿಗೆ ಮಾಮೂಲನ್ನು ಕೊಟ್ಟು!

ಅಬ್ಬ! ಆ ಪ್ರದೇಶ ತಿಪ್ಪೆಗಿಂತ ಕೊಳಕೂ ಅಸಹ್ಯವೂ ಆಗಿತ್ತು. ಯಾಕೆಂದರೆ ತಿಪ್ಪೆ ಗುಣಿಯಲ್ಲಿ ಮಾತ್ರ ಇರುತ್ತೆ. ಇಲ್ಲೋ! ಯಾವಕಡೆ ನೋಡಿದರೂ ಕೊಳಕಿನ ರಾಶಿ. ಇದರ ಜೊತೆಗೆ ಚರಂಡಿ ಮತ್ತು ಹೇಸಿಗೆಯ ನಾತ.

ಕೊಳಕಿನ ಜೊತೆಗೆ ಅಲ್ಲಿ ಒಡೆದು ಕಾಣಿಸುತ್ತಿದ್ದುದು ಸೋಮಾರಿತನ. ಅದಕ್ಕಿಂತ ಹೆಚ್ಚಾಗಿ ನಿರಾಶೆಯಿಂದ ಆವೃತವಾದ ಬಡತನ. ಆ

ಮೂಲೆಯಲ್ಲಿಷ್ಟು ಈ ಮೂಲೆಯಲ್ಲಿಷ್ಟು ಇಟ್ಟಿದ್ದ ಒಡಕು ಮಡಿಕೆ, ಹರಕು ಚಿಂದಿಯನ್ನು ಬಿಟ್ಟರೆ, ಅಲ್ಲಿ ಬೇರಾವ ವಸ್ತುವೂ ಇರಲಿಲ್ಲ.

ಮಾನವನ ಸಂಸಾರದ ಜೀವನಕ್ಕೆ ಅವೆಷ್ಟು ಕಡಿಮೆ ವಸ್ತುಗಳು ಸಾಕೆಂದು ಅದು ತೋರಿಸುತ್ತಿದೆಯೋ ಎಂಬಂತೆ ಕಾಣಿಸುತ್ತಿತ್ತು.

ಮೊಲೆಯುಂಡು ತೃಪ್ತಿಪಟ್ಟು ಮಗು ಹಾಗೆಯೇ ಅವಳ ಎದೆಯ ಮತ್ತು ತೋಳುಗಳಿಂದ ಹುಟ್ಟಿದ ಹಿತವಾದ ಸುಖಕ್ಕೆ ಅವಳ ಕುತ್ತಿಗೆಯ ಸಂದಿಯಲ್ಲಿ ತಲೆಯಿಟ್ಟು ನಿದ್ದೆ ಮಾಡಿತು. ಅವನ ಚಿಂಪರು ಕೂದಲಿನ ತಲೆಯ ಮೇಲೆ ಕಾಣಿಸುತ್ತಿದ್ದ ತಾಯ ಮುಖ ಶಿಲಾಪ್ರತಿಮೆಯಂತಿತ್ತು.

ಎರಡು ದಿವಸಗಳ ಹಿಂದೆ ಅವಳ ಗಂಡ ಅವಳಿಗೆ 'ನೀನು ನನಗೆ ಬೇಕಿಲ್ಲ'ವೆಂತ ಹೇಳಿ ಹೊರಟುಹೋಗಿದ್ದ ಮತ್ತು ಹಾಗೆ ಹೋಗುವ ಮುನ್ನ, ಪುನಃ ಅವಳ ಬಳಿಗೆಂದಿಗೂ ಬರುವುದಿಲ್ಲವೆಂದೂ ಆಣೆಯಿಟ್ಟು ಕೊಂಡಿದ್ದನು. ಆದರೆ ಇದರಿಂದ ಅವಳಿಗೇನು ಹೆಚ್ಚು ಸಂಕಟವಾಗಲಿಲ್ಲ ಏಕೆಂದರೆ ಹುಟ್ಟಿದಾಗಿನಿಂದ ಕಷ್ಟಪರಂಪರೆಗಳನ್ನನುಭವಿಸುತಿದ್ದು, ಅವಳಿಗೆ ತಲೆ ತಗಲಿ, ಗಂಡನಿಲ್ಲದ ಬಾಳು ಎಂತಹದಿರಬಹುದೆಂದು ಆಲೋಚಿಸಿದ್ದಳು.

ಅವಳ ತಂದೆ ಮಧುಗಿರಿ ತಾಲೂಕು ಚಿಕ್ಕ ಮಾಲೂರಿನ ಹಾವಡಿ ಕೊರಚ. ಅವಳಿಗೆ ಬುದ್ಧಿ ಬಂದ ಲಾಗಾಯ್ತು ಅದೆಷ್ಟು ಸಲವೋ, ಅವಳ ತಂದೆಯ ಮನೆಯನ್ನು 'ಝುತ್ತಿ ಮಾಡಿ, ಅವನನ್ನು ಹಿಡಿದು ಪೋಲೀಸಿನವರು ಕೊಂಡೊಯ್ದಿದ್ದರು. ಅವಳು ದೊಡ್ಡವಳಾದ ಮೇಲೆ ಒಂದು ಸಲ ಯಲಹಂತದಿಂದ ಅವಳ ಸೋದರತ್ತೆಯ ಮಗ ಮನೆಗೆ ಬಂದಿದ್ದ. ಅವನು ಬಂದು ಒಂದೆರಡು ದಿನಗಳೊಳಗಾಗಿ ಗೌರಿಬಿದನೂರು ಪೋಲಿಸಿನವರು ಅವನನ್ನರಸಿಕೊಂಡು ಬಂದಿದ್ದರು. ಅವನನ್ನು ಬಚ್ಚಿಟ್ಟು ಅವನು ಬರಲೇ ಇಲ್ಲವೆಂದು ಅವಳ ತಂದೆ ಸಾಧಿಸಿಬಿಟ್ಟ. ಪೋಲಿಸಿನವರು ಹೋದ ರಾತ್ರಿಯೇ, ತಾನು ಬೇಡವೆಂದು ಎಷ್ಟು ಹಠಮಾಡಿದರೂ ಅವನಿಗೆ ತನ್ನ ತಂದೆ ತನ್ನನ್ನು ಕೊಟ್ಟು ಲಗ್ನಮಾಡಿದ. ಲಗ್ನವಾದ ಮೇಲೆ ಗಂಡನನ್ನು ಒಲ್ಲೆ ಎನ್ನುವುದಕ್ಕಾಗುತ್ತದೆಯೆ? ಗಂಡನ ಸುಖವನ್ನು ಇನ್ನೂ ಮೂರು ದಿವಸ ಅನುಭವಿಸಿರಲಿಲ್ಲ. ಗೌರಿಬಿದನೂರು ಪೋಲಿಸನವರು ಅವನನ್ನು ಪುನಃ ಹಿಡಿದೊಯ್ದರು. ಎಳೆ ವಯಸ್ಸಿನಲ್ಲಿ ಸುಖದ ರುಚಿಯನ್ನು ಮೂರೇ

ದಿನಗಳು ಕಂಡಿದ್ದ ಅವಳಿಗೆ, ಸುಖ ವಂಚಿತವಾದೊಡನೆಯೇ ತನ್ನ ತಂದೆ ಕನಬಸ್ಸು ತನ್ನ ಗಂಡ ಮಾಡವಂತೆ, ತನ್ನ ಕೈಯಲ್ಲಾಗುವ ಪ್ರಯತ್ನ ವನ್ನೆಲ್ಲಾ ಮಾಡುತ್ತೇನೆಂದು ಶಪಥಮಾಡಿ, ತನ್ನ ತಂದೆ ತಾನು ಗೋರಿ ಬಿದನೂರಿಗೆ ಹೋಗಕೂಡದೆಂದು ಕಟ್ಟಾಜ್ಞೆಮಾಡಿದ್ದರೂ,ಅವನ ಅಪ್ಪಣೆ ಯನ್ನುಲ್ಲಂಘಿಸಿ, ಗೋರಿಬಿದನೂರಿಗೆ ಒಬ್ಬಳೇ ನಡೆದು ಹೋಗಿದ್ದಳು. ಅಲ್ಲಿ ಪೋಲಿಸ್ ಅಧಿಕಾರಿಯನ್ನು ಕಂಡು ಅವನೊಡನೆ ತನ್ನ ಕಷ್ಟಗಳ ನ್ನೆಲ್ಲಾ ಆತನ ಮನಸ್ಸಿಗೆ ತಟ್ಟುವಂತೆ ಹೇಳಿಕೊಂಡಿದ್ದಳು. ಆತನು ತನ್ನ ಗಂಡನ ಬಳಿ ತನಗೆ ಮಾತಾಡಲು ಅವಕಾಶಕೊಟ್ಟು, ನ್ಯಾಯಾಧಿಕಾರಿಗ ಳಿಗೆ ಹೇಳಿ, ಕಡಿಮೆ ಶಿಕ್ಷೆಯನ್ನು ಕೊಡಿಸಿ ಜೀವನೋಪಾಯಕ್ಕೆ ತಾವು ಮಾಡುತ್ತಿದ್ದ ವೃತ್ತಿಯನ್ನು ಸೂಚಿಸಿದ್ದನು.

ಆತನ ಸಲಹೆಯಂತೆ ಕಾಗದದ ಹೂವು ಮತ್ತು ಟೋಪುಗಳನ್ನು ಮಾರಿ, ಏಸಿರಿ ಇಲ್ಲದಿದ್ದರೂ ಬಡತನದಲ್ಲಿ ಮಾನವಾಗಿ ಕಾಲಕಳೆಯುತ್ತಿ ದ್ದರು. ಆದರೂ ಅವಳ ಗಂಡ ಆಗಾಗ್ಯೆ ಎಲ್ಲಿಯೋ ಹೋಗುತ್ತಿದ್ದ. ಪುನಃ ಬಂದಾಗ ಅವಳ ಕೈ ಕಾಲಿಗೆ ಬಿದ್ದು ಇನ್ನು ಮುಂದೆ ಹೋಗುವುದಿಲ್ಲವೆನ್ನು ತ್ತಿದ್ದ. ಇದು ತನ್ನ ಹಣೆಬರಹವೆಂದು ಅವಳು ಅಂದುಕೊಳ್ಳುವ ಸ್ಥಿತಿಗೆ ಬಂದಿದ್ದಳು.

ಅವನಿಗಿಂತ ಅವಳೇ ಅವರ ವೃತ್ತಿಯಲ್ಲಿ ಹೆಚ್ಚು ಹಣ ಸಂಪಾದಿಸು ತ್ತಿದ್ದಳು. ಶಿಶುವಿನ ಭಾರವನ್ನು ಹೊತ್ತು, ಒಂದು ಕಡೆ ಸ್ವಲ್ಪ ವಾಲಿದ್ದ, ಅರೆದಲೆದು ಆಯಾಸಗೊಂಡ ಅವಳ ಮುಖವನ್ನು ನೋಡಿಯೋ ಅಥವಾ ಅವಳ ಶಿಶುವಿನ ಕಡೆಗೆ ಕನಿಕರದಿಂದ ನೋಡಿಯೋ, ಅವಳ ಬಳಿ ಹೂವು, ಟೋಪುಗಳನ್ನು ಕೊಳ್ಳುವವರು ಬಹಳ ಚೌಕಶಿಮಾಡುತ್ತಿರಲಿಲ್ಲ. ನಿಜವಾ ಗಿಯೂ ಅವನು ಸಂಪಾದಿಸಿ, ತನ್ನ ಹೆಂಡತಿ ಮಗುವನ್ನು ಸಾಕುವುದು ಬಿಟ್ಟು, ಅವಳೇ ಅವನನ್ನು ಸಾಕುತ್ತಿದ್ದಳು. ಅಷ್ಟೇ ಅಲ್ಲ. ಅವನು ಅವ ಳಿಗ ಕೊಡುವುದಕ್ಕಿಂತ ಹೆಚ್ಚಾಗಿಯೇ ಅವಳಿಂದ ಕಸಿದುಕೊಳ್ಳುತ್ತಿದ್ದನು.

ಆದರೂ ಅವಳಿಗೆ ವ್ಯಸನವಾಗುತ್ತಿರಲಿಲ್ಲ. ಅಂದು ಅವಳಿಗೆ ವ್ಯಥೆ ಯಾಗಿದ್ದುದು—ಅವಳ ಗಂಡನು ಅವಳನ್ನು ತ್ಯಜಿಸಿಹೋದುದಕ್ಕಲ್ಲ. ಹೀಗೆಯೇ ಹೋಗುತ್ತೇನೆಂತ ಬೆದರಿಸಿ, ಹೊರಟುಹೋಗಿ ಮತ್ತೆ ಕೆಲವು ದಿನಗಳೊಳಗಾಗಿಯೇ ಬಂದಿದ್ದನು. ಆದರೆ ಆ ಬಾರಿ ಅವನು ಅವಳನ್ನು

ತೊರೆದು ಬೇರೆ ಇನ್ನೊಬ್ಬಳ ಸಂಗಡ ಅಲೆದಾಡುತ್ತಿದ್ದುದನ್ನು ಕಂಡಿದ್ದಳು. ಯಾರಿಗೋಸ್ಕರ ತಾನು ಸಮಸ್ತವನ್ನೂ ತೊರೆದು, ಯಾರಿಗೋಸ್ಕರ ತಾನು ಹಗಲೂ ಇರುಳೂ ದುಡಿದು, ತನ್ನ ಸುಖದುಃಖಗಳನ್ನು ತೊರೆದು ಉಪಚರಿಸುತ್ತಿದ್ದಳೋ, ಅಂತಹನು ತನ್ನನ್ನು ತೊರೆದು, ಬೀದಿಯಲ್ಲಿ ಹೋಗುವ ಬೇರೊಬ್ಬ ಹೆಂಗಸಿನ ಹಿಂದೆ ಅಲೆದಾಡುತ್ತಿದ್ದುದು ಅವಳಿಗೆ ಸಹಿಸಲಶಕ್ಯವಾಗಿತ್ತು.

ಹಿಂದಿನ ಸಂಜೆ ಪಂಡಿನಲ್ಲೆಲ್ಲಾ ಅಲೆದಲೆದು ಅತ್ತಿಕಾಯಾಗಿ, ತಾನು ಹಿಂತಿರುಗಿ ಬರುತ್ತಿದ್ದಾಗ, ಒಂದು ಬಸ್ಸಿನಲ್ಲಿ ಅವನು ಒಬ್ಬಳ ಪಕ್ಕದಲ್ಲಿ ಕುಳಿತು ನಗುತ್ತಿದ್ದುದನ್ನು ಕಂಡಿದ್ದಳು. ಇದನ್ನು ಅವಳು ಸಹಿಸದಾಗಿದ್ದಳು. ಅವಳಿಗಾಗಿಯೋ ಅವನು ತನ್ನನ್ನು ತ್ಯಜಿಸಿದನೇನು ಎಂಬ ಸಂಶಯವು ಅವಳ ಮನಸ್ಸಿನಲ್ಲಿ ಹಾಯ್ದೊಡನೆಯೇ ಕೂಸಿನ ಮತ್ತು ಬುಟ್ಟಿಯ ಭಾರವನ್ನು ಗಮನಿಸದೆ, ಬಸ್ಸಿನ ಹಿಂದೆ ಓಡಿದ್ದಳು. ಆದರೆ ಎಷ್ಟು ದೂರ ತಾನೇ ಹಾಗೆ ಓಡಲು ಸಾಧ್ಯ! ತನ್ನ ಪರಾರಕ್ಕೆ ಬಂದು, ಎಷ್ಟು ಹೊತ್ತಾಗಿದ್ದರೂ ಅದೇ ಚಿತ್ರವು ಅವಳ ಕಣ್ಣಿಗೆ ಕಟ್ಟಿದ್ದಿತು. ಕುಳಿತು, ಕುಳಿತು ಇದನ್ನು ಕುರಿತು ಆಲೋಚಿಸಿ ಬಗೆಹರಿಯದೆ ಮಲಗಿದರೂ, ಅದೇ ಚಿತ್ರ ಅವಳ ಕಣ್ಣಿನಿಂದ ಮಾಯವಾಗಿರಲಿಲ್ಲ. ರಾತ್ರಿ ಎಷ್ಟು ಹೊತ್ತಾದರೂ, ನಿದ್ರೆಯೂ ಬಾರದೆ, ಗಾಳಿ ಮತ್ತು ಹನಿಕಲು ಮಳೆಗೆ ಅವಳ ಮೈ ನಡುಕುಕೊಂಡಿತ್ತಾದರೂ, ಅದೇ ದೃಶ್ಯ ಅವಳ ಕಣ್ಮುಂದೆ ಕಟ್ಟಿತ್ತು. ಅವನು ಅವಳನ್ನು ತ್ಯಜಿಸಿದುದು ಇವಳಿಗಾಗಿಯೇನೋ! ಗಂಡನು ಸುಳ್ಳನಾಗಿದ್ದರೂ, ಕಳ್ಳನಾಗಿದ್ದರೂ, ಸೋಮಾರಿಯಾಗಿದ್ದರೂ ಸಹಿಸಬಹುದಾಗಿತ್ತು. ಹಾದರ ಮಾಡುವ ಗಂಡನನ್ನು ಸಹಿಸಲು ಸಾಧ್ಯವಿರಲಿಲ್ಲ!

ತೀರ ಬೆಳಕಾಯಿತು. ಅವಳಿದ್ದ ಅಲ್ಲಿ ಗೋಡೆಯೊಳಗೆ ಹುಗಿದಿದ್ದ, ಕನ್ನಡಿಯೆಂದೂ ಹೇಳಲು ಸಾಧ್ಯವಿಲ್ಲದ, ಒಂದು ಗಾಜಿನ ತುಂಡಿನಲ್ಲಿ ಸ್ವರೂಪವನ್ನು ದಿಟ್ಟಿಸಿ ನೋಡಿಕೊಂಡಳು. ತಾನು ಸುಂದರಿಯಲ್ಲದಿದ್ದರೂ ವಿಷಯತೃಷ್ಣೆಗೆ ಬಾಯಿಬಿಡುವ ಜನರನ್ನು ತೃಪ್ತಿಗೊಳಿಸುವಷ್ಟು ಚೆಲುವೆಯೆಂಬುದನ್ನು, ದೀರ್ಘಕಾಲ ಕಷ್ಟನಿಷ್ಠುರಗಳಿಗೆ ಸಿಕ್ಕಿದುದರಿಂದಲೂ, ಹುಡುಗು ಗಂಡನ ಅನಾದರಣೆಯಿಂದಲೂ, ತುತ್ತಿನ ಚೀಲದ ಕರಕರೆಯಿಂದಲೂ ಮರೆತಿದ್ದಳು. ಅವನು ಆರ ಪಕ್ಕದಲ್ಲಿ ಕೂತು ಚಕ್ಕಂದವಾಡು

ತ್ತಿದ್ದನೋ ಅವಳು ತನಗಿಂತ ಸ್ಥೂಲಶರೀರೆಯಾಗಿದ್ದಳಲ್ಲದೆ ಅಧಿಕ ವಯಸ್ಕೆಯೂ ಆಗಿದ್ದಳು. ಆದರೂ ಕಷ್ಟನಿಷ್ಠುರಗಳಿಗೆ ಸಿಕ್ಕಿದ ತನಗಿಂತಲೂ ಅವಳೇ ಚೆಲುವೆ ಅಂತ ಅವಳ ಅಭಿಪ್ರಾಯವಾಯಿತು. ಒಂದು ನಿಟ್ಟುಸಿರು ಬಿಟ್ಟು, ಒಲೆಯನ್ನು ಹೊತ್ತಿಸಿ ಅನ್ನಮಾಡಲು ಎಸರು ಇಟ್ಟು ಮುಖ ತೊಳೆದುಕೊಂಡಳು. ಬೆಂಕಿ ಕಾಸುತ್ತಾ ಕುಳಿತು ಹಾಗೆಯೇ ಆಲೋಚಿಸುತ್ತಿರುವಂತೆಯೇ, ತನ್ನ ಗಂಡನ ಅಪರಾಧ ಶತಾಪರಾಧದಂತೆ ತೋಚಿ, ನಾನು ಏಕೆ ಅವನಂತೆ ನಡೆದು ಅವನಿಗೆ ಮುಯ್ಯಿಗೆ ಮುಯ್ಯಿ ತೀರಿಸಬಾರದು-ಎಂದೆನಿಸಿ, ಕಳೆದ ಸಾಯಂಕಾಲ ಮಲ್ಲೇಶ್ವರದಲ್ಲಿ ತನ್ನ ಬಂಗಲೆಯೊಳಗೆ ಹೋಗುತ್ತಿದ್ದ ತನ್ನ ಬಳಿ ಹೂವನ್ನು ಕೊಂಡ ಮನುಷ್ಯ ತನ್ನಿಂದ ಹಾರ ಕೊಂಡುಕೊಂಡು, ತನ್ನ ಕಡೆ ನೋಡಿ ನಕ್ಕದ್ದನ್ನು ಜ್ಞಾಪಿಸಿಕೊಂಡಳು. ಆ ಮನುಷ್ಯನೇಕೆ ನನ್ನಲ್ಲಿ ಚೌಕಾಶಿ ಮಾಡದೆ, ತಾನು ಕೇಳಿದಷ್ಟು ಹಣವನ್ನು ಕೊಟ್ಟು ಹಾರವನ್ನು ಕೊಳ್ಳುವಾಗ ನಕ್ಕದು ಎಂತ ಯೋಚಿಸಿದಳು. ಅವಳು ಚೆಲುವೆಯೆಂಬ ಭಾವನೆಯಿಂದಲ್ಲವೇ? ಅವನು ಅವಳು ಕೇಳಿದಷ್ಟು ಹಣ ಕೊಟ್ಟು ತನ್ನ ಕಡೆ ನೋಡಿ ನಕ್ಕಿರಬೇಕು. ಆಗಲಿ-ಅದನ್ನು ಪರೀಕ್ಷಿಸಿ ನೋಡಿಬಿಡುತ್ತೇನೆ ಎಂಬುದಾಗಿ ಆಲೋಚಿಸಿದಷ್ಟು, ಅವಳ ಗಂಡನ ಮೇಲೆ ಕೋಪವೂ, ಅವಳ ಮೇಲೆ ಮಾತ್ಸರ್ಯವೂ ಉಕ್ಕಿಉಕ್ಕಿ ಬರುತ್ತಿತ್ತು.

ತಲೆಯೆತ್ತಿ ತನ್ನ ಬಟ್ಟೆಗಳ ಕಡೆ ನೋಡುತ್ತಾಳೆ! ಅಲ್ಲಿ ತನ್ನ ಹರಕಲು ಸೀರೆ ವಿನಾ ಬೇರಾವ ಸೀರೆಯೂ ಇಲ್ಲ. ತನ್ನ ಘಟ್ಟಿಯಾಗಿದ್ದ ಬಣ್ಣಬಣ್ಣದ ಸೀರೆಯನ್ನು ಒಂದು ತಿಂಗಳ ಕೆಳಗೆ ಸೂರಮುಲ್ ಶಾಂಭೂಜಿ ಅಂಗಡಿಯಲ್ಲಿ ಟೀಪುಗಳನ್ನು ತರಲು ಗಿರವಿ ಇಟ್ಟಿದ್ದಳು. ಇದು ಜ್ಞಾಪಕಕ್ಕೆ ಬಂದೊಡನೆಯೇ, ಅವಳ ಕೋಪಕ್ಕೆ ಎಲ್ಲೆಯೇ ಮಿಂಚಿತು. ಅವನಿಗಾಗಿ ಅಲ್ಲವೇ ತನ್ನ ಹೊಸ ಸೀರೆಯನ್ನು ಗಿರವಿ ಇಟ್ಟುದು! ಇನ್ನು ಅವನ ಹೆಸರು ಹೇಳಿ, ತನ್ನನ್ನು ಒತ್ತೆ ಇಡುವುದೊಂದೇ ಬಾಕಿ ಇದ್ದುದು! ಕರೆದವರ ಬಳಿಯೆಲ್ಲಾ ಇಷ್ಟಬಂದಂತೆಲ್ಲಾ ಇತರರಂತೆ ತಾನು ಹೋಗದಿದ್ದುದರಿಂದಲ್ಲವೇ, ಅಷ್ಟು ವ್ಯಥೆಪಡಬೇಕಾಗಿದ್ದುದು! ತಾನೂ ಅವನಂತೆ ಮಾಡಿದರೆ!

ಗೂಡಿನಲ್ಲಿ ಬಿದ್ದಿದ್ದ ಕಾಗದಗಳ ಮಧ್ಯೆ ಎಲ್ಲಾ ಹುಡುಕಿ ತನ್ನ ಹೊಸ ಸೀರೆಯ ಗಿರವಿಚೀಟಿ ತೆಗೆದದ್ದಾಯ್ತು. ತನ್ನ ಖಜಾನೆಯನ್ನೆಲ್ಲಾ ಝಾಡ್ತಿ

ಮಾಡಿ ಆಯಿತು; ಅದಕ್ಕೆ ತಾನು ನಿನ್ನೆ ಹೂ ಮಾರಿ ತಂದ ಹಣವನ್ನೂ ಸೇರಿಸಿ ಆಯಿತು. ಆಪರೂ ಎರಡು ರೂಪಾಯಿ ಮೂರುವರಾಣೆಯೇ ಆದುದು. ಎರಡೂವರೆ ರೂಪಾಯಿ ಕೊಟ್ಟರೇನೆ ಮಾರ್ವಾಡಿಯು ಸೀರೆ ಕೊಡಬಹುದು. ಇನ್ನೂ ನಾಲ್ಕೂವರಾಣೆ ಸಾಲದು. ಹಾಗೆಯೇ ನಿರಾಶಳಾಗಿ ಕುಸಿದು ಕುಕ್ಕರಿಸಿದಳು ತಲೆಯ ಮೇಲೆ ಕೈಯನ್ನಿಟ್ಟು ಉಳಿದ ಹಣಕ್ಕೆ ಮಾರ್ಗವೇನಂತ ಚಿಂತಿಸುತ್ತ ಕುಳಿತಳು.

ಹೀಗೆ ಸುಮಾರು ಕಾಲು ಘಂಟೆ ಕುಳಿತಿರಬಹುದು. ಇದ್ದಕ್ಕಿದ್ದಂತೆಯೇ ಸ್ಫೂರ್ತಿ ಬಂದಂತಾಗಿ, ತಾನು ಹೊದೆದಿದ್ದ ದುಪಟಿಯನ್ನು ತೆಗೆದು ನೋಡಿದಳು. ಗಟ್ಟಿಯಾದ ದುಪಟಿ. ಹೊದೆಯಲು ಅದನ್ನು ಬಿಟ್ಟರೆ ಬೇರೆಯಾವುದೂ ಗತಿಯಿಲ್ಲ. ಅದನ್ನು ಗಿರವಿ ಇಟ್ಟರೆ ರಾತ್ರಿ ಹೊದೆಯಲು ಹಳೇ ಸೀರೆ, ಕಂದಲು ಸೇರಿಸಿ ಹೊದೆದುಕೊಂಡರಾಯಿತು. ಆದರೆ ಅದಕ್ಕೆ ಬರುವ ಹಣವೆಷ್ಟು? ಬಹುಶಃ-ಆರಾಣೆ. ಇನ್ನೂ ಒಂದೂವರಾಣೆ ಹೆಚ್ಚಿಗೆ ಸಿಗುತ್ತವೆ.

ಕಾಶಿವಿಶ್ವೇಶ್ವರ ದೇವಸ್ಥಾನದ ಸಂದಿನಲ್ಲಿದ್ದ, ಸೂರಮಲ್‌ಶಾಂಭಾಜಿ ಅಂಗಡಿಗೆ ಹೋದಳು. ಅವನಿನ್ನೂ ಅಂಗಡಿಯ ಬಾಗಿಲು ತೆಗೆಯುವುದರಲ್ಲಿದ್ದ. ಇವಳನ್ನು ಕಂಡೊಡನೆಯೇ 'ಇನ್ನೂ ಬೆಳಿಗ್ಗೆ ಆಗೋಕಿಲ್ಲ; ಆಗಲೇ ಬಂದ್ಯಾ' ಎಂದ.

ತಿಮ್ಮಿ ಹಣವನ್ನೂ ಚೀಟಿಯನ್ನೂ ತೋರಿಸಿದಳು. ಮಾತನಾಡಲಿಲ್ಲ. ಮಾರ್ವಾಡಿಯೂ ವಿಷಯವನ್ನು ಗ್ರಹಿಸಿ ಮಾತಾಡದೆ ಅವಳ ಸೀರೆಯಂತೆಯೇ ಸುತ್ತಿ ರಾಶಿ ಇಟ್ಟು ಚೀಟಿ ಹಾಕಿದ್ದ ನೂರಾರು ಸೀರೆಗಳ ಮಧ್ಯೆ ಇದ್ದ ಅವಳ ಸೀರೆಯನ್ನು ನಿರಾಯಾಸವಾಗಿ ತೆಗೆದುಕೊಟ್ಟ. ಅವಳೆಣಿಸಿದಂತೆಯೇ ಅವಳ ದುಪಟಿಗೆ ಇತ್ತಿದು ಆರೇ ಆಣೆ. ಅಂತು ಸೀರೆ ದೊರೆಯಿತು.

ಸೀರೆ ತಂದು ಉಟ್ಟುದೂ ಆಯಿತು. ಹೂವಿನ ಬುಟ್ಟಿಯನ್ನು ತೆಗೆದುಕೊಂಡು ಹೊರಡೋಣವೆಂತ ನೋಡುತ್ತಾಳೆ--ಹೂವು ಹಿಂದಿನ ಸಂಜೆಯ ಹನಿಕಲು ಮಳೆಗೆ ಹಾಳಾಗಿ ಹೋಗಿದೆ. ತನ್ನ ಗಂಡನ ಕೃತ್ಯವನ್ನೇ ನೆನೆದು ನೆನೆದು ಕೋಪಗೊಳ್ಳುತ್ತಿದ್ದ ಅವಳಿಗೆ ಹೂವಿನ ಮೇಲೆ ಧ್ಯಾನ ಓಡಿರಲಿಲ್ಲ. ಮುಂದೇನು ಗತಿ! ಬರಿಯ ತುತ್ತಿನ ಚೀಲದ ಬೇಗೆ

ಯನ್ನು ಒಂದು ಕ್ಷಣವಾದರೂ ತಡೆಯುವುದು ಹೇಗೆ! ತಾನು ಹೊಟ್ಟೆ ಗಿಲ್ಲದೆ ಒಣಗಿದರೆ ಮೊಲೆಯುಣ್ಣುವ ಹಾಲುಹಸುಳೆಯ ಗತಿ ಏನು?

ಆದರೂ ಅದನ್ನು ಮರೆಯುವಷ್ಟು ಹೆಚ್ಚಾಗಿ ಅವಳ ಮೇಲಿನ ಮಾತ್ಸರ್ಯ; ಅದಕ್ಕಿಂತ ಹೆಚ್ಚಾಗಿ ಅವಳ ಮೇಲೆ ಛಲ ತೀರಿಸಿಕೊಳ್ಳ ಬೇಕೆಂಬ ವಿದಾಹ ಅವಳ ಹೃದಯದಲ್ಲಿ ತಾಂಡವವಾಡುತ್ತಿತ್ತು. ಮಗುವಿಗೆ ಹಾಲುಕೊಟ್ಟು ಪಕ್ಕದಲ್ಲಿದ್ದವರ ಬಳಿ ಬಿಟ್ಟು, ಅವಳೂ ಅವನೂ ಬಸ್ಸಿ ನಲ್ಲಿ ಕಂಡ ಕಡೆಗೆ ಹೋಗಿ ನಿಂತಳು. ಎಷ್ಟು ಹೊತ್ತು ನಿಂತರೆ ತಾನೇ ಏನು! ಅವರು ಆ ಕಡೆ ಬರಲಿಲ್ಲ. ನಿಂತಂತೆಲ್ಲಾ ಅವಳಿಗೆ ಕ್ರೋಧ ಹೆಚ್ಚುತ್ತಾ ಬಂತು. ಹೊತ್ತು ಏರಿದಂತೆಲ್ಲಾ ಹಸಿವು ಹೆಚ್ಚಿದಂತೆಲ್ಲಾ ಅವಳ ಕ್ರೋಧ ಹೆಚ್ಚುತ್ತಾ ಬಂದು ಅವಳನ್ನೂ ಅವನನ್ನೂ ಸಿಗಿದುಃಬಿಡಬೇಕೆಂಬ ಆಕಾಂಕ್ಷೆ ಹುಟ್ಟಿತು. ಇವಳು ಬಹಳ ಹೊತ್ತಿನಿಂದ ಅಲ್ಲಿಯೇ ತಿರುಗುತ್ತಿರುವುದನ್ನು ಕಂಡ ಒಬ್ಬರಿಬ್ಬರು ಇವಳ ಸಂಗಡ ಮಾತನಾಡಿಸಲು ಉದ್ದೇಶಿಸಿದರೂ ಇವಳ ರೌದ್ರರೂಪವನ್ನು ಕಂಡು ಭಯಪಟ್ಟು ಸುಮ್ಮನಾಗುತ್ತಿದ್ದರು.

ಹೊಟ್ಟೆಯಲ್ಲಿ ಹಸಿವು ಹೆಚ್ಚಿದಂತೆಲ್ಲಾ ತನ್ನ ಮಗುವಿನ ಜ್ಞಾಪಕ ಬರಲು ಛತ್ರಕ್ಕೆ ಬಂದು, ಮಗುವಿಗೆ ಹಾಲು ಕೊಟ್ಟು ಪುನಃ ಅಲ್ಲಿ ಹೋಗಿ ಅಲೆದಾಡಿದಳು. ಆದರೆ ಅವರು ಕಾಣಲಿಲ್ಲ.

ಇದ್ದಕ್ಕಿದ್ದ ಹಾಗೆ ಪುನಃ ಅವಳಿಗೆ, ಹಿಂದಿನ ದಿನ ತಾನು ಕೇಳಿದಷ್ಟು ಹಣ ಕೊಟ್ಟು ಹೂ ಕೊಂಡುಕೊಂಡ ಆತನ ನೆನಪು ಬಂತು. ಆತ ತನ್ನನ್ನು ಕಂಡು ನಗಲು ಕಾರಣವೇನು! ಕಾರಣವಿಲ್ಲದೇ ನಗುತ್ತಾನೆಯೇ! ಅಂತಹ ಕಾರಣವೇನು? ಆತನ ಬಳಿ ಹೋದರೆ—ಎಂದು ತೋರಿತು.

ಆತನ ಮನೆಯ ಬಳಿ ಹೋಗಿ, ಆಳಿನ ಕೈಲಿ ಮನೆಯ ಯಜಮಾನ ನನ್ನು ನೋಡಬೇಕಂತ ಹೇಳಿದಳು. ಇವಳನ್ನು ಕಂಡು ಆಳು, ಒಳಗೆ ಹೋಗಿ ವರ್ತಮಾನ ತಿಳಿಸಿ, ಅವಳನ್ನು ಮನೆಯೊಳಕ್ಕೆ ಕರೆದೊಯ್ದ. ಮನೆಯೊಳಗೆ ಒಂದು ತೂಗು ಮಣೆ ಬಳಿ ಇದ್ದ ಬೆತ್ತದ ಕುರ್ಚಿಯ ಮೇಲೆ ಆತ ಕುಳಿತಿದ್ದ. ಮಣೆ ಮೇಲೆ ಒಬ್ಬಾಕೆ ಒಂದು ಮಗುವನ್ನು ಎತ್ತಿಕೊಂಡು ಮೆಲ್ಲಗೆ ತೂಗಿಕೊಂಡು ಆತನೊಡನೆ ಮಾತನಾಡುತ್ತ ಕುಳಿತಿದ್ದಳು. ಆತ ತನ್ನಿಂದ ಕೊಂಡ ಹಾರವನ್ನು ಬಾಗಿಲ ಮೇಲೆ ಹಾಕಿದ್ದ ಪಟಕ್ಕೆ ಹಾಕಿತ್ತು.

ಇವರನ್ನು ಕಂಡೊಡನೆಯೇ ಇಂತಹ ಕಡೆ ಬರಲು ತಾನು ಅಯೋಗ್ಯ

ಳೆಂದು ಅವಳಿಗೆ ತೋಚಿ ಹೊರಟುಹೋಗಬೇಕೆನ್ನಿಸಿತು. ಆದರೆ ಆತ 'ಏನಮ್ಮಾ' ಎಂತ ಕೇಳಿದ.

ಇನ್ನು ಏನು ಮಾಡಬೇಕು ತಿಮ್ಮಿ!

ತನ್ನ ಚರಿತ್ರೆಯನ್ನೆಲ್ಲಾ, ತಾನು ಹುಟ್ಟಿದುದು ಬೆಳೆದುದು, ತನ್ನ ತಂದೆ ಕಸಬು, ಬಲವಂತಕ್ಕೆ ಮದುವೆಯಾದುದು, ತನ್ನ ಗಂಡನೊಡನೆ ಸಂಸಾರ ಮಾಡಿಕೊಂಡ ರೀತಿ, ಅಂತಹ ತನ್ನ ಗಂಡನನ್ನು ತಾನು ಒಳ್ಳೆಯ ದಾರಿಗೆ ತರಬೇಕೆಂತ ಪ್ರಯತ್ನಿಸಿದ್ದುದು, ಆದರೂ ಅವನು ಆಗಾಗ್ಗೆ ಹೊರಟುಹೋಗುತ್ತಿದ್ದುದು, ಈ ಬಾರಿ ಒಬ್ಬ ಹೆಂಗಸಿನ ಸಂಗಡ ಹೊರಟು ಹೋದುದು, ಇದನ್ನೆಲ್ಲಾ ತಿಳಿಸಿದಳು. ಈ ಕತೆ ಎಲ್ಲಾ ಕೇಳಿ ಆಕೆ 'ಅಯ್ಯೋ ಪಾಪ' ಎಂದಳು.

'ಆತನನ್ನು ಏನು ಮಾಡಬೇಕು ಅಂತಿಯಾ' ಎಂತ ಕೇಳಿದ!

ತಿಮ್ಮಿ ಏನೂ ಉತ್ತರ ಹೇಳಲಿಲ್ಲ. ಆತ ಐದು ರೂಪಾಯಿನ ಒಂದು ನೋಟು ತೆಗೆದು, ಅವಳ ಕಡೆ ನೀಡಿ 'ಇದರಿಂದ ಇನ್ನೂ ಅಷ್ಟು ಕಾಗದಗಳ ತಾವು ತೆಗೆದುಕೊಂಡು ಹೂ ಮಾಡಿ, ಮಾರಿ ಜೀವಿಸಿಕೊ, ಇಂದಲ್ಲದಿದ್ದರೆ ನಾಳೆಯಾದರೂ ನಿನ್ನ ಗಂಡ ಬಂದಾನು' ಎಂದ.

ತಿಮ್ಮಿ ಹೊರಡಲೇ ಬೇಕಾಯಿತು. ನೋಟು ತೆಗೆದುಕೊಂಡು **ಈಚೆ** ಬಂದಳು.

ಆತ ತನ್ನನ್ನು ನೋಡಿ ನಕ್ಕ ಕಾರಣ ಈಗ ಹೊರಪಟ್ಟಿತು. ಆತ ಕರುಣಾದೃಷ್ಟಿಯಿಂದ ತನ್ನನ್ನು ಕಂಡು ನಕ್ಕುದು. ಆ ನಗೆಯಲ್ಲಿ ಬೇರಾವ ಭಾವವೂ ಇದ್ದಿರಲಿಲ್ಲ!

ಮೆಲ್ಲನೆ ಅವಳು ಛತ್ರದ ಕಡೆ ಹೊರಟಳು. ಬೆಳಗಿನಿಂದ ನಡೆದು ನಡೆದು ಅವಳ ಕಾಲು ಸೋತುಹೋಗಿದ್ದುವು; ಆ ಆಯಾಸದಿಂದ ಮಗು ವಿಗೆ ಹಾಲುಣಿಸಲು ಸಹ ಬೇಕಾಗಿರಲಿಲ್ಲ. ಚಳಿಯಲ್ಲಿ ತಿರುಗಾಡಿದ್ದರಿಂದ ಕೈಕಾಲುಸೆಡೆತುಕೊಂಡಿದ್ದುವು ಒಲೆಯಲ್ಲಿ ಬೆಂಕಿ ಮಾಡಿ ಸ್ವಲ್ಪ ಕಾಯಿಸಿ ಕೊಂಡಳು. ಆವೇಳೆಗಾಗಲೇಅಕ್ಕಪಕ್ಕದವರುಎಂದೊ ಮಲಗಿಬಿಟ್ಟಿದ್ದರು.

ಒಂದೆರಡುಬಾರಿ ಇದೇ ಹೊತ್ತಿಗೆ ಅವನು ಬಿಟ್ಟು ಹೋಗುತ್ತೇನೆಂತ ಹೇಳಿದ್ದವನು ಪುನಃ ಬಂದಿದ್ದ; ಎರಡು ಮೂರು ದಿನಗಳ ಮೇಲೆ ಏಕೆ ಬರಬಾರದು; ಬರಬಾರದೆ! ಹಾಗೆಯೇ ಅವನ ಸಂಗಡ ತಾನು ಬಾಳಿ ಅನು

ಭವಿಸಿದ ಕಷ್ಟಸುಖಗಳನ್ನೆಲ್ಲಾ ನೆನಸಿಕೊಂಡಳು. ಕಷ್ಟಪರಂಪರೆಗಳನ್ನು ಅನುಭವಿಸಿದ್ದರೂ ಅವನ ಜೊತೆಯಲ್ಲಿ ಸುಖವನ್ನೂ ಅನುಭವಿಸಿದ್ದಳು. ಅವನಿಲ್ಲದ ಬಾಳು ಒಂಟಿಗಿತ್ತಿಯ ಬೇಜಾರು ಬಾಳು; ಅವನಿಲ್ಲದೆ ಮಾತೂ ಇಲ್ಲ, ಜಗಳವೂ ಇಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಅಕ್ಕಪಕ್ಕದವರೊಡನೆ ನಡೆಸುವ ಹೋರಾಟಗಳಲ್ಲಿ ಬೆಂಬಲವಿಲ್ಲ! ಒಂಟಿಗಿತ್ತಿಯ ಬಾಳು, ಬೀದಿಯ ಹೆಣ್ಣು ನಾಯಿ ಬಾಳು! ಬೆಂಕಿಯ ಬಳಿ ಹಾಗೆಯೇ ಮುದುರಿಕೊಂಡಳು. ಇನ್ನೂ ಹೆಚ್ಚು ಕತ್ತಲೆಯಾಯ್ತು; ಮಗು ಮಲಗಿ ನಿದ್ರಿಸುತ್ತಿತ್ತು.

ಇವಳು ಒಬ್ಬಳೇ ಇದ್ದುದು ಕಂಡು ಅದೇ ಛತ್ರದಲ್ಲಿ ಒಂಟಿಯಾಗಿದ್ದ ಭಿಕಾರಿಗಳು ಇವಳ ಬಳಿ ಬಂದರು. ಆದರೆ ಅವರನ್ನು ಗದರಿಸಿ ಅಟ್ಟಿ ಮಲಗಿ ನಿದ್ರಿಸುತ್ತಿದ್ದ ಮಗುವನ್ನು ದಿಟ್ಟಿಸಿದಳು. ಆ ಮುಖ ಅವನ ಪ್ರತಿಬಿಂಬ, ಮಗುವಿನ ಹುಟ್ಟು ಅವನಂತೆ ಇದೆಯೆಂತ ಮಗುವಿನ ಮೇಲೆ ದ್ವೇಷವೆ? ಮಗುವು ತನ್ನ ಮಗುವಲ್ಲವೇ? ಮಗುವಿನ ತಂದೆಯೊ? ಅವನೂ ತನ್ನವನಲ್ಲವೆ? ಅವಳನ್ನು ಬಿಟ್ಟು ಇನ್ನೊಬ್ಬಳನ್ನು ಕೂಡೆಹೋದ ಅವನು ತನ್ನವನೆ. ಅಹುದು ತನ್ನವನೆ! ಅವನಿಗಾಗಿ ತಾನು ಪಟ್ಟಶ್ರಮ. ತನ್ನವನಲ್ಲದಿದ್ದರೆ ಅಷ್ಟು ಕಷ್ಟವೇಕೆ ಪಡಬೇಕು! ಅವನೂ ಅಡ್ಡ ಹಾದಿ ತುಳಿದು ತನ್ನನ್ನು ಮರೆತರೆ! ತಾನೂ ಅವನನ್ನು ಮರೆಯಬಹುದೆ! ಬರುವನೇನೋ ನೋಡುವ; ಬರದಿದ್ದರೆ! ಆಗಲಿ, ಬರದಿದ್ದಾಗ ನೋಡುವ ತಾನೂ ಅವನನ್ನು ಮರೆತರೆ ತನಗೂ ಅವನಿಗೂ ಇರುವ ವ್ಯತ್ಯಾಸ?

ಇದೇ ಆಲೋಚನೆಯಲ್ಲಿ ಅವಳು ಊಟಇಲ್ಲವೆ ಹಸಿದುಕೊಂಡೇ ಮಲಗಿದ್ದಳು. ಅಲೆದಾಡಿ ಆಯಾಸದಿಂದಲೂ ಉಪವಾಸವಿದ್ದುದರಿಂದಲೂ ಹಾಗೆಯೇ ನಿದ್ರೆ ಮಾಡಿಬಿಟ್ಟಳು.

ಇದ್ದಕ್ಕಿದ್ದ ಹಾಗೆ ಅವಳಿಗೆ ಎಚ್ಚರಿಕೆಯಾಯಿತು. ತನ್ನ ಕಾಲ ಬಳಿ ಯಾರೋ ಕುಳಿತಿದ್ದರು. ನೋಡುತ್ತಾಳೆ, ತನ್ನ ಗಂಡ! ಅವನು ನಿಶ್ಶಬ್ದವಾಗಿ ಕುಳಿತಿದ್ದ. ಅವಳಿಗೆ ಸಹಿಸಲಾರದಷ್ಟು ಕೋಪ ಬಂದಿತು. ತನ್ನಿಷ್ಟ ಬಂದಂತೆ, ತನ್ನಿಷ್ಟ ಬಂದ ಕಡೆ ಹೋಗಬಹುದೇ? ಪುನಃ ಬರಬಹುದೆ! ಬಂದು ಏನೂ ನಡೆಯದಿದ್ದಂತೆ, ಬೆಂಕಿ ಕಾಸುತ್ತ ಕುಳಿತುಕೊಳ್ಳಬಹುದೆ!

ಆದರೆ ಯಾವ ಬೈಗಳೂ ಅವಳ ಮನಸ್ಸಿಗೆ ಬರಲಿಲ್ಲ. ಅವಳ ಮನಸ್ಸಿಗೆ ಬಂದುದು, ಅವನ ಮುಖದಂತೆಯೇ ಇರುವ ಆ ಮಗುವಿನ ಮುಖ!

ಮೂರು ದಿನವಾದ ಮೇಲೆ, ಅದೂ ಅವಳ ಹಿಂದೆ ಓಡಿಹೋಗಿ, ಈಗ ಬರಬಹುದೇ?

ಹಾಗೆಯೇ ತಲೆಯೆತ್ತಿ ನೋಡಿದಳು. ಆದರೂ ಅವನು ನಿಶ್ಶಬ್ದ ವಾಗಿ ಬೆಂಕಿಕಾಯಿಸಿಕೊಳ್ಳುತ್ತಿದ್ದ.

'ಹಾಗೆಯೇ ಅವನು ಬೆಂಕಿಗಾದರೂ ಬೀಳಕೂಡದೆ! ಆದರೆ ಒಡನೆಯೇ ಆ ಮಗುವಿನ ಮುಖ ಮುಂದೆ ಬಂದು ನಿಂತಿತು. ಆ ಮಗುವು ಹುಟ್ಟುವ ಮೊದಲು ಮೂರೇ ದಿನ ಸಂಸಾರ ಮಾಡಿದುದು! ಆಗ ತನಗೆ ಅವನ ಸಂಗಬೇಕೆನಿಸಿದ್ದರೂ ಅದು ಇಲ್ಲದಾದುದು ನೆನಪಿಗೆ ಬಂತು. ಆಗ–ಇರಲು ಸಾಧ್ಯವಿಲ್ಲದಿರುವಾಗ ಬೇಕು; ಈಗ ಇರುವಾಗ ಬೇಡವೆ?

ಹಾಗೆಯೇ ನೋಡಿದಳು, ಒಂದು ತುಂಡು ಕೊಳ್ಳಿ ಪೂರ್ತಿ ಉರಿದು ಹೋಗುವಾಗ, ಹೊರಡುವ ಹೆಚ್ಚಿನ ಪ್ರಕಾಶದಲ್ಲಿ ಅವನ ಹಸಿದ ಬಾಡಿದ ಮುಖ ಸ್ಪಷ್ಟವಾಗಿ ಕಾಣಿಸಿತು. ಅವೇ ಸಮಯಕ್ಕೆ ಅವನೂ ಅವಳ ಕಡೆ ತಿರುಗಿ ತನ್ನ ದೃಷ್ಟಿಯನ್ನು ಬೀರಿದ.

ಆ ನೋಟದಲ್ಲಿ ವರ್ಣಿಸಲು ಸಾಧ್ಯವಿಲ್ಲದ ಭಾವಗಳೆಲ್ಲಾ ಅಡಗಿದ್ದುವು, ದೀನತ್ವ, ಕ್ಷಮಾ ಭಿಕ್ಷೆ, ನಿಸ್ಸಹಾಯತ್ವ........

ಅವನು ಏನೋ ಮಾತಾಡಲು ಪ್ರಯತ್ನ ಪಟ್ಟ. ಅದು ಅವಳಿಗೆ ತಿಳಿಯಲಿಲ್ಲ. ಆದರೆ ಅದರಿಂದ ಹೊರಟ ಶಬ್ದ ತನ್ನ ಮಗನಿಗೆ ತಾನು ಬೇಕಾದಾಗ ಅವನು ಕೂಗುತ್ತಿದ್ದ ಅಳುವಿನಂತೆ ಅವಳ ಕಿವಿಗೆ ಬಿತ್ತು.

ಅವಳಿಗೆ ಇನ್ನು ಹೆಚ್ಚು ತಡೆಯಲಾಗಲಿಲ್ಲ. ಹಾಗೆಯೇ ಕೈ ನೀಡಿ ಅವನನ್ನು ತನ್ನ ಬಳಿಸೆಳೆದುಕೊಂಡು ತನ್ನ ಎದೆಯ ಮೇಲೆ ಅವನ ತಲೆಯನ್ನಿಟ್ಟುಕೊಂಡು ಬಲವಾಗಿ ಅಪ್ಪಿಕೊಂಡಳು. ಅಪ್ಪಿಕೊಂಡು ಬೆಂಕಿಯು ಆರುತ್ತಿದ್ದುದರಿಂದ, ಹುಟ್ಟುತ್ತಿದ್ದ ತಣುವನ್ನು ತನ್ನ ಹೃದಯದ ಶಾಖದಿಂದ ಹೆಚ್ಚಿಸುತ್ತಿದ್ದಳು.

---

## 4. ಯಾವುದು ಸರಿ!

ಊಂ........ಅಹುದು........ಮತ್ತೆ ಮತ್ತೆ ಆಲೋಚನೆ ಮಾಡಿದರೂ ನಾನು ಮಾಡಿರುವ ನಿರ್ಧಾರವೇ ಸರಿ..........ಸರಿಯೇ? ಅಹುದು; ಸರಿ. ನನಗೆ ಇನ್ನು ಆಗಬೇಕಾದುದೇನು? ಏನೂ ಇಲ್ಲ! ನನಗೆ ಇರಲು ಈ ಪ್ರಪಂಚ ದಲ್ಲಿ ಸ್ಥಳವುಂಟೋ? ಪ್ರಪಂಚದಲ್ಲುಂಟು. ಆದರೆ ಸಮಾಜದಲ್ಲೋ? ಸಮಾಜದಲ್ಲೂ ಉಂಟು. ಉಂಟು! ಎಂತಹ ಸ್ಥಾನ? ಬೀದಿಯ ಭಿಕಾರಿ ಣಿಯ ಸ್ಥಾನ! ನನ್ನಂತಹ ಭಿಕಾರಿಣಿಗೆ ಭಿಕ್ಷೆ ಸಿಕ್ಕೀತೇ? ಅದೇ ಅನುಮಾನ. ನಾನು ಭಿಕಾರಿಣಿ ವಿದ್ ಎ ಕ್ವಾಲಿಫಿಕೇಶನ್ (with a qualification-) ಏನದು! ವಿದ್ಯಾವತಿಯಾಗಿ ಅಂದರೆ ಈಗಿನ ವಿದ್ಯಾಲಯದ ಪದವೀಧರ ಳಾಗಿ (ಅದು ಎಷ್ಟರ ಮಟ್ಟಿನ ವಿದ್ಯೆಯೋ ನನ್ನಂತಹರಿಗೇ ಗೊತ್ತು; ಆದರೂ ಇಂದಿನ ವಿಶಾಲ ಪ್ರಪಂಚದ ಅನ್ನಯುಗದಲ್ಲಿ, ಮಹತ್ತರವೆನಿಸಿ ಕೊಂಡಿದ್ದರೂ ಕೇವಲ ನೀಚವೃತ್ತಿಯದು. ನಮ್ಮ ಹಿಂದಿನವರು ಪದೇ ಪದೇ ಉಗಿದು ಹೀನವೆಂದು ಬಿಟ್ಟುಬಿಟ್ಟಿರುವ, ದಾಸ್ಯವೃತ್ತಿಯನ್ನು ಕೈಕೊ ಳ್ಳಲು ಕೊಟ್ಟಿರುವ ಗೇಟ್‌ಪಾಸ್!) ಸೌಖ್ಯ ತತ್ವವಾದವನ್ನವಲಂಬಿಸಿ

ಯಥೈಧಾಂಸಿ ಸಮಿದ್ಧಾಗ್ನಿ
ಭಸ್ಮಸಾತ್ಕುರುತೇಽರ್ಜುನ

ಎಂಬುವ ರೀತಿಯಲ್ಲಿ ಅದರಲ್ಲಿ ಸುಖವನ್ನು ಕಾಣದೆ, ಆ ಸುಖವು ಅನುಭ ವಿಸಿದಂತೆಯೇ ತೀರಿ, ಕಹಿ ಮಾತ್ರ ನಿರಂತರವೂ ನೆನಪಿಗೆ ಬರುತ್ತಿರುವ, ಸುಳ್ಳು ಪ್ರತಿಷ್ಠೆಯುಳ್ಳ (false prestige) ಸಮಾಜದಿಂದ ಪತಿತಳಾದವ ಳಿವಳು ಎಂಬ ಬಿರುದುಳ್ಳವಳು.

ಇದರಲ್ಲಿ ತಪ್ಪಾರದು! ಸಾಂಖ್ಯವಾದ, ಅನುಮಾನವಾದ, ನಾಸ್ತಿಕ ವಾದ, ಸೌಖ್ಯತತ್ವವಾದ, ಇನ್ನೂ ಇತರ ವಾದಗಳದೇ? ಅಥವ ಇವುಗಳ ನ್ನೆಲ್ಲ ಉಳ್ಳ ಸಮಾಜದ್ದೇ? ಅಥವ ದಿನ ಬದಲಾಯಿಸಿದಂತೆ ಪ್ರಪಂಚದ ವೇಗಕ್ಕೆ ಸರಿಯಾಗಿ ಹೆಜ್ಜೆ ಇಡಲಾರದ, ಅರ್ಥವಾಗದ ಆಚಾರದ್ದೇ ಅಥವ ಅರ್ಥಹೇಳಲು, ಏಕೆ, ಹೇಗೆ ಎಂಬುದಕ್ಕೆ ಸಮಾಧಾನಕೊಡಲು ಶಕ್ತಿ ಇಲ್ಲದಿದ್ದರೂ ಅಯೋಗ್ಯಧೋರಣೆಯಿಂದ ಕೂಡಿರುವ ಇಂದಿನ ಮತಾ

ಚಾರ್ಯರುಗಳದೇ? ಅಥವ ಆತ್ಮ ಸಂಯಮವನ್ನು ಮರೆಯುತ್ತಿರುವ ಈಗಿನ ಪ್ರಜಾ ಸಂತತಿಯದೇ ಅಥವ ಹಿಂದಿನ ಸಂಸ್ಕೃತಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆಯೇ ಸ್ವಸಂಸ್ಕೃತಿಯನ್ನು ಅಲ್ಲಗಳೆದು ಅನ್ಯ ಸಂಸ್ಕೃತಿಯನ್ನು ಸರಿಯಾಗಿ ತಿಳಿದುಕೊಳ್ಳಲಾರದೆ, ಆ ಸಂಸ್ಕೃತಿಯನ್ನು ಅನುಕರಣೆ ಮಾಡಲು ಪ್ರಯತ್ನಿಸುತ್ತ, ಅದು ತಮ್ಮಿಂದ ಸಾಧ್ಯವಾಗದೆ, ಮುಂದಕ್ಕೆ ಹೋಗಲು ದಾರಿ ಕಾಣದೆ, ಹಿಂದಿನದನ್ನು ಬಿಡಲಾರದೆ, ಅದಕ್ಕಾಗಿ ಅನ್ಯರಿಂದ ಅವಹೇಳನ ಹೊಂದುತ್ತಾ ಇರುವ ಸ್ಥಿತಿಯನ್ನು ತಂದಿಟ್ಟು, ಹಿಂದಿನದನ್ನು ಸರಿಯಾಗಿ ಹೇಳಿಕೊಡದೆ, ಯಂತ್ರದೋಪಾದಿಯಲ್ಲಿ ಗುಮಾಸ್ತೆಯರನ್ನು ಸೃಷ್ಟಿಸುತ್ತಿರುವ ಈ ವಿದ್ಯಾಭ್ಯಾಸದ್ದೇ?

ಅಥವ ಬ್ರಹ್ಮ ಎಂಬ ಶಬ್ದದ ಅರ್ಥವನ್ನೂ ಮರೆತುಕೊಂಡು ಸಮಾಜಕ್ಕೆ ಮೇಲ್ಪಂಕ್ತಿಯನ್ನು ಹಾಕಿಕೊಡಬೇಕಾಗಿದ್ದ ವಿಷಯವನ್ನು ಮರೆತು, ಅದರೊಡನೆ ಬೆರೆತು, ಧ್ಯಾನಮಾಡಲು ಯೋಗ್ಯವಾದ ಸ್ಥಳಗಳನ್ನು ಬಿಟ್ಟು, ಲೌಕಿಕ ವ್ಯಾಪಾರದಲ್ಲಿ ಮುಳುಗೇಳುತ್ತ, ಅರಿಷಡ್ವರ್ಗಗಳನ್ನು ಜಯಿಸಲಾರದೆ, ಸ್ವಾರ್ಥದಲ್ಲಿ ಸಂಪೂರ್ಣಗೊಂಡ, ಕಾಮದಿಂದ ದಹಿಸಲ್ಪಟ್ಟು, ಪರಸೇವೆಯ ಹೀನವೃತ್ತಿಯಿಂದ ಜೀವಿಸುತ್ತ, ಆ ತಾಳಕ್ಕೆ ಸರಿಯಾಗಿ ಕುಣಿಯಲು, ಉಳಿದೆಲ್ಲ 'ಬ್ರಾಹ್ಮಣ' ಲಕ್ಷಣಗಳನ್ನು ಬಿಟ್ಟಿದ್ದರೂ 'ಬ್ರಾಹ್ಮಣ' ಎಂಬ ಪದವನ್ನು ಬಿಡಲಾರದೆ ಒದ್ದಾಡುತ್ತಿರುವ ನೂರರಲ್ಲಿ ಮೂವರೋ ನಾಲ್ವರೋ ಉಳ್ಳ, ಬ್ರಾಹ್ಮಣರದೆ!

ಅಥವ ಅದು ವೈಯಕ್ತಿಕವಾದುದೆ? ಅಲ್ಲ! ಹೆಜ್ಜೆ ಹಿಂದಿಡಲಾರದಷ್ಟು ಮುಂದಿಟ್ಟು ಪತಿತಳಾಗಿರುವೆನೆಂದು ತಿಳಿದುಕೊಂಡಿರುವವಳು ನಾನು. ನನ್ನಂತೆಯೇ ಇನ್ನೂ ಅನೇಕರಿಲ್ಲವೆ? ಹೆಜ್ಜೆ ಎತ್ತಿ ಹಿಂದೆಯೂ ಹೋಗಲಾರದೆ ಮುಂದೆಯೂ ಬರಲಾರದೆ, ಮನಮಥನವಾಗುತ್ತಿರುವವರಿಲ್ಲವೇ? ಹೆಜ್ಜೆಯೂ ಎತ್ತದೆ ನಮ್ಮಂಥವರನ್ನು ಕಂಡು ಯಾವುದು ಸರಿ, ಎಂಬ ಆಲೋಚನಾಸಾಗರದಲ್ಲಿ ಮುಳುಗಿ ತೇಲಾಡುತ್ತಿರುವವರಿಲ್ಲವೆ?

ಇದು ಇಂದಿನ ಸಮಾಜದ ಮುಂದಿರುವ ಪ್ರಶ್ನೆ. ಇಂದಿನ ಮತಾಚಾರ್ಯರುಗಳು ಯಾವ ವಿಧವಾದ ದ್ವೇಷ, ಈರ್ಷಾಸೂಯೆಗಳನ್ನೂ, ಕಾಮಕ್ರೋಧಗಳನ್ನೂ ಮನದಲ್ಲಿ ಇಟ್ಟುಕೊಳ್ಳದೆ ಚರ್ಚೆಮಾಡಿ ತೀರ್ಮಾನಕ್ಕೆ ಬರುವ ಪ್ರಶ್ನೆ. ಅರ್ಥವಿಲ್ಲದ ಆಚಾರಗಳನ್ನು ಖಂಡಿಸಿ ಕಾಲಕ್ಕೆ ತಕ್ಕ

ರೀತಿಯನ್ನು ಅನುಸರಿಸಬೇಕಾದುದೇ ಧರ್ಮವೆಂದು ಹೇಳತಕ್ಕ ಪ್ರಶ್ನೆ. ಎಲ್ಲಕ್ಕಿಂತ ಹೆಚ್ಚಾಗಿ ವಿಜ್ಞಾನ ಯುಗ; ಅದರಲ್ಲಿಯೂ ಅಣುಶಕ್ತಿಯ ದಿನ!

ನಾನ್ಯಾರು, ಎಲ್ಲಿಂದ ಬಂದೆ, ಎಲ್ಲಿಗೆ ಹೋಗುತ್ತೇನೆ, ನನಗೆ ಸರಿಯಾದ ದಾರಿಯಾವುದು ಎಂಬುದನ್ನು ಮಥನ ಮಾಡತಕ್ಕ ದಿನ!

ನನ್ನ ಜೀವನದ ಕತೆಯನ್ನು ನಾನು ಬರೆದಿಟ್ಟು ಹೋಗುತ್ತೇನೆ, ಎಲ್ಲಿಗೆ!

'ಜಾತಸ್ಯ ಹಿ ಧ್ರುವೋಮೃತ್ಯು
ಧ್ರುವಂಜನ್ಮ ಮೃತಸ್ಯಚ'

ಎಂಬ ತತ್ವಕ್ಕೆ ಅನುಸಾರವಾಗಿಯೆ?

ಹೋಗುವುದು ಸರಿಯೋ, ತಪ್ಪೋ ಹೇಳಲಾರೆ. ನನ್ನ ಕತೆಯಿಂದ ಇತರರಿಗೆ ಪ್ರಯೋಜನವುಂಟೆ? ಅದನ್ನು ಹೇಳಲು ಚೈತನ್ಯವಿಲ್ಲ. ಹೇಳುವುದು ಸರಿಯೆ? ಹೇಳಬೇಕೆನ್ನಿಸಿದೆ. ಹೇಳದೆ ನನಗೆ ಸಮಾಧಾನವಿಲ್ಲ. ಇದರಿಂದ ಯಾರಿಗಾದರೂ ಪ್ರಯೋಜನವಾಗದಿದ್ದರೂ ಹೇಳಿದ ಸಮಾಧಾನ ನನಗುಂಟು. ಇತರರಿಗೆ ಪ್ರಯೋಜನವಾದರೆಷ್ಟು; ಬಿಟ್ಟರೆಷ್ಟು!

ನಾನೇನೂ ನೀತಿಬೋಧೆಗೆ ನಿಂತಿಲ್ಲವಲ್ಲ!

* * * * *

ನಮ್ಮ ತಂದೆಯವರು ಕಾಲವಾಗಿ ಬಹಳ ವರ್ಷವಾಯಿತು, ಅವರು ಬದುಕಿದ್ದಾಗ್ಯೆ ಅವರೊಬ್ಬ ಹೆಸರುಹೊಂದಿದ ವಕೀಲರಾಗಿದ್ದರು. ಹಣಗಳಿಸಿ ನಮಗೆ ಬೇಕಾದಷ್ಟು ಇಟ್ಟು ಹೋಗಿದ್ದರು.

ಅವರ ಮನ, ಪಾಶ್ಚಾತ್ಯಸಂಸ್ಕೃತಿಯ ಕಡೆವಾಲಿ ಗಂಡಿಗೂ ಹೆಣ್ಣಿಗೂ ಸಮಾನವಾದ ಅವಕಾಶಗಳಿರಬೇಕೆಂಬ ಭಾವನೆಯಿಂದ ಅವರ ಇಬ್ಬರೇ ಮಕ್ಕಳಾದ ನನಗೂ ನನ್ನ ಅಕ್ಕನಿಗೂ ವಿದ್ಯಾಭ್ಯಾಸಕ್ಕೆ ಹಾಕಿದರು.

* * * * *

ಹೈಸ್ಕೂಲ್ ವಿದ್ಯಾಭ್ಯಾಸ ಮುಗಿಯುವವರೆಗೆ ನಾವು ನಮ್ಮ ತಂದೆಯ ಬಳಿಯಲ್ಲೇ ಇದ್ದೆವು. ಹೆಚ್ಚಿನ ವಿದ್ಯಾಭ್ಯಾಸಕ್ಕೆ ನಾವು......... ಊರಿಗೆ ಬರಬೇಕಾಯಿತು. ಅಲ್ಲಿ ನಮಗೇನೂ ಅನಾನುಕೂಲವಿರಲಿಲ್ಲ. ಆ ಊರಲ್ಲಿ ನಮ್ಮ ಸೋದರತ್ತೆಯವರಿದ್ದುದರಿಂದ ಅವರ ಮನೆಗೇನೆ ಹೋದೆವು.

ನಮ್ಮ ಸೋದರತ್ತೆಗೆ ಆಗಲೇ ಸುಮಾರು 60 ವರ್ಷ ವಯಸ್ಸಾಗಿತ್ತು. ಅವರು ನಿವೃತ್ತಿಪಡೆದ ಹೈಸ್ಕೂಲ್ ಮುಖ್ಯೋಪಾಧ್ಯಾಯಿನಿ B. A. L. T. ಅಂದರೆ ಈಗ್ಗೆ ಸುಮಾರು 45 ವರ್ಷದ ಕೆಳಗೇ ಪದವೀಧರರಾದವರು. ಆಗಿನ ಕಾಲಕ್ಕೆ ಅವರೇ ಬಹಳ ಮುಂದುವರಿದಿದ್ದವರು ಎಂದೆನಿಸಿಕೊಂಡಿದ್ದರು. ಅವರೇನೂ ಜೀವನಕ್ಕಾಗಿ ಓದಿ ಉದ್ಯೋಗ ಸಂಪಾದಿಸಿ ಹೊಟ್ಟೆ ಹೊರೆದುಕೊಳ್ಳಬೇಕಾಗಿರಲಿಲ್ಲ. ಹೆಚ್ಚು ಓದಿರದಿದ್ದರೂ ವಿದ್ಯಾವಿನಯಗಳೂ ಧನವುಳ್ಳವರೂ ಅವರನ್ನು ಮದುವೆಯಾಗಿದ್ದರು. ಆದರೂ ಹೆಂಡತಿ ಹೆಚ್ಚು ಓದಿದ್ದುದರಿಂದ ತಾವು ಸ್ವಲ್ಪ (inferiority complex) ಕೀಳೆಂಬ ಮನೋಭಾವವನ್ನು ತೋರಿಸುತ್ತಿದ್ದುದರಿಂದ ನಮ್ಮ ಅತ್ತೆಯವರು, ತೀರ ಲಗಾಮಿಲ್ಲದ ಕುದುರೆಯಂತಾಗದಿದ್ದರೂ ಬಲವಾದ ಸವಾರನಿಲ್ಲದ ಕುದುರೆಯಂತಿದ್ದರು.

ಅವರಿಗೆ ಮೂವರು ಗಂಡುಮಕ್ಕಳು. ದೊಡ್ಡಾತ ಇಂಜಿನಿಯರಿಂಗ್ ಸ್ಕೂಲಿನಲ್ಲಿ ವಿದ್ಯಾಭ್ಯಾಸ ಮುಗಿಸಿ ಪವರ್ ಅಂಡ್ ಲೈಟಿಂಗ್‌ನಲ್ಲಿ ಕೆಲಸದಲ್ಲಿದ್ದರು. ಎರಡನೆಯ ಮಗ ಪೋಕರಿ; ಮನೆ ಸೇರುತ್ತಿರಲಿಲ್ಲ. ಮೂರನೆಯ ಮಗ ಬಿ. ಎ. ಪರೀಕ್ಷೆಗೆ ಓದುತ್ತಿದ್ದರು.

ನಾವು ಓದುವುದಕ್ಕೆ ಪ್ರಾರಂಭಿಸಿದುದಕ್ಕೂ ಓದನ್ನು ಮುಂದುವರಿಸಲಿಕ್ಕೂ ಇದ್ದ ಈ ಹಿನ್ನೆಲೆಯನ್ನು ಮರೆಯಬಾರದು. ನಾವು ಕಾಲೇಜಿನಲ್ಲಿ ಓದುವಕಾಲಕ್ಕೆ ಪ್ರತಿಯೊಂದು ತರಗತಿಯಲ್ಲಿಯೂ 5-6 ಹುಡುಗಿಯರಿಗಿಂತ ಹೆಚ್ಚು ಮಂದಿ ವಿದ್ಯಾರ್ಥಿನಿಯರಿರಲಿಲ್ಲ.

ಓದಿ ಮುಂದುವರಿದವರೆಂಬ ಭಾವನೆ ಬರಬೇಕೆಂತ ನಮ್ಮ ತಂದೆಯವರ ಅಭಿಪ್ರಾಯ. ಅದಕ್ಕಾಗಿ ಅವರು ಶಾಲೆ ಸೇರಿಸಿದರು. 'ನಾನು ಓದಿ ಕೆಲಸದಲ್ಲಿ ಸಹ ಇದ್ದೆ, ಹೆಣ್ಣು ಗಂಡಿಗಿಂತ ಯಾತರಲ್ಲೂ ಕಡಿಮೆಯಿಲ್ಲ. ಎಲ್ಲದರಲ್ಲೂ ಹೆಣ್ಣಿಗೆ ಸಮಾನ ಸ್ಥಾನವಿರಬೇಕು. ಗಂಡನಿಗೇಕೆ ಹೆಂಗಸಿಗಿಂತ ಹೆಚ್ಚಿನ ಸ್ವಾತಂತ್ರ್ಯ' ಎಂಬ ವಾದ ನಮ್ಮ ಅತ್ತೆಯವರದು. ಆದ್ದರಿಂದ ನಾವೂ ಗಂಡಸರಿಗೆ ಯಾವ ಅಂಶದಲ್ಲೂ ಕೀಳಿಲ್ಲ. ಲಿಂಗಭೇದವೊಂದೆ—ಎಂಬ ಅಭಿಪ್ರಾಯ ನನ್ನ ಮನಸ್ಸಿನಲ್ಲೂರಿ ಅದು ಬೆಳೆಯಲಾರಂಭಿಸಿತು.

ಮೇಲಾಗಿ ನಾನು ವಿಜ್ಞಾನವನ್ನು ನನ್ನ ಐಚ್ಛಿಕ ಭಾಗವಾಗಿ ತೆಗೆದು

ಕೊಂಡುದರಿಂದ, ಹೇಗೆ, ಏನು ಎಂಬ ಪ್ರಶ್ನೆ ನನ್ನ ಮನಸ್ಸಿನಲ್ಲಿ ಆಗಾಗ ಏಳುತ್ತಲಿತ್ತು. ಮೇಲಾಗಿ ನಮ್ಮಕ್ಕ ಬಿ. ಎ. ಆನರ್ಸಿಗೆ ಓದುತ್ತಿದ್ದಳು. ಆಕೆಯು ಎಲ್ಲ ಬಗೆಯ ಪುಸ್ತಕಗಳನ್ನೂ ಓದಲು ತರುತ್ತಿದ್ದಳು. ಪುರಾತನ ಮತ್ತು ನವೀನ ವೇದಾಂತಗ್ರಂಥಗಳು; ವಾದ ಗ್ರಂಥ, ಸೋಶಿಯಾಲಜಿ, ಕಮ್ಯೂನಿಸ್ಟ್, ಸೋಶಿಯಲಿಸ್ಟ್ ಸಾಹಿತ್ಯ, ಕವಿತೆಗಳೂ, ನಾಟಕಗಳು, ಕಾದಂಬರಿಗಳು, ಇತ್ಯಾದಿ, ಇತ್ಯಾದಿ. ಇವುಗಳನ್ನೆಲ್ಲಾ ನಾನೂ ಸಾಧ್ಯವಾದಷ್ಟು ಓದುತ್ತಿದ್ದೆ. ಇದರಿಂದ ಮನಸ್ಸಿನಲ್ಲಿ ಮಥನಕ್ಕೆ ಆರಂಭವಾಗಿತ್ತು. ಪಾಶ್ಚಾತ್ಯ ಸಾಹಿತ್ಯ, ವಿಜ್ಞಾನ, ವೇದಾಂತ-ಇವುಗಳು ತಪ್ಪೆ? ಇವುಗಳನ್ನು ಯುರೋಪ್ ಮತ್ತು ಅಮೆರಿಕಾ ಖಂಡಗಳು ಆಚರಣೆಯಲ್ಲಿಟ್ಟುಕೊಂಡಿಲ್ಲವೆ? ಅಥವ ಅವರ ಮಾರ್ಗವು ಮೆಟೀರಿಯಲಿಸಂನಿಂದ ಪ್ರಾರಂಭಿಸಿ ಸ್ಟೇಟ್‌ನೊಡನೆ ಮುಕ್ತಾಯಹೊಂದಿ ಇನ್ನೂ ಹೆಚ್ಚು ಮುಂದುವರಿಯಲಾರದೆ ಅಲ್ಲಿಯೇ ನಿಂತುಬಿಟ್ಟದೆಯೆ?

ನಮ್ಮ ತತ್ವ ಮತ್ತು ವೇದಾಂತಗಳು ಸರಿಯಾದುವೆ? ನಮ್ಮ ತತ್ವದಲ್ಲಿರುವ ಆತ್ಮನಿರೀಕ್ಷಣೆ ಮತ್ತು ಆತ್ಮ ಮುಕ್ತಿಮಾರ್ಗ-ಅವರ ವೇದಾಂತದಲ್ಲುಂಟೆ?

ಇವುಗಳಲ್ಲಿ ಯಾವುದು ಸರಿ?

ನಾನ್ಯಾರು, ಎಲ್ಲಿಂದ ಬಂದೆ, ಎಲ್ಲಿಗೆ ಹೋಗುತ್ತೇನೆ, ಹುಟ್ಟುಸಾವುಗಳೇಕೆ, ಈ ಪ್ರಶ್ನೆಗಳಿಗೆ ಯಾವ ವೇದಾಂತ ಸ್ವಲ್ಪ ಹೆಚ್ಚು ಕಡಿಮೆ ಸರಿಯಾದ ಸಮಾಧಾನವೀಯುಬಲ್ಲುದು?

ಅಥವಾ ಯಾವ ವೇದಾಂತವೂ ಮೇಲ್ಕಂಡ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನೀಯಲಾರದೊ?

ಈ ಮಧ್ಯೆ ನಮ್ಮ ಹಳೆಯ ಸಂಸ್ಕೃತಿಗೆ ಸಂಬಂಧಪಟ್ಟ ವೇದಗಳು ಉಪನಿಷತ್ತುಗಳು, ಭಗವದ್ಗೀತೆ, ಪುರಾಣಗಳು ಇವುಗಳನ್ನೂ ಓದುತ್ತಿದ್ದೆ. ನನಗೆ ಸಂಸ್ಕೃತ ಚೆನ್ನಾಗಿ ಬರುತ್ತಿರಲಿಲ್ಲವೆಂದು ಹೇಳುವುದಕ್ಕಿಂತ, ಬರುತ್ತಲೇ ಇರಲಿಲ್ಲವೆಂದು ಹೇಳುವುದೇ ಒಳ್ಳೆಯದೆಂತ ಕಾಣುತ್ತೆ. ನಾನು ಸಂಸ್ಕೃತವನ್ನು ಸೆಕೆಂಡ್ ಲಾಂಗ್ವೇಜ್ ಆಗಿ ತೆಗೆದುಕೊಂಡಿದ್ದರೂ ಆ ಗಂಭೀರ ಗಭೀರ ವಾಣಿಯ ಸೂತ್ರಗಳು ಚೆನ್ನಾಗಿ ಅರ್ಥವಾಗುತ್ತಿರಲಿಲ್ಲ. ಅವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕೆಂಬ ಕುತೂಹಲ ಹೆಚ್ಚಾ

ಯಿತು. ನನ್ನ ಮನಸ್ಸಿನಲ್ಲಿದ್ದ ಸಮಸ್ಯೆಗಳು ಕೆಲವನ್ನು, ತಿಳಿದವರೆಂದು ಹೇಳಲ್ಪಡುವ ಕೆಲವರ ಮುಂದಿಟ್ಟೆ. ಅವರಿಗೆ ಸಮಸ್ತವೂ ಬಾಯಿಪಾಠವಾಗಿದ್ದರೂ ಸಮನ್ವಯಮಾಡಿ ತಿಳಿಯಹೇಳುವ ಶಕ್ತಿ ಇರಲಿಲ್ಲ. ಅನೇಕ ಕಡೆಯ ನನ್ನ ಸಂದೇಹಗಳು ಅವರ ಮನಸ್ಸಿನಲ್ಲೂ ಸಂದೇಹವಾಗಿಯೇ ಇದ್ದುವು. ಪ್ರೊಫೆಸರ್ ಮ್ಯಾಕ್ಸ್ ಮುಲ್ಲರವರ 'ಸೇಕ್ರೆಡ್‌ಬುಕ್ಸ್ ಆಫ್ ದಿ ಈಸ್ಟ್' ಓದಿದೆ. ಆ ಭಾಷಾಂತರ ವಾಲೆಯ ಡಬ್ಬದಲ್ಲಿ ಕಲ್ಲು ಹಾಕಿ ಅಲ್ಲಾಡಿಸಿ, ಮೃದಂಗದ ಶಬ್ದ ವೆಂದುಕೊಂಡಂತೆ ಆಯಿತು.

ನಮ್ಮ ಸಂಸ್ಕೃತಿ ಅರ್ಥವಾಗಲಿಲ್ಲ. ನಮ್ಮ ಆಚಾರ, ಬರಿಯ ಅನಾಚಾರವೆಂಬ ಭಾವನೆ ಮನಸ್ಸಿನಲ್ಲಿ ಹುಟ್ಟುತ್ತ ಬಂತು. ಕನ್ಯಾವಿವಾಹ, ವೈಧವ್ಯ, ಉಪನಿಷತ್ತುಗಳಲ್ಲಿಲ್ಲ. ವರ್ಣಾಶ್ರಮ ಧರ್ಮ! ಬ್ರಾಹ್ಮಣ ಶಬ್ದದ ಅರ್ಥ! 'ಬ್ರಾಹ್ಮಣ'ನ ಆಚಾರವ್ಯವಹಾರಗಳು! 'ಬ್ರಾಹ್ಮಣ'ರಲ್ಲಿಯೇ ನೂರಾರು ಪಂಗಡಗಳು! ಇವುಗಳೆಲ್ಲ ಸರಿಯೇ-ಎಂಬ ಭಾವನೆ ಬರಲಾರಂಭಿಸಿತು. ಪುರಾಣದಲ್ಲಿಯ ಕುಂತಿ, ಮಾದ್ರಿ, ದ್ರೌಪದಿ, ಅಹಲ್ಯೆ, ತುಳಸಿ, ತಾರೆಯರು ಸಾಧ್ವಿಗಳು! ಇವರೆಲ್ಲ ಪರಪುರುಷರನ್ನು ಕಂಡವರು! ಕೊನೆಯೆಲ್ಲಿ, ಮೊದಲೆಲ್ಲಿ?—ಅನಿಸಿತು.

ಆಗಿನ ನನ್ನ ಉಬ್ಬರವಿಳಿತಗಳು ಬಿರುಗಾಳಿಯಿಂದ ಅಲ್ಲೋಲ ಕಲ್ಲೋಲವಾಗುತ್ತಿರುವ ಸಮುದ್ರಕ್ಕೂ ಮೀರಿಹೋಗಿತ್ತು. ನಮ್ಮ ಶಾಸ್ತ್ರ ತಿರುವಿದರೆ, ಶಾಂತಿ ಸಮಾಧಾನಗಳು ನೆಲೆಸುವಂತೆ ಹೇಳತಕ್ಕವರಿಲ್ಲ. ಪಾಶ್ಚಾತ್ಯ ಸಂಸ್ಕೃತಿಯ ಕಡೆ ತಿರುಗಿದರೆ, ಪ್ಲಾಟಾನಿಕ್‌ಲಾ, ಎಪಿಕ್ಯೂರಿಯನ್ ಫಿಲಾಸಫಿ, ಹೆಡೋನಿಸಂ, ಬೊಹಿಮಿಯಾನಿಸಂ, ಪ್ಲೇಟೋ, ಅರಿಸ್ಟಾಟಲ್, ಕಾಂಟ್, ಹೇಗಲ್........ಮಾರ್ಕ್ಸ್........! ಕೊನೆಯೆಲ್ಲಿ! ಮೊದಲೆಲ್ಲಿ! ಯಾವುದು ಸರಿ, ಯಾವುದು ತಪ್ಪು? ಓದಿದಷ್ಟೂ ಆಲೋಚಿಸಿದಷ್ಟೂ ಮನಸ್ಸಿನ ಏರಿಳಿತ ಕಡಿಮೆಯಾಗುವ ಸಂಭವವೇ ಕಂಡು ಬರಲಿಲ್ಲ!

ಇಷ್ಟೆಲ್ಲ ಹೊತ್ತಿಗೆ ನಾನು ಇಂಟರ್‌ಮೀಡಿಯಟ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಕಾಲೇಜಿಗೆ ಬಂದೆ.

ಈ ಮಧ್ಯೆ ಪಾಲಿಟಿಕ್ಸ್; ಗಾಂಧಿಜೀ-ಅಹಿಂಸಾತತ್ವ; ಸತ್ಯಾಗ್ರಹ. ಹಿಟ್ಲರ್, ಮುಸುಲೊನಿ, ಕೆಮಾಲ್ ಅಟಾಟರ್ಕ್, ಸ್ಟಾಲಿನ್...........

ಒಂದೊಂದು ದೇಶದ ಉದ್ಧಾರಕ್ಕೆ ಒಬ್ಬೊಬ್ಬ ಯುಗಪುರುಷ! ಮನಸ್ಸಿಗೆ ಹಿಡಿಸುವಷ್ಟು, ಹಿಡಿದು ಬಿರಿಯುವಷ್ಟು ವಿಷಯಗಳು, ತತ್ವಗಳು!

ಇಷ್ಟು ಸುತ್ತಿಗೆ ಪೆಟ್ಟು ತಿಂದ ನನ್ನ ಮನಸ್ಸಿನಲ್ಲಿ ನನ್ನದೇ ಆದ ಒಂದು ತತ್ವಸಿದ್ಧಾಂತವಾಯಿತು-ನಿತ್ಯಮಾರ್ಗದ ಪರೋಪಕಾರದೃಷ್ಟಿಯ ಸೌಖ್ಯತತ್ವವಾದ! ನೀನೆಲ್ಲಿಂದ ಬಂದೆ, ಎಲ್ಲಿಗೆ ಹೋಗುತ್ತೀ, ಯಾಕೆ ಬಂದೆ -ಈ ಪ್ರಶ್ನೆಗಳಿಗೆ ಉತ್ತರ ಇಲ್ಲ. ಆಚಾರ್ಯರು ಕೊಡುವ ಉತ್ತರ, ಅದ ರಲ್ಲೊ ಅವನ ಇಚ್ಛೆ—ಎಂಬ ವಾದ ಹಿಟ್ಲರಿನ ಆಟಾಕ್ರಸಿಯ ಅಧ್ಭುತ ತೀರ್ಮಾನಗಳು! ಅದು ಅರ್ಥವಿಲ್ಲದ ವಾದ, ಜೀವಿಸುವ ಎರಡು ದಿವಸ ಸತ್ಯವನ್ನು ನುಡಿದು, ಪರಹಿತವನ್ನು ಬಯಸಿ, ಸುಖದುಃಖಗಳನ್ನು ಸಮಾ ನವಾಗೆಣಿಸಿ, ಆತ್ಮಕ್ಕೆ ವೋಸಮಾಡದೆ, ದೇಹಸೌಖ್ಯವನ್ನು ಮರೆಯದೆ ಇದ್ದು ಹೋಗು.

ಆಲೋಚಿಸಿದಷ್ಟು ಈಗಿನ ಸಮಾಜದ ರೀತಿನೀತಿಗಳು ಅಧಃಪತಿತ ವಾಗಿ ನಮ್ಮ ಅರ್ಥವಿಲ್ಲದ ಆಚಾರ ವ್ಯವಹಾರಗಳ ತಳಹದಿಯ ಮೇಲೆ ಅಲುಗಾಡುತ್ತ ನಿಂತಿರುವಂತೆ ನನಗೆ ತೋರಿತು.

ಒಂದು ಉಪ್ಪರಿಗೆ, ಅದರ ಪಕ್ಕದಲ್ಲಿ ಒಂದು ಹುಲ್ಲುಗುಡಿಸಲು! ಬ್ರಹ್ಮವನ್ನರಿಯದವ ಜನ್ಮದಿಂದ ಬ್ರಾಹ್ಮಣ! ಇನ್ನೊಬ್ಬ ಸದಾಚಾರಿಯಾ ದರೂ ಚಾಂಡಾಲ! ಪಾಶ್ಚಾತ್ಯ ಸೀಮೆಗಳನ್ನೂ ಮೀರಿರುವ ಬಡತನ ಸಿರಿ ತನಗಳ ಮೇಲುಕೀಳುಗಳ, ಸಮಾಜದ ಭೇದಗಳು! ಎಲ್ಲಕ್ಕಿಂತ ಹೆಚ್ಚಿನ ದಾಗಿ ಆತ್ಮವಿಕಾಸಕ್ಕೆ ಅವಕಾಶಕೊಡದ ಸಮಾಜದ ವ್ಯವಹಾರ! ಚರ್ಚಿ ಸಿದರೆ ಕೋಪಗೊಳ್ಳುವ, ಸಮಾಧಾನ ಹೇಳಲು ತಿಳಿಯದ, ಆದರೂ ಸರ್ವಜ್ಞರೆಂದು ಭಾವನೆಯುಳ್ಳ ಮಠಾಚಾರ್ಯರು ಮತ್ತು ಅವರ ಅನುಯಾಯಿಗಳು!

ಆಲೋಚಿಸಿದಷ್ಟೂ ನನಗೆ ತಲೆತಿರುಗುವಂತಾಗಿ ಎಲ್ಲವೂ ಹುಚ್ಚು ಹುಚ್ಚಾಗಿ ಕಂಡುಬಂದು, ನಾನು ಅನುಸರಿಸಬೇಕೆಂದಿರುವ ತತ್ವವೇ ನನ್ನ ಮನಸ್ಸಿಗೆ ಸರಿಯೆನಿಸಿತು.

ನಾನೇನೂ ತೀರ ಸುಂದರಿಯಲ್ಲದಿದ್ದರೂ ಒಮ್ಮೆ ನೋಡಿದರ ಇನ್ನೊಮ್ಮೆ ನೋಡಬೇಕೆಂದೆನಿಸುವಂತೆ ಇದ್ದೆ. ಗಂಡಸರು ಹೆಂಗಸರ ಎಂಬ ಭಾವನೆಯಿಲ್ಲದೆ ಧಾರಾಳವಾಗಿ ಓಡಾಡಿ ಮಾತುಕತೆಯಾಡುತ್ತಿದ್ದ

ದರಿಂದ ಎಷ್ಟೋ ಜನಕ್ಕೆ ಎಷ್ಟೋ ವಿಧದಲ್ಲಿ ಬೇಕಾಗಿದ್ದೆ.

ಆದರೆ ಇನ್ನೂ ವಿಷಯತೃಷೆ ಬಂದಿರಲಿಲ್ಲ. ಮತ್ತು ಗಂಡಸರು ಬಯಸುವ ವಸ್ತುವಾಗುತ್ತೇನೆಂಬ ಬುದ್ಧಿಯೂ, ಕೆಲವುಗಂಡಸರ ದೃಷ್ಟಿಯ ಅರ್ಥವನ್ನು ಅರಿತುಕೊಳ್ಳುವ ತಿಳುವಳಿಕೆಯೂ ಬಂದಿರಲಿಲ್ಲ.

ಒಂದು ದಿನ ಮಹಡಿಯ ಮೇಲಕ್ಕೆ ಆತುರವಾಗಿ ಹತ್ತುತ್ತಿದ್ದವಳು ಆಗತಾನೇ ಎಲ್ ಎಲ್. ಬಿ. ಪರೀಕ್ಷೆಗೆ ಬರೆದು, ಬಂದು, ಮನೆಯಲ್ಲೇ ಇದ್ದ ನಮ್ಮ ಅತ್ತೆಯ ಮೂರನೆಯ ಮಗನಿಗೆ ಢಿಕ್ಕಿಹೊಡೆದೆ. ನಾನು ಬೀಳದಿರಲೆಂದು ಆತ ನನ್ನನ್ನು ಭದ್ರವಾಗಿ ಹಿಡಿದು ತಬ್ಬಿಕೊಂಡನು. ಏಳುತ್ತಿದ್ದ ನನ್ನನ್ನು ಹಾಗೆಯೇ ಎತ್ತಿಕೊಂಡು ಹೋಗಿ ತನ್ನ ಕೊಠಡಿಯಲ್ಲಿ ತನ್ನ ಹಾಸಿಗೆಯ ಮೇಲೆ ಹಾಕಿಕೊಂಡ; ನಾನು ಬಿಡಿಸಿಕೊಳ್ಳಲು ಒದ್ದಾಡಿದರೂ ಅವಕಾಶಕೊಡಲಿಲ್ಲ ಅಂದಿನಿಂದ ಹೊಸ ಅನುಭವಗಳಾದುವು.

ನನಗಿದ್ದ ಛಳಿ ತೀರ ಬಿಟ್ಟುಹೋಯಿತು ಆತನೊಡನೆ ಇನ್ನೊಂದೆರಡು ಬಾರಿ ನಾನು ಈ ರೀತಿ ಇದ್ದುದನ್ನು ನಮ್ಮತ್ತೆ ಕಂಡು, ನಾನು ನಮ್ಮತಿನದಿದ್ದರೂ ಆತನಿಗೂ ನನಗೂ ವಿವಾಹ ಮಾಡಿಯೇಬಿಟ್ಟರು. ಆತನೊಡನೆ ಕೂಡಿರಲು ನನಗೆ ಯಾವ ವಿಧವಾದ ತಕರಾರಿಲ್ಲದಿದ್ದರೂ ಆಸುರಾಗವಿರಲಿಲ್ಲ. ಮೊದಲಿದ್ದ ನಲಿಗೆಯನ್ನು ಬಿಟ್ಟು, ಬೇರೆ ವಿಧವಾದ ನಯಭಯಗಳನ್ನು ತೋರಿಸಲು ಸಾಧ್ಯವಾಗಲಿಲ್ಲ

ಒಂದು ದಿನ ನಾವಿಬ್ಬರೇ ಮನೆಯಲ್ಲಿದ್ದಾಗ ಆತನ ಮುಂದೆ ನನ್ನ ಮನಬಿಚ್ಚಿದೆ. ಗಂಡು ಹೆಣ್ಣೆಲ್ಲ ಒಂದೇ; ಗಂಡಿಲ್ಲದೆ ಹೆಣ್ಣಿಗೆ ವಿಮೋಚನೆಯಿಲ್ಲ. ಹೆಣ್ಣಿಲ್ಲದೆ ಗಂಡಿಗೆ ಸುಖವಿಲ್ಲ. ಈ ಪ್ರಶ್ನೆ ಗಂಡುಹೆಣ್ಣೆಂಬ ಎರಡು ಲಿಂಗಗಳು ಸೃಷ್ಟಿಯಾದ ಕಾಲದಿಂದಲೂ ಉಂಟು. ಇಬ್ಬರೂ ಸಮಾನ. ಆದ್ದರಿಂದ ಇಬ್ಬರ ವರ್ತನೆಯೂ ಏಕರೀತಿಯಾಗಿರಬೇಕು. ಗಂಡು ಮಾತ್ರ ಮದುವೆಗೆ ಮೊದಲು ಪರಸ್ತ್ರೀಯನ್ನು ನೋಡಬಹುದು ಮದುವೆಯಾದ ಮೇಲೂ ಬೇರೆಯವರನ್ನು ನೋಡಬಹುದು. ಹೆಣ್ಣು ನೋಡಕೂಡದೆಂಬುವುದು ಸರಿಯೆ? ಗಂಡಿಗೆ ಬೇರೆ ನೋಡುವ ಇಷ್ಟವಿಲ್ಲದೆ ಹೆಣ್ಣಿಗೆ ನೋಡುವ ಇಚ್ಛೆ ಇದ್ದರೆ ಅದನ್ನು ಅಡ್ಡಿ ಪಡಿಸಿ ವಿರೋಧ ಮಾಡಿದರೆ ಆ ಆತ್ಮಕ್ಕೆ ತೃಪ್ತಿಯುಂಟಾಗುತ್ತದೆಯೆ?

ಆತನು ಹೋಗುವ ದಾರಿಗೆ ನನ್ನ ಅಡ್ಡಿ ಇಲ್ಲ. ನನ್ನ ದಾರಿಗೆ ಆತ ಅಡ್ಡಿ ಬರಕೂಡದು. ಆದರೆ ಗೃಹ ಸಂಬಂಧವಾದ ವಿಚಾರಗಳಲ್ಲಿ ಸೂ ರೀತಿಯಲ್ಲಿ ಇಬ್ಬರೂ ನಡೆಯಬೇಕು. ಆತನೇ ನನಗೆ ಗತಿ, ಆತನನ ಬಿಟ್ಟರೆ ನನಗೆ ಬೇರೆ ಗತಿ ಇಲ್ಲ ಎಂದು ಹೇಳಿದರೆ ಅದು ಸುಳ್ಳು; ಆದ ಆತನ ವಿಷಯದಲ್ಲಿ ಮರ್ಯಾದೆ ಏನೂ ಕಡಿಮೆ ಮಾಡುವುದಿಲ್ಲ.

ಇನ್ನೂ ಏನೇನೋ.

ಈ ರೀತಿಯಲ್ಲಿ ಇರಲು ಆತನು ಒಪ್ಪಿದರೆ ಆಗಬಹುದು. ಇಲ್ಲದಿದ್ದ ನನ್ನನ್ನು ಬಿಟ್ಟುಬಿಡಬಹುದು.

ನಮ್ಮ ಮದುವೆ ಅನುಕೂಲಕ್ಕೊದಗುವ ದಾಂಪತ್ಯವಾಯಿತು.

ನನ್ನಲ್ಲಿ ರೂಪವಿತ್ತು ಯೌವನವಿತ್ತು; ಹಣವೂ ಇತ್ತು. ಎಲ್ಲಕ್ಕಿಂ ಹೆಚ್ಚಾಗಿ ಅಕಾಮಡೇಷನ್ ಸ್ಪಿರಿಟ್ ಇತ್ತು. ನನ್ನ ಗಂಡನಿಗೆ ಅದಕ್ಕಿಂ ಹೆಚ್ಚಿನದೇನೂ ಬೇಕಾಗಿರಲಿಲ್ಲ. ಕಾಲೇಜಿನಲ್ಲಿ ನನಗಿಂತ ಎಷ್ಟೋ ರೂ ವತಿಯರಿದ್ದರು. ಆದರೆ ಅವರು ಕುರಿಗಳಂತೆ ತಲೆ ತಗ್ಗಿಸಿ ಅದೊಂದ ತರಹ ಹೆಣ್ಣೆಂಬ ನಾಚಿಕೆಯನ್ನೋ, ಅಥವ ನಾನೆಂದುಕೊಂಡಿರುವಂತೆ ಇನ್‌ಫೀರಿಯಾರಿಟಿ ಕಾಂಪ್ಲೆಕ್ಸನ್ನೋ ತೋರಿಸುತ್ತಿದ್ದರು. ಎಲ್ಲದರಲ್ಲೂ ಮುಂದುಬಿದ್ದು ಸಂಕೋಚವಿಲ್ಲದೆ ಮಾತನಾಡುತ್ತಿದ್ದ ನನ್ನ ಬಳಿಗೆ ಪುರು ಷರು ಬೆಂಕಿಯ ಬಳಿಗೆ ಪತಂಗಗಳು ಬಂದು ಬೀಳುವಂತೆ ಬಂದು ಬೀಳು ತ್ತಿದ್ದರು. ಇದರಿಂದ ನನಗೆ ಒಂದು ತರಹ ಹೆಮ್ಮೆಯುಂಟಾಯಿತು. ನನ್ನ ಕಡೆಗಣ್ಣ ನೋಟಕ್ಕೆ ಜನರೆಷ್ಟು ಬಲಿಬೀಳುವರೆಂದು ಜಂಬ ಬಂದಿತು. ಈ ಆಸ್ಪದವನ್ನು ಸರಿಯಾಗಿ ಉಪಯೋಗಿಸಿಕೊಂಡು ಅವರನ್ನು ನನ್ನ ಬಲೆಯಲ್ಲಿ ಹಿಡಿದೆ. ಕೆಲವರನ್ನು ದೂರದಲ್ಲಿರಿಸಿ, ಹತ್ತಿರಕ್ಕೆ ಬಂದೂ ಬರದ ಹಾಗೆ ಮಾಡಿ, ಅವರು ಕೇವಲ ಒಂದು ಹೆಣ್ಣಿನ ಕೈಗೊಂಬೆಯಾಗಿ ಕುಣಿಯುತ್ತಿದ್ದುದನ್ನು ನೋಡಿ, ನನ್ನೊಳಗೆ ನಾನೇ ನಲಿಯುತ್ತಿದ್ದೆ. ಇನ್ನು ಕೆಲವರಿಗೆ ದೇಹವನ್ನೂ ಕೊಟ್ಟೆ.

ಒಬ್ಬನಿಗೆ ಮಾತ್ರ ದೇಹ, ಮನಸ್ಸು, ಎರಡೂ ಕೊಡಬೇಕೆನಿಸಿತು. ಆತನೇ ನಮ್ಮ ಸಹಪಾಠಿ ರಾಜ. ಅವನು ಅಷ್ಟೇನೂ ಸುಂದರ ಪುರುಷ ನಲ್ಲ; ಎತ್ತರವಾದ ಆಳೂ ಅಲ್ಲ. ಬೆಲೆಬಾಳುವ, ಉಡಿಗೆತೊಡಿಗೆ ತೊಟ್ಟ ಟ್ಟೆಲರ್‌ಮೇಡ್ ಜಂಟಲಮನ್ನೂ ಆಗಿರಲಿಲ್ಲ. ಎಣ್ಣೆಗಪ್ಪು ಬಣ್ಣ. ಗುಂಗುರು

ಕೂದಲು, ಒರಟು ಮುಖ. ಆದರೆ ವ್ಯಾಯಾಮದಿಂದ ಉಕ್ಕಿನಂತಾಗಿದ್ದ. ನೋಡಿದರೆ ಮನಮೋಹಕವ ಹರ್ಕ್ಯುಲೀಸ್ ಪ್ರತಿಮೆಯಂತೆ ಕೆತ್ತಿ ಇಟ್ಟಂತಹ ಮಾಂಸಖಂಡಗಳುಳ್ಳ ದೇಹ. ಅಗಲವಾದ ಎದೆ. ತುಂಬುಗತ್ತು ಗುಂಡುಗಲ್ಲ. ಆತನು ಪ್ರತಿಯೊಂದು ಸಬ್ಜೆಕ್ಟಿನಲ್ಲಿಯೂ ಮೊದಲಿಗನಾಗಿರದಿದ್ದರೂ ಮೊದಲಿಗರಿಗಿಂತ ಬಹಳ ದೂರ ಹಿಂದಕ್ಕೆ ನಿಲ್ಲುತ್ತಿರಲಿಲ್ಲ. ಕಾಲೇಜಿನ ಪ್ರತಿಯೊಂದು ವಿಧವಾದ ವ್ಯಾಯಾಮ, ಮತ್ತು ಕ್ರೀಡೆಗಳಲ್ಲಿ ಭಾಗವಹಿಸಿ, ಈಜುವುದು, ಭಾರವೆತ್ತುವುದು, ಕುಸ್ತಿ ಮಾಡುವುದು ಜಮ್ನಾಸ್ಟಿಕ್ಸ್, ಓಟ, ಇವುಗಳಲ್ಲಿ ಮೊದಲಿಗನಾಗಿ ಸ್ಪರ್ಧೆಗಳಲ್ಲಿ ಬಹುಮಾನಪಡೆಯುತ್ತಿದ್ದನು. ಯಾವಾಗಲೂ ನಗುಮುಖ. ನಾಲ್ಕು ಮೊಳದ ಖಾದಿ ದಟ್ಟಿಯನ್ನುಟ್ಟು, ನೆಹರು ಜುಬ್ಬವನ್ನು ಧರಿಸುತ್ತಿದ್ದ. ಟೋಪಿ ಇಲ್ಲ. ತನ್ನಗುಂಗುರು ಕೂದಲು ಬಾಚುತಿದ್ದರೂ ಹದ ಮೀರಿ ನಿಲ್ಲುತ್ತಿತ್ತು. ಯಾವಾಗಲೂ ಎಡತೋಳರಿವೆಯನ್ನು ಸ್ವಲ್ಪ ಮೇಲಕ್ಕೆ ಮುದುರುತ್ತಿದ್ದುದರಿಂದ ಗಡಿಯಾರ ಕಾಣುತ್ತಿತ್ತು.

ಇಷ್ಟೇ ಅಲ್ಲ. ಯಾವುದಾದರೂ ತತ್ವವನ್ನು ಕುರಿತು ಮಾತನಾಡಲು ಪ್ರಾರಂಭಿಸಿದರೆ, ನಮ್ಮ ಮನಸ್ಸಿನಲ್ಲಿ ಮೊದಲು ಭಿನ್ನಾಭಿಪ್ರಾಯವಿದ್ದರೂ ಕೊನೆಗೂ ಆತನು ಹೇಳುತ್ತಿರುವುವೇ ಸರಿಯೆಂದು ತಲೆದೂಗಿಸುವಂತಹ ವಾಗ್ಝರಿ. ಇಂತಹವನಿಗೆ ನಮ್ಮ ಕಾಲೇಜಿನ ಮಾಡೆಸ್ಟಿಯೇ ಮೂರ್ತಿವೆತ್ತಂತಿದ್ದ ತರುಣಿಯರೂ ಮನ ಕೊಟ್ಟಲ್ಲಿ, ನನ್ನಂತಹ ಫ್ರೀಲಾನ್ಸರ್ ಗತಿಯೇನು!

ಆತನು ಎಲ್ಲರಲ್ಲಿಯೂ ಒಂದೇ ರೀತಿ ನಡೆದುಕೊಳ್ಳುತ್ತಿದ್ದ. ಅಷ್ಟೇ ಅಲ್ಲ, ಪ್ರಪಂಚದಲ್ಲಿ ಗಂಡುಹೆಣ್ಣುಗಳೆಂಬ ಎರಡು ಲಿಂಗಗಳಿವೆ-ಎಂಬುದೇ ಆತನ ಗಮನಕ್ಕೆ ಬಂದಂತೆ ಕಾಣಲಿಲ್ಲ. ಎಂತೆಂತಹವರನ್ನೋ ಬಲೆಗೆ ಹಾಕಿಕೊಂಡ ನನ್ನ ಕುಲುಕು, ಒನಪು, ಒಯ್ಯಾರಗಳು ಆತನ ಮುಂದೆ ಏನೇನೂ ಜರುಗಲಿಲ್ಲ. ಬಹಳ ದಿನ ತಡೆದೆ. ಇನ್ನು ಹೆಚ್ಚು ತಡೆಯಲಾಗಲಿಲ್ಲ. ನಾನಾಗಿ ಮನೆಗೆ ಕರೆದು ಮೇಲೆ ಬಿದ್ದುಹೋದೆ. ಆಗಲೂ ಆತನು ಕದಲಲಿಲ್ಲ. ಯಾವ ವಿಧವಾದ ಮನೋಭಾವನೆಯನ್ನೂ ವ್ಯಕ್ತಪಡಿಸದೆ, ಈ ಕೆಳಗಿನ ಮಾತನ್ನು ಹೇಳಿದ—

ನ ಮಾಂಸ ಭಕ್ಷಣೇ ದೋಷಂ ನಮದ್ಯೇ-ನಚ ಮೈಥುನೇ।

ಪ್ರವೃತ್ತಿರೇಷಾ ಭೂತಾನಾಂ ನಿವೃತ್ತಿಸ್ತು ಮಹಾಫಲಾ||

'ನಿಮ್ಮೊಡನೆ ಬೆರೆಯಲು ನನ್ನ ಅಭ್ಯಂತರವೇನೂ ಇಲ್ಲ! ಅದನ್ನು ನಾನು ಪಾಪವೆಂದು ಪರಿಗಣಿಸಿಲ್ಲ. ಅದರಿಂದ ನನಗೆ ಸುಖವೂ ಇಲ್ಲ; ಇಲ್ಲದ್ದರಿಂದ ವ್ಯಥೆಯೂ ಇಲ್ಲ. ಮಾಡಿದರೆ ತಪ್ಪಲ್ಲ. ಮಾಡದಿರುವುದು ಒಳ್ಳೆಯದು. 'ನಿವೃತ್ತಿಸ್ತು ಮಹಾಫಲಾ.' ಬಿಟ್ಟರೆ ತುಂಬ ಒಳ್ಳೆಯದು. ಪರಸ್ತ್ರೀಗಮನ ಮಾಡಕೂಡದೆಂತ ಸಮಾಜದ ಒಂದು ನಿರ್ಣಯ, ಅಷ್ಟೆ. ಮಾಡಿದ ಮಾತ್ರಕ್ಕೆ ನಿರ್ಣಯ ಸುಳ್ಳಾಗುವುದಿಲ್ಲ. ಅಂದು ಆ ರೀತಿಯಲ್ಲಿತ್ತು, ನಿಯಮ. ಇಂದು ಬೇರೆ ನಿಯಮಗಳನ್ನು ಸಮಾಜ ಕಲ್ಪಿಸಲು ಬಹುದು.'

ಆತನಿಗೆ ಆತ್ಮ ಸಂಯಮ ಶಕ್ತಿ ಇತ್ತೇ, ಅಥವ ವಿರೋಧಮಾಡುತ್ತಿದ್ದನೇ, ಎಂಬ ಪ್ರಶ್ನೆ ಬಂತು, ನನ್ನ ಮನಸ್ಸಿನಲ್ಲಿ. ಏನಾದರೇನು-ಆತನನ್ನು ಕದಲಿಸಲು ನನ್ನ ಕೈಯಲ್ಲಾಗಲಿಲ್ಲ!

ನನ್ನ ತತ್ವದ ಮೇಲೆ ನನಗೇ ಅನುಮಾನ ಬರಲಾರಂಭಿಸಿತು; ಈತನ ನಡತೆಯಿಂದ ನನ್ನತತ್ವದ 'ಆತ್ಮಕ್ಕೆ ಮೋಸಮಾಡದೆ ದೇಹಸೌಖ್ಯವನ್ನನುಭವಿಸಿ........'ಎಂಬ ಭಾಗ ಈತನಿಂದ ಸುಳ್ಳಾಯಿತು. ಏಕೆಂದರೆ ಪರಸಹಾಯ ಬೇಕು, ನನ್ನ ತತ್ವ ಊರ್ಜಿತವಾಗಲು. ಅದಿಲ್ಲದಿದ್ದರೆ ಅದರ ಹಿಂದೆ ಇನ್ನೊಂದು ಪ್ರಶ್ನೆ ಎದ್ದಿತ್ತು. 'ಪರಹಿತವನ್ನು ಬಯಸಿ'-! ಬೀದಿಯ ಭಿಕ್ಷುಕನು ಪರಹಿತವನ್ನು ಎಷ್ಟು ಮಟ್ಟಿಗೆ ಬಯಸಬಲ್ಲ! ನನ್ನ ತತ್ವದ ಈ ಎರಡು ಪ್ರಶ್ನೆಗಳು ಹೆಚ್ಚು ಹೆಚ್ಚಾಗಿ ನನ್ನ ಕಣ್ಣಮುಂದೆ ಒಂದಂತೆಲ್ಲ ನನಗೆ ಪರಾಜಯವಾದಂತೆ ಭಾಸವಾಗುತ್ತ ಬಂತು! ಆದರೆ ಪರಾಜಯವನ್ನು ಒಪ್ಪಿಕೊಳ್ಳಲು ಸಿದ್ಧವಾಗಿರಲಿಲ್ಲ! ಅಷ್ಟು ಆತ್ಮಶಕ್ತಿಯಿಲ್ಲದ ಕವಟಿ ನಾನಾಗಿದ್ದೆ. ಅಷ್ಟೇ ಅಲ್ಲ!

'ನಿವೃತ್ತಿಸ್ತು ಮಹಾ ಫಲಾ'

ಬಾಯಲ್ಲಿ ಹೇಳುವುದು ಸುಲಭ. ಆಚರಣೆಗೆ ತರುವುದೇ ಕಷ್ಟ! ಪುನಃ ನನ್ನ ದಾರಿ ಹಿಡಿದೆ. ಆದರೇನು! ತೃಪ್ತಿ ಇರಲಿಲ್ಲ. ಸುಖವಿರಲಿಲ್ಲ! ಕ್ಷಣ ಮಾತ್ರ ತೃಪ್ತಿ ಇರುತಿತ್ತಾದರೂ ಆ ಮೇಲೆ ಅತೃಪ್ತಿ; ಅಸಮಾಧಾನ.

ಅವನನ್ನು ಸೇರದುದರಿಂದ ಪೂರ್ಣವಾಗದ ಆಶೆ. ಅವನು ಬೇಕೆಂಬ ಈ ಹೇಳಲಾಗದ ಬಯಕೆ.

ಇನ್ನು ಮನಸ್ಸಿಗೆ ಎಲ್ಲಿನ ಶಾಂತಿ!

ಡಿಗ್ರಿ ತೆಗೆದುಕೊಂಡು ಇಲ್ಲಿನ ಕಾಲೇಜುಬಿಡುವ ವೇಳೆಗೆ ಸೌಖ್ಯ ತತ್ವವಾದ ಮಾತ್ರ ನನ್ನಲ್ಲುಳಿಯಿತೇ ಹೊರತು ಇನ್ನೇನೂ ಉಳಿಯಲಿಲ್ಲ.

ಡಿಗ್ರಿ ತೆಗೆದುಕೊಂಡ ಮೇಲೆ ನನಗೆ ಮಾಡುವುದಕ್ಕೇ ಏನೂ ಕೆಲಸ ವಿರಲಿಲ್ಲ ಸೋದರೀ ಸಮಾಜ, ಮಹಿಳಾ ಸಮಾಜ, ಇಂತಹ ಸಂಸ್ಥೆಗಳಲ್ಲಿ ಮುಂದೆಬಿದ್ದು ಕೆಲಸಮಾಡತೊಡಗಿದೆ. ಆದರೇನು, ಅಲ್ಲಿಗೆ ಬರುತ್ತಿದ್ದ ಮಹಿಳೆಯರೆಲ್ಲ ಒಂದು ವಿಧದಲ್ಲಿಲ್ಲದಿದ್ದರೆ ಇನ್ನೊಂದು ವಿಧದಲ್ಲಿ ಗಂಡಸಿನ ಅಂಕೆಗೊಳಪಟ್ಟಿದ್ದವರೇ. ಅವರ ನಡೆನುಡಿಗಳೆಲ್ಲ ಆ ಹಿಂದಿದ್ದವರ ತಾಳಕ್ಕೆ ಅನುಸಾರವಾಗಿಯೇ! ಎಂತಹ ಕೆಲಸದಲ್ಲಾದರೂ ಅವರು ತೋರಿಸುತ್ತಿದ್ದುದು ಆರಂಭಶೂರತ್ವ! ಆ ಮೇಲೆ ಪೂರ್ಣವಿರಾಮ! ಪ್ರತಿಯೊಂದು ಸಂಸ್ಥೆಯ ಕೆಲಸಕಾರ್ಯಗಳೂ ಗದ್ದುಗೆಯಿಂದ ಬರುವ ಭಾಷಣಗಳಿಂದಲೇ ಮುಕ್ತಾಯ ಹೊಂದುತ್ತಿದ್ದುವು.

ಎಲ್ಲವೂ ಬರಿಯ ಟೊಳ್ಳೆ!

ಕಾಲೇಜಿನಲ್ಲಿ ನಾನು ಓದುತ್ತಿದ್ದಾಗ ಒಬ್ಬ ಅಸಿಸ್ಟೆಂಟ್ ಪ್ರೊಫೆಸರಿಗೂ ನನಗೂ ಹೆಚ್ಚಿನ ಪರಿಚಯು ಬೆಳೆದು, ಪ್ರಣಯದ ಸಂಗತಿಗಳೂ ನಡೆದಿದ್ದುವು ಆತನು ನಾಟಕಗಳನ್ನು ಬರೆಯುತ್ತಿದ್ದನಲ್ಲದೆ ಆಡುವುದರಲ್ಲಿಯೂ ಭಾಗವನ್ನು ವಹಿಸುತ್ತಿದ್ದ. ನಾನೂ ನಾಟಕದಲ್ಲಿ ಪದೇ ಪದೇ ಭಾಗವನ್ನು ವಹಿಸುತ್ತಿದ್ದುದರಿಂದಲೂ ಕಾಲೇಜ್ ಆರ್ಕೆಸ್ಟ್ರಾಗೆ ಇಬ್ಬರೂ ಸೇರಿದುದರಿಂದಲೂ ಪ್ರಣಯಕ್ಕೆ ಹೆಚ್ಚಿನ ಅವಕಾಶದೊರಕಿತ್ತು.

ನಾನು ಶಾಲೆಬಿಟ್ಟರೂ ಈತನು ನಮ್ಮ ಮನೆಗೆ ಬರುತ್ತಿದ್ದ. ಈತನು ಬರುವುದು ಅಷ್ಟಾಗಿ ನನ್ನ ಗಂಡನಿಗೆ ಇಷ್ಟವಿಲ್ಲದಿದ್ದರೂ ಏನೂ ಹೇಳುವ ಹಾಗಿರಲಿಲ್ಲ. ಆತನನ್ನು ಸಂಧಿಸಿದ ಕಾಲದಲ್ಲಿ ಚೆನ್ನಾಗಿ ಮಾತನಾಡುತ್ತಿದ್ದನಾದರೂ ನನ್ನೊಡನೆ ಅನ್ಯಥಾ ವ್ಯವಹರಿಸದಿದ್ದರೂ ಅಂತರಂಗದಲ್ಲಿ ಮೈತ್ರಿ ಇರಲಿಲ್ಲ. ನನ್ನೊಡನೆ ಹೆಚ್ಚು ಮಾತನಾಡುವ ಧೈರ್ಯವಿರಲಿಲ್ಲ. ಏಕೆಂದರೆ ಸಮಾಜದಲ್ಲಿ ಹೆಂಗಸಿಗೆ ಮಾತ್ರ ನಿಯಮ ಬಂಧನಗಳು, ಗಂಡಸಿಗೆ ಏಕೆ ಕೂಡದೆಂತ ಕೇಳುತ್ತಿದ್ದೆ; ಮತ್ತು ಗಂಡಸರ ತಪ್ಪನ್ನು ನೋಡಿಯೂ ನೋಡದಂತೆ ಅಲಕ್ಷಿಸುವುದೂ ಹೆಂಗಸಿನ ತಪ್ಪನ್ನು ಹೆಚ್ಚುಮಾಡಿ ನಿಂದಿಸುವುದೂ ಯಾವ ಧರ್ಮವೆಂದು ಕೇಳುತ್ತಿದ್ದೆ.

ಇಷ್ಟರಲ್ಲಿಯೇ ನನಗೆ ಒಂದು ಹೆಣ್ಣು ಮಗುವೂ ಆಯಿತು. ಸಂತಾನ ನಿರೋಧದ ಮೇಲಿದ್ದ ಸಾಹಿತ್ಯವನ್ನೆಲ್ಲ ಹೆಚ್ಚು ಕಮ್ಮಿ ಓದಿದ್ದುದರಿಂದಲೂ ಸಂತಾನ ನಿರೋಧ ಅಗತ್ಯವೆಂಬ ಅಭಿಪ್ರಾಯಹೊಂದಿದುವರಿಂದಲೂ ನನಗೇಕೆ ಮಗು–ಎನಿಸಿತು. ಸಂತಾನ ನಿರೋಧದ ಕ್ರಮಗಳನ್ನನುಸರಿಸಿಯೂ ಗರ್ಭಸ್ರಾವಕ್ಕೆ ಯತ್ನಿಸಿಯೂ ಆಗಿತ್ತು. ಆ ಮಗುವು ನನ್ನ ಮಾರ್ಗದಲ್ಲಿ ಒಂದು ನಿರೋಧವಾಗಿತ್ತೆಂದೇ ನನ್ನ ಭಾವನೆ. ಅದರ ಮೇಲೆ ನನಗೆ ಅಷ್ಟಾಗಿ ಪ್ರೀತಿವಿಶ್ವಾಸಗಳಿರಲಿಲ್ಲ. ಅದಕ್ಕೆ ಮೊಲೆಯುಣಿಸಿ ನೋಡಿಕೊಳ್ಳಲು ಒಬ್ಬ ಹೆಂಗಸನ್ನು ಗೊತ್ತು ಮಾಡಿದ್ದೆ. ಆ ಹೆಂಗಸು ಬಾರದ ದಿನ ನೂರಾರು ಬಾರಿ ಗೊಣಗುಟ್ಟಿ, ಫೀಡಿಂಗ್ ಬಾಟಲಲ್ಲಿ ಹಾಲುಹಾಕಿ ಕೊಡುತ್ತಿದ್ದೆ! ಹಡೆದ ತಾಯಿಯಾದ ನಾನು ಅದನ್ನು ಅಷ್ಟು ಪ್ರೀತಿಸದಿದ್ದರೂ ತಂದೆ ಎಂದೆನಿಸಿಕೊಂಡಿದ್ದಾತನಿಗೆ ಅದರ ಮೇಲೆ ಬಹಳ ಮಮತೆಯಿತ್ತು.

ಅದೇನು ವಿಚಿತ್ರವೋ!

ಇಷ್ಟರಲ್ಲಿ ನನ್ನ ಗಂಡನಿಗೆ ವಿಷಮಶೀತಜ್ವರ ಬಂದು ತೀರಿಕೊಂಡನು. ನನ್ನಗಂಡನ ಮೇಲೆ ನನಗೆ ಅಷ್ಟೇನೂ ಪ್ರೀತಿಯಿಲ್ಲದಿದ್ದರೂ ಆತನು ಹೋದುದಕ್ಕೆ ವ್ಯಥೆಯಾಯಿತು. ಅಷ್ಟೇ ಅಲ್ಲ ನನ್ನ ಜೀವನದ ಮಧ್ಯೆ ಈತನನ್ನು ನನಗೆ ಕಟ್ಟಿದರು. ಆತನ ಮನೋಭಾವವೇ ಒಂದು ರೀತಿ, ನನ್ನ ಮನೋಭಾವವೇ ಒಂದು ರೀತಿ ಇದ್ದುದೂ ನಮ್ಮಿಬ್ಬರಿಗೂ ಅಜೀವಪರ್ಯಂತ ಸಂಬಂಧ ಉಂಟಾಗಿದ್ದರೂ, ಆತನ ಆತ್ಮ ತೃಪ್ತಿಗಾದರೂ ನಾನು ನನ್ನ ಮನೋಭಾವನೆಯನ್ನು ಬದಲಿಸದೆ ನನ್ನಿಷ್ಟದಂತೆಯೇ ನಡೆದುದೂ, ಅದರಿಂದ ಆತನಿಗೆ ಸಂತೋಷವಾಗಲೀ ನನಗೆ ತೃಪ್ತಿಯಾಗಲೀ ಉಂಟಾಗದಿದ್ದುದೂ, ಅಂತಶ್ಶುದ್ಧಿ ಇಲ್ಲದ ಬರೀ ಬಾಹ್ಯ ಕಪಟಾಚರಣೆಯ ಬಾಳು ನೆನಸಿಕೊಂಡಷ್ಟೂ ಮನಸ್ಸನ್ನು ಕುಲುಕುತ್ತಿದ್ದಿತು.

ಈ ಭಾವನೆಯೆಲ್ಲ ನನ್ನ ಮನಸ್ಸಿನಲ್ಲಿ ಬರುತ್ತಿದ್ದುದು ನನ್ನ ಬಾಳನ್ನು ಕುರಿತು ದೀರ್ಘವಾಗಿ ಚಿಂತಿಸಿದಾಗ—ನಾನ್ಯಾರು, ಏಕೆ ಬಂದೆ, ಎಲ್ಲಿಗೆ ಹೋಗುತ್ತೇನೆ—ಎಂಬ ವಿಚಾರ ನೆನಪಿಗೆ ಬಂದಾಗ ಎದೆನಡುಗುತ್ತಿತ್ತು. ನಾನು ಇದುವರೆಗೆ ನಡೆಸಿದ ಜೀವನ ಸರಿಯೆ ಎಂಬ ಪ್ರಶ್ನೆ ನನ್ನ ಮನಸ್ಸಿನಲ್ಲೇ ಏಳುತ್ತಿತ್ತು.

ತಪ್ಪಾಗಿದ್ದರೆ ಬೇರೆ ಸರಿಯಾದ ದಾರಿ ಯಾವುದು? ತಪ್ಪು ದಾರಿ ತುಳಿದ ನನಗೆ ಸರಿಯಾದ ಮಾರ್ಗದಲ್ಲಿ ಹೋಗಲು ಅವಕಾಶವುಂಟೆ?

ಗಂಡನಿಲ್ಲದ ನಾನು ಬೇರೆ ಗಂಡನನ್ನುಮದುವೆಯಾಗಲು ಸಾಧ್ಯವೆ? ಹಾಗೆ ಬೇರೆ ಗಂಡನನ್ನ ಮದುವೆಯಾಗಿ ಅವನನ್ನು ಮನಮುಟ್ಟ ಪ್ರೀತಿಸಿ ನನ್ನ ಜೀವನದ ಹಾದಿಯನ್ನು ತಿದ್ದಿಕೊಳ್ಳಲು ಸಾಧ್ಯವೆ? ಹೋಗಲಿ, ನಾನು ವಿಧವೆ. ನಾನು ಮದುವೆಯಾಗಲು ಸಾಧ್ಯವಾಗದಿದ್ದಲ್ಲಿ ಒಬ್ಬನನ್ನು ನಾನು ಕೂಡಿ, ಆಗ ಆ ರೀತಿ ನಡೆಯಲು ಪ್ರಯತ್ನಪಡಬಹುದು. ಆಗ ನಾನು ಪತ್ನಿ ಎನಿಸಿಕೊಂಡೇನೆ? ಇಲ್ಲ; ನಾನೆಷ್ಟಾದರೂ ಉಪಪತ್ನಿ! ಹೋಗಲಿ, ಗಂಡನಿದ್ದವಳು ತನ್ನ ಗಂಡನನ್ನು ಪ್ರೀತಿಸಲು ಸಾಧ್ಯವಾಗದಿದ್ದಲ್ಲಿ ಅವಳ ಗತಿ ಏನು! ಅವಳು ಅವನನ್ನು ಬಿಟ್ಟು ಬೇರೆಯವನನ್ನು ಮದುವೆಯಾಗ ಬಾರದೆ! ನಮ್ಮ ಸಮಾಜದಲ್ಲಿ ಇಂಥದುದಕ್ಕೆ ಅವಕಾಶ ಉಂಟೆ! ಅರಿತೋ ಅರಿಯದೆಯೋ ತಪ್ಪುಮಾಡಿ, ಪಶ್ಚಾತ್ತಾಪಪಟ್ಟು, ಪುನಃ ಸರಿಯಾದ ಮಾರ್ಗಕ್ಕೆ ಬರಬೇಕೆಂದು ಹಾತೊರೆವವರಿಗೆ ಅವಕಾಶವಿದೆಯೆ? ಒಂದು ಬಾರಿ, ಒಂದೇ ಒಂದು ಬಾರಿ ತಪ್ಪು ಮಾಡಿದ ಮಾತ್ರಕ್ಕೆ ಸಾಯುವ ವರೆಗೂ ಪ್ರಾಯಶ್ಚಿತ್ತ ಅನುಭವಿಸುವಂತೆ ಮಾಡುವುದು ಯಾವ ನ್ಯಾಯ!

ಸರಿಯಾದ ದಾರಿಗೆ ಬರಲು ಅವಕಾಶವಿಲ್ಲದೆ ಇದ್ದಲ್ಲಿ, ಅಜೀವ ಪರ್ಯಂತ ಶಿಕ್ಷೆ ಅನುಭವಿಸುವುದು ನ್ಯಾಯವಲ್ಲದಿದ್ದ ಪಕ್ಷದಲ್ಲಿ, ತಪ್ಪು ಯಾರದು? ಸಮಾಜದ ತಪ್ಪೇ?

ತಪ್ಪು ಯಾರದ್ದಾದರೂ ಆಗಲಿ. ಅದಕ್ಕೆ ಪರಿಹಾರವೇನು?

ಮದುವೆಯಾದ ಮಾತ್ರಕ್ಕೆ ಹೆಂಗಸಾದವಳು ಗಂಡನೆಂತಹನೇ ಆಗಲಿ ಅವನಿಗೇಕೆ ಅನುಸರಿಸಿಕೊಂಡಿರಬೇಕು?

ಗಂಡನೇಕೆ ಹೆಂಗಸನ್ನು ಅನುಸರಿಸಬಾರದು?

ಇದು ಸರಿ, ಇದು ತಪ್ಪು ಎಂತ ನಮ್ಮ ಸಂದೇಹಗಳಿಗೆ ಸರಿಯಾದ ಸಮಾಧಾನಗಳನ್ನು ಕೊಟ್ಟುನಮ್ಮನ್ನು ಸರಿಯಾದ ದಾರಿಯಲ್ಲಿ ಹೋಗೆಂತ ಹೇಳುವವರ್‍ಯಾರು?

ಈ ಪ್ರಶ್ನೆಗಳಿಗೆ ಉತ್ತರವಿಲ್ಲ. ಉತ್ತರವಿಲ್ಲದೆ ಪ್ರಶ್ನೆ ಮರಳಿ ಮರಳಿ ಮನದಲ್ಲಿ ಬರುವುದು ನಿಲ್ಲುವುದಿಲ್ಲ. ಅಂತಹ ಸಂದರ್ಭದಲ್ಲಿ ಮನಸ್ಸಿಗೆ ಶಾಂತಿ ಎಲ್ಲಿಯದು.

ಶಾಂತಿ ಇಲ್ಲದ ಜೀವನ ಎಂತಹ ಜೀವನ!

ಸರಿಯಾದ, ಮಾರ್ಗದರ್ಶಕವಾದ, ವಿದ್ಯೆ ಇಲ್ಲದೆ ಬರಿಯ ಬಿ. ಎ; ಎಮ್. ಎ., ಗಳಿಂದ ಏನು ಸಾರ್ಥಕ! ನಾನು ತೆಗೆದುಕೊಂಡು ಪಠಿಸಿ, ಪದವಿಯನ್ನು ಹೊಂದಲು ಭಾಗಗಳಾಗಿದ್ದ ಸಸ್ಯ ಶಾಸ್ತ್ರ, ಪ್ರಾಣಿ ಶಾಸ್ತ್ರ, ರಸಾಯನ ಶಾಸ್ತ್ರ, ಭೂಗರ್ಭಶಾಸ್ತ್ರ, ಗಣಿತ, ಮನಃಶಾಸ್ತ್ರ, ವೇದಾಂತ, ತರ್ಕ, ಅರ್ಥಶಾಸ್ತ್ರ, ಫಿಸಿಕ್ಸ್, ಸೋಷಿಯಾಲಜಿ, ಇನ್ನೂ ಇತರ ಶಾಸ್ತ್ರ ಗಳಿಂದ, ಪದವಿ ಪಡೆದ ಮೇಲೆ ಸಾಮಾನ್ಯ ಜೀವನದಲ್ಲಿ ಎಷ್ಟು ಮಟ್ಟಿನ ಸಹಾಯ!

ಇವುಗಳಲ್ಲಿ ಮೇಲಿನ ಪ್ರಶ್ನೆಗೆ ಯಾವುದು ಸರಿಯಾದ ಉತ್ತರವನ್ನು ಹೇಳಬಲ್ಲುದು!

ಇದರಿಂದ ಮನಸ್ಸಿನ ಅಲ್ಲೋಲಕಲ್ಲೋಲಗಳು ಇನ್ನೂ ಹೆಚ್ಚು ಹೆಚ್ಚಾಗುತ್ತವೆಯೇ ಹೊರತು ಕಮ್ಮಿಯಾಗಲಾರವೆಂತ ನನಗೆ ತೋಚಿತು.

ನಿರಂತರವಾದ ಶಾಂತಿಯನ್ನು ಪಡೆಯಲು ಅಸಾಧ್ಯವಾದಾಗ, ಮನಸ್ಸಿನ ಉಬ್ಬರವಿಳಿತಗಳನ್ನು ನಿರೋಧಿಸಲು ಬೇರೆ ಮಾರ್ಗವಾವುದು? ಮನಸ್ಸನ್ನು ಆ ಕಡೆ ಬಿಡದೆ ಬೇರೆ ಕಡೆಗೆ ಸೆಳೆಯುವುದು; ಉದಾಹರಣೆಗಾಗಿ ಸಾಮಾಜ ಸೇವೆ. ಅದೂ ನನ್ನಿಂದ ಸಾಧ್ಯವಾಗಲಿಲ್ಲ ಸಾಧ್ಯವಾಗುವಂತೆ ನಮ್ಮ ಸಮಾಜದ ಸ್ಥಿತಿ ಇಲ್ಲ!

ಇನ್ನೇನು ಮಾಡಬೇಕು! ಹೆಜ್ಜೆಯನ್ನು ಹಿಂದಿಡುವಂತೆಯೂ ಇಲ್ಲ; ಮುಂದಿಡುವಂತೆಯೂ ಇಲ್ಲ; ಇದ್ದ ಸ್ಥಿತಿಯಲ್ಲೇ ಬಹಳ ಕಾಲ ಇರುವುದು ನಿಯಮಕ್ಕೆ ವಿರುದ್ಧ!

ಕಾಲೇಜಿನ ಅಸಿಸ್ಟೆಂಟ್ ಪ್ರೊಫೆಸರ್, ನನಗಾಗಿ ಹೆಂಡತಿ ಮಕ್ಕಳನ್ನೂ ಬಿಟ್ಟ. ಆತನು ಅವರನ್ನು ಅಲಕ್ಷಿಸುವಂತೆ ಮಾಡಿ ನನ್ನ ಬಳಿಯೇ ಯಾವಾಗಲೂ ಇರುವಂತಹ ಮೋಹಜಾಲವನ್ನೂ ಆತನ ಮೇಲೆ ಹೂಡಲು ನನಗೆ ಹೆಚ್ಚು ಕಷ್ಟವಾಗಲಿಲ್ಲ.

ಅದರಿಂದ ಆತನ ಸಂಸಾರಕ್ಕೆ ಎಷ್ಟು ತೊಂದರೆಯಾಯಿತೋ ಎಂತ ಈಗ ಅನಿಸುತ್ತದೆ!

ಆಗ ಆ ಭಾವನೆ ಇರಲಿಲ್ಲ. ನನಗೆ ಸಂತೋಷ ಬೇಕಾಗಿತ್ತು-ಅಷ್ಟೆ. ಸೌಖ್ಯ ತತ್ವವಾದವನ್ನು ಎತ್ತಿ ಹಿಡಿದರೆ ನನ್ನ ಸೌಖ್ಯಕ್ಕಾಗಿ ಇತರರ ಸೌಖ್ಯ

ವನ್ನು ಹಾಳುಮಾಡುವುದು ಸರಿಯೋ-ಎಂಬ ಪ್ರಶ್ನೆ ಏಳುತ್ತದೆ. ಆಗ ಆ ಪ್ರಶ್ನೆಗೆ ಉತ್ತರ ಕೊಡಲು ಸಿದ್ಧಳಾಗಿರಲಿಲ್ಲ. ಉತ್ತರ ಕೊಡುವುದೇನು- ಆ ಪ್ರಶ್ನೆ ಮನಸ್ಸಿನಲ್ಲಿ ಏಳುವುದಕ್ಕೇ ಅವಕಾಶ ಕೊಡುತ್ತಿರಲಿಲ್ಲ

ಆತನ ಹೆಂಡಿರು ಮಕ್ಕಳು ಅದೆಷ್ಟು ಸಂಕಟಪಟ್ಟರೋ, ನನಗೆ ಅದೆಷ್ಟು ಶಾಪಹಾಕಿರಬಹುದೋ ಆ ಭಗವಂತನೇ ಬಲ್ಲ

ಈ ಮಧ್ಯೆ......ಅವರ ನಾಟಕದ ಕಂಪೆನಿ ಬಂದಿತು. ಅದರಲ್ಲಿಯ ಒಬ್ಬ ನಟ ನನ್ನ ಜೊತೆಯಲ್ಲಿ ಕಾಲೇಜಿನಲ್ಲಿ ಓದಿದವನು, ಆತನು ನನ್ನನ್ನು ಅವರ ಕಂಪೆನಿಯ ಯಜಮಾನನಿಗೆ ಪರಿಚಯ ಮಾಡಿಸಿಕೊಟ್ಟನು. ನನಗೆ ಆ ಕಲೆಯಲ್ಲಿ ಸ್ವಲ್ಪ ಅಭಿರುಚಿ ಇದ್ದುದರಿಂದ ನನ್ನ ಮನಸ್ಸು ಅತ್ತ ಹರಿಯಿತು. ಒಂದೆರಡು ಸಾಮಾಜಿಕ ನಾಟಕಗಳಲ್ಲಿ ಭಾಗವಹಿಸಿದೆ. ನನ್ನ ಹೆಸರು ವೃತ್ತ ಪತ್ರಿಕೆಗಳಲ್ಲಿ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಬರಲಾರಂಭಿಸಿದುವು.

ನಾಟಕವೂ ಒಂದು ಕಲೆಯೆಂಬ ದೃಷ್ಟಿಯಿಂದಲೇ ನಾನು ಅದರಲ್ಲಿ ಪ್ರವೇಶಿಸಿದುದು. ನಾನು ಅದರಲ್ಲಿ ಪ್ರವೇಶಿಸಿದುದರಿಂದ ಅಸಿಸ್ಟೆಂಟ್ ಪ್ರೊಫೆಸರಿನ ಮೇಲೆ ನನ್ನದೃಷ್ಟಿ ಸ್ವಲ್ಪ ಕಡಿಮೆಯಾಯಿತು. ಆದರೆ ಅಸಡ್ಡೆ ಏನೂ ಇರಲಿಲ್ಲ. ಆತನು ಬಯಸಿದಷ್ಟು ಕಾಲ ಆತನೊಡನೆ ಇರಲು ಸಾಧ್ಯವಾಗುತ್ತಿರಲಿಲ್ಲ.

ನಾನು ಆಚೆ ಅಷ್ಟುಕಾಲ ಕಳೆಯುವುದು ಸರಿಯಲ್ಲವೆಂದು ಆತನು ಮೆಲ್ಲನೆ ಸೂಚಿಸಿದನು. ನಾನು ಇಷ್ಟಪಡದೆ ಯಾರೂ ನನ್ನನ್ನು ಹೊತ್ತು ಕೊಂಡು ಹೋಗಲು ಸಾಧ್ಯವಿಲ್ಲವೆಂದು ಹೇಳಿ ನಕ್ಕು, ಹಾಸ್ಯಮಾಡಿಬಿಟ್ಟೆ. ಆತ ಖಂಡಿತವಾಗಿ ಮತ್ತೊಮ್ಮೆ ಹೇಳಿದ. ಒಬ್ಬರಿಗೆ ತಗ್ಗಿ ನಡೆದಾಗಲೀ ಒಬ್ಬರಿಂದ ಒಂದೆರಡು ಮಾತು ಕೇಳಿಯಾಗಲೀ ನನಗೆ ರೂಢಿ ಇಲ್ಲದುದ ರಿಂದ, ನನಗೆ ಕೋಪಬಂದು, ಆತ ನನ್ನನ್ನು ಮದುವೆಯಾದ ಗಂಡ ಕೂಡ ಅಲ್ಲವೆಂದೂ, ಆತನು ಬದುಕಿದ್ದಾಗ ನನ್ನನ್ನು ಆಳುತ್ತಿರಲಿಲ್ಲವೆಂದೂ, ಈಗ ನನಗೆ ಅನ್ನ ಬಟ್ಟೆಸಹ ಕೊಡದ ಈತನು ಆಳುವುದಕ್ಕೆ ಪ್ರಯತ್ನ ಪಡ ಕೂಡದೆಂದೂ ಹೇಳಿಬಿಟ್ಟೆ.

ಪಾಪ! ಆತನ ತಲೆಯ ಮೇಲೆ ಆಕಾಶವೇ ಬಿದ್ದಂತಾಯಿತು!

ಆತನು ನಿಜವಾಗಿ ನನ್ನನ್ನುಪ್ರೀತಿಸುತ್ತಿದ್ದನು. ಈ ಮಧ್ಯೆ ನಾಟಕದ

ಕಂಪೆನಿಯ ಯಜಮಾನನು ನನ್ನ ಮೇಲೆ ಎಲ್ಲಿಯೂ ಇಲ್ಲದ ಶ್ರದ್ಧೆಯನ್ನು ತೋರಿಸಲಾರಂಭಿಸಿದ. ನನಗೆ ಬೆಲೆ ಬಾಳುವ ಒಡವೆ ವಸ್ತುಗಳನ್ನು ಕಾಣಿಕೆ ಸಲಿಸಲಾರಂಭಿಸಿದ. ಅಸಿಸ್ಟೆಂಟ್ ಪ್ರೊಫೆಸರ್‌ಗಳನ್ನು ನನ್ನ ಕೈಗೊಂಬೆಯಂತೆ ಕುಣಿಸಲಾರಂಭಿಸಿದ ನನಗೆ, ನಾಟಕದ ಕಂಪೆನಿಯ ಯಜಮಾನ ಎಷ್ಟರವನು ಎನಿಸಿತು. ಆದರೆ ಅಲ್ಲೇ ನಾನು ಪೆಟ್ಟು ತಿಂದುದು. ಅಸಿಸ್ಟೆಂಟ್ ಪ್ರೊಫೆಸರ್ ಎಷ್ಟಾದರೂ ಸಂಸ್ಕೃತಿ ಇದ್ದವನು. ನಾಟಕದವನ ಜೀವನವೇ ಒಂದು ನಾಟಕವಾಗಿದ್ದು ಜೀವನದ ಹೊಲಸನ್ನು ಹೆಚ್ಚು ಅನುಭವಿಸಿ, ಏನೂ ಮಾಡಲು ಸಿದ್ಧವಾಗಿದ್ದವನು.

ಮೊದಮೊದಲು ನಾನು ನಾಟಕದವನಿಗೆ ಸಲಿಗೆಕೊಡಲಿಲ್ಲ. ಆತನೂ ಆತುರಪಡದೆ, ಕ್ರಮ ಕ್ರಮವಾಗಿ ನನಗೋಸುಗ ಬೇಕಾದಷ್ಟು ಖರ್ಚು ಮಾಡಿ, ನನ್ನೊಡನೆ ಬೆರೆತ.

ಇತ್ತ ಅಸಿಸ್ಟೆಂಟ್ ಪ್ರೊಫೆಸರ್ ನನ್ನ ಮನೆಗೆ ಬರುತ್ತಲೇ ಇದ್ದ. ಆದರೆ ನಾನು ಮನೆಯಲ್ಲಿದ್ದರೂ ಇಲ್ಲವೆಂದು ಹೇಳಿಸಿಬಿಡುತ್ತಿದ್ದೆ. ಆದರೂ ಅತನು ಪದೇ ಪದೇ ಬರುತ್ತಲೇ ಇದ್ದ. ನನಗಾಗಿ ಆತನು ಹಂಬಲಿಸುತ್ತಿದ್ದುದನ್ನು ನಾನು ಮರೆಯಿಂದ ನೋಡುತ್ತಿದ್ದೆ. ಆತನಿಗೆ ಹುಚ್ಚು ಹಿಡಿಯುವುದೊಂದು ಬಾಕಿ. ಆತನನ್ನು ನೋಡಿ ನನಗೆ 'ಅಯ್ಯೋ' ಎನಿಸಿತು. ಆದರೆ ಆತನನ್ನು ನನ್ನ ಹತ್ತಿರ ಸೇರಿಸಲು ಮನವಾಗಲಿಲ್ಲ.

ನಾಟಕದವನು ಕೆಲವು ದಿನ ನನ್ನಲ್ಲಿಗೆ ಬರುತ್ತಿದ್ದ. ಅಷ್ಟರಲ್ಲಿ ಬೇರೆ ಒಬ್ಬ ನಟಿ ಬಂದಳು. ಅವಳ ಮೇಲೆ ಅವನ ಗಮನ ಹೋಯಿತು. ನನ್ನ ಮನೆಗೆ ಆತ ಬರುವುದನ್ನೇ ಬಿಟ್ಟುಬಿಟ್ಟ. ನನ್ನನ್ನು ಅಕಸ್ಮಾತ್ ಬೀದಿಯಲ್ಲಿ ಕಂಡರೂ ಮಾತನಾಡಿಸುತ್ತಿರಲಿಲ್ಲ. ಇದರಿಂದ ನನಗೆ ಹಿಡಿಸಲಾರದಷ್ಟು ಸಂಕಟವೂ ತಡೆಯಲಾರದಷ್ಟು ಕೋಪವೂ ಏಕಕಾಲದಲ್ಲಿ ಬಂದುವು. ಆದರೆ ನಾನು ಏನೂ ಮಾಡುವ ಸ್ಥಿತಿಯಲ್ಲಿರಲಿಲ್ಲ.

ನಾನು ಅಸಿಸ್ಟೆಂಟ್ ಪ್ರೊಫೆಸರಿಗೆ ತೋರಿಸಿದಷ್ಟನ್ನು, ನಾಟಕದವನು ನನಗೇ ತೋರಿಸಿಬಿಟ್ಟನು. ಅದೂ ತಕ್ಷಣವೇ!

ಕಾವಲಿಯ ಮೇಲೆ ದೋಸೆ ತಿರುವಿ ಹಾಕಿದ ಹಾಗೆ! ನನ್ನ ರೂಪು ಇನ್ನೂ ಜನರನ್ನು ಆಕರ್ಷಿಸುತ್ತಿತ್ತು. ಆದರೆ ನನ್ನ ಜೀವನದ ಓಟವನ್ನು ಕಂಡ ಸಭ್ಯ(!) ರೆಲ್ಲರೂ ನನ್ನನ್ನು ಕಂಡರೂ ಕಾಣಿಸದಂತೆ ನಟಿಸಲಾರಂಭಿ

ಸಿದರು. ನನಗೆ ತಿಳಿದ ಹೆಂಗಸರೂ ನನ್ನೊಡನೆ ಅದೇ ರೀತಿ ವರ್ತಿಸಲಾರಂಭಿಸಿದರು.

ಈಗಿನ ಪೊಳ್ಳು ಸಮಾಜದಲ್ಲಿ ನನ್ನ ಮನಸ್ಸಿನಲ್ಲೇನಿರಬಹುದು— ಎಂಬುದನ್ನು ಅರ್ಥಮಾಡಿಕೊಳ್ಳುವ ಶಕ್ತಿ ಒಬ್ಬರಿಗಾದರೂ ಇಲ್ಲದೆ ಹೋಯಿತು.

ಇಷ್ಟಾದರೂ ನನ್ನಲ್ಲಿ ಮೊದಲಿನಿಂದ ಏಕ ರೀತಿಯಲ್ಲಿದ್ದವನು 'ನಿವೃತ್ತಿಸ್ತು ಮಹಾಫಲಾ' ಎಂತ ನನಗೆ ಬೋಧಿಸಿದ ಮಿತ್ರನೇ.

* * * * *

ನನ್ನಲ್ಲಿ ನನಗೇ ಬೇಸರ ಉಂಟಾಗಿದೆ; ನನ್ನ ಜೀವನವೆಲ್ಲ ಸುಳ್ಳು, ಬೇಡವೆನಿಸಿದೆ. ಈ ಜೀವನವೆಲ್ಲ ಎಲ್ಲಿಗೆ-ಎಂಬ ಪ್ರಶ್ನೆ ಪುನಃ ಪುನಃ ನನ್ನ ಕಣ್ಣ ಮುಂದೆ ಕುಣಿಯಲಾರಂಭಿಸಿದೆ.

ನನ್ನಂತೆಯೇ ಇನ್ನೂ ಎಷ್ಟು ಜನವೋ, ನನ್ನಂತೆಯೇ ಎಲ್ಲರೂ ಜೀವನವನ್ನು ಸಾಗಿಸದಿದ್ದರೂ, ಈ ಸಮಾಜದಲ್ಲಿನ ವಿಚ್ಛೇದನವಿಲ್ಲದ ಅಸಮಂಜಸ ವಿವಾಹ, ಬಾಲ್ಯವಿವಾಹ, ವೈಧವ್ಯ, ಆಚಾರ ಅನಾಚಾರಗಳ ಧೋರಣೆ; ತಪ್ಪು ಮಾಡಿದವರನ್ನು ಕ್ಷಮಿಸಿ ಒಳ್ಳೆಯ ದಾರಿಗೆ ತರಲಾರದ ಅಸಹಾಯತೆ, ಎಲ್ಲದಕ್ಕಿಂತ ಹೆಚ್ಚಾಗಿ ತಿಳಿದುಕೊಳ್ಳಬೇಕೆಂಬ ಕುತೂಹಲ; ಆದರೆ ತಿಳಿಯಹೇಳುವ ಚೈತನ್ಯವಿಲ್ಲದ ಜನ; ಇನ್ನೂ ಎಷ್ಟೋ.... ಇವುಗಳಿಗೆ ಬೇನರಗೊಂಡಿಲ್ಲವೆ?

ಎಲ್ಲಿಂದ, ಎಲ್ಲಿಗೆ, ಏಕೆ, ಈ ಪ್ರಶ್ನೆಗಳು ನನ್ನ ಮನಸ್ಸಿನಲ್ಲಿ ಉರಿಯ ನಾಲಗೆಗಳಂತೆ ಕುಣಿದಾಡುತ್ತಿವೆ. ನನ್ನ ಬಾಳಿನ ರೀತಿ ಅದಕ್ಕೆ ಆಜ್ಯದ ಹೋಮದಂತಾಗಿ ಶಾಂತಿಯೇ ಇಲ್ಲದೆ ಬೆಂಕಿಯಲ್ಲಿ ದಹಿಸಲ್ಪಡುತ್ತಿದ್ದೇನೆ..

ಈ ಬೆಂಕಿಗಿಂತ ಉರಿಯುವ ಬೆಂಕಿಯೇ ತಣ್ಣಗಿರಬಹುದೇನೋ, ಎನಿಸುತ್ತದೆ. . ... .

ಇದನ್ನು ತಡೆದು ನಿಲ್ಲುವಷ್ಟು ಮನೋನಿಗ್ರಹವಿಲ್ಲ; ಸರಿಯಾಗಿ ಹೇಳುವಂತಹ ಗುರುವಿಲ್ಲ

ಆದುದರಿಂದ ಸಾವಿಗೆ ಶರಣುಹೋಗುವುದೇ ಲೇಸೆನಿಸುತ್ತದೆ.



## 5. ಕೋಪವೋ, ಪ್ರಣಯವೋ

ರಾತ್ರಿ ಸುಮಾರು ಹತ್ತೂವರೆಘಂಟೆ, ಇಂಟರ್‌ಮೀಡಿಯಟ್ ಪರೀಕ್ಷೆಗೆ ಕಟ್ಟಿದ್ದುದರಿಂದ ಇನ್ನೂ ಪುಸ್ತಕ ನೋಡುತ್ತಾ ಇದ್ದೆ.

ಕಗ್ಗತ್ತಲು, ದೂರದೂರದಲ್ಲಿ ಬೆಳಗುತ್ತಿದ್ದ ದೀಪಗಳ ಬೆಳಕು ಕತ್ತಲಲ್ಲೇ ಐಕ್ಯವಾಗಿ ಹೋಗುತ್ತಿತ್ತು. ಜೊತೆಗೆ ನಿಶ್ಶಬ್ದ.

ಇಂತಹ ನಿಶ್ಶಬ್ದತೆಯನ್ನು ಭೇದಿಸಿಕೊಂಡು ಬರುತ್ತಿದ್ದ ಒಂದು ಗಾಡಿಯ ಶಬ್ದ. ಗಾಡಿಯು ನಮ್ಮ ಮನೆಯ ಮುಂದೆ ನಿಂತಂತಾಯಿತು. ಯಾರೋ ನೋಡೋಣವೆಂದು ಅಂದುಕೊಂಡು, ಕಿಟಕಿಯ ಬಳಿ ಬರುವಷ್ಟರಲ್ಲಿಯೇ ಮಾತು ಕೇಳಿಬಂದುದರಿಂದ, ಹಾಗೆಯೇ ಕೇಳುತ್ತಾ ನಿಂತುಕೊಂಡೆ.

'ಎಲ್ಲಿ ಸ್ವಾಮಿ, ಮನೆ?'

'ಇನ್ನೂ ಹದಿನೇಳನೆ ಕ್ರಾಸ್ ಹತ್ತಿರ ಇದ್ದೀಯಾ! ಹೊಡಿ, ಹದಿನೆಂಟನೆಯ ಕ್ರಾಸಿಗೆ. ಆ ರಸ್ತೇಲಿ ಮೇಲಕ್ಕೆ.'

'ಆಗೋಕಿಲ್ಲ ಸ್ವಾಮಿ. ಮನೆ ಬಹಳ ದೂರ; ಇಳ್ದು ಬಿಡಿ. ನಾನು ಹೊರಟುಹೋಗುತ್ತೇನೆ. ಬಾಡಿಗೆ ಬಹಳ ಕಮ್ಮಿ.'

'ನೀನು ಕೇಳಿದಷ್ಟುಕೊಡುತ್ತೇನಂತ ಹೇಳಿದ್ದೇನಲ್ಲಯ್ಯಾ; ಇನ್ನೇನು ಮತ್ತೆ, ನಿನಗೆ. ಇಲ್ಲಿ ತಂಟೆ ಮಾಡ್ತೀಯಾ?'

'ತಂಟೆ ಏನ್ಬಂತು, ಸ್ವಾಮಿ. ಯಾರ್ಗೆ ಗೊತ್ತು, ಮನೆ ಇಷ್ಟು ದೂರ ಅಂತ.'

'ಗುರ್ತು ಹೇಳಿದೆನಲ್ಲಯ್ಯಾ'

'ಆಗೋಕಿಲ್ಲ, ಬಾಡಿಗೆ ಕೊಟ್ಟುಬಿಡಿ'

'ಪರವಾಇಲ್ಲ ಹೊಡಿ, ಸ್ವಲ್ಪ ಹೆಚ್ಚು ಕಮ್ಮಿ'

'ಆಗೋಕಿಲ್ಲ'

'ಹಾಗಾದರೆ ಬಿಡು'

ಯಾರೋ ಗಾಡಿಯಿಂದ ಸುಳುವಾಗಿ ಈಚೆಗೆ ಹಾರಿದ ಶಬ್ದ ಕೇಳಿಸಿತು. ಮತ್ತೆ ಸಲ್ಪ ನಡಿಗೆಯ ಶಬ್ದ.

'ಬಾಡಿಗೆ ಕೊಡಿ ಸ್ವಾಮಿ'

'ಮನೆಗೆ ಬಿಡು ಗಾಡಿ, ಇಲ್ಲಾ ಪೋಲಿಸು ಸ್ಟೇಷನ್ನಿಗೆ ಬಿಡು.ಅಲ್ಲೇ ನಿನಗೆ ಬಾಡಿಗೆ'

'ಇಷ್ಟುದೂರ ಗಾಡೀಲಿ ಬಂದದ್ದು ನಿಮ್ಮಪ್ಪ......' ಮಾತು ಪೂರೈಸುವುದರೊಳಗಾಗಿ ಯಾರೋ ರಪ್ಪೆಂದು ಹೊಡೆದ ಶಬ್ದ........'ಅಯ್ಯೋ!'

'ಬಿಟ್ಟು ಬಿಡಿ ಸ್ವಾಮಿ. ನೀವೇನು ಹಾಗೆ ಹೊಡೆಯೋಕೆ ನಿಮ್ಮ ಆಳೇ ನಾನು?'

'ಹಲ್ಕ ಸಹವಾಸ ನಿಮ್ಮದು; ಬಾಯಿ ಬಹಳೇ ಉದ್ದ. ಇನ್ನೊಂದು ಮಾತಾಡಿದರೆ ಹಲ್ಲು ಮುರಿತೀನಿ.'

ಮನೆಬಾಗಿಲು ತೆರೆದ ಶಬ್ದ;ತಂದೆಯುವರ ಧ್ವನಿ 'ಏನ್ರಿ ಅದು ಗಲಾಟೆ ರಾತ್ರಿ ಹೊತ್ತಲ್ಲಿ?'

'ಓಹೋ,ಏನೂ ಇಲ್ಲಾ ಸಾರ್. ಸ್ವಲ್ಪ ಗಲಾಟೆ ಆಯಿತು. ಕ್ಷಮಿಸಬೇಕು.'

ಇಷ್ಟು ಹೊತ್ತಿಗೆ ನಾನು ನನ್ನ ತಂದೆಯುವರ ಬಳಿ ಹೋಗಿ ನಿಂತು ಕೊಂಡು ನಿಶ್ಶಬ್ದವಾಗಿ ಕೇಳಲಾರಂಭಿಸಿದೆ.

'ಇವನು ಕೇಳಿದಷ್ಟು ಬಾಡಿಗೆ ಕೊಟ್ಟರೂ ಮನೆ ಹತ್ತಿರ ದಾರೀಲಿ ರಾಂಗ್ ಮಾಡ್ತಾ ಇದ್ದಾನೆ.'

ಇದುವರೆಗೂ ಮಾತನಾಡುತ್ತಿದ್ದಾತ ನನ್ನ ಕಡೆ ಒಂದು ಬಾರಿಯೂ ನೋಡಲಿಲ್ಲ. ಆದರೆ ನಾನಾತನನ್ನೂ ಗಮನಿಸಿದೆ; ಅಷ್ಟೇನು ಬಹಳ ಎತ್ತರವಾದ ಆಳಲ್ಲ; ಸ್ವಲ್ಪ ಶ್ಯಾಮಲ ವರ್ಣ—ಆದರೂ ಕಪ್ಪನೆಯ ಆಳಲ್ಲ. ಬಹಳ ವಿಶಾಲವಾದ ಉಬ್ಬಾದ ಎದೆ. ಅದಕ್ಕೆ ಒಪ್ಪುವಂತೆ ತೊಟ್ಟಿರುವ ಖಾದಿಯ ಬಿಳಿಯ ಒಂದು ಪಂಜಾಬಿ ಬನಿಯನ್. ಬಿಳಿಯ, ಅಂಚಿಲ್ಲದ ದಟ್ಟಿ ಸ್ವಲ್ಪ ಮೇಲಕ್ಕೆ ಮಡಿಸಿದ್ದ ಎಡತೋಳು. ಅದಕ್ಕೆ ಕಟ್ಟಿದ್ದ ರೆಕ್ಟಾಂಗ್ಯುಲರ್ ರಿಸ್ಟ್‌ವಾಚ್; ಮಾಂಸಪುಷ್ಟವಾದ ತೋಳುಗಳು. ಇವುಗಳನ್ನು ಮೀರುವಂತಿದ್ದ ವಿಶಾಲ ಹಣೆ; ಅದಕ್ಕೆತಕ್ಕಂತೆ ಕಣ್ಣುಗಳು; ಸುಲೋಚನ. ಬಾಚಿದ್ದರೂ ಹದ್ದುಮೀರಿ ಬಂದಿದ್ದ ಗುಂಗುರು ಕೂದಲು; ಮುಖವು ಒಂದು ತರಹೆ ಒರಟು ಭಾವದಿಂದ ಕೂಡಿದ್ದರೂ ಆತ ನಗುತ್ತ "ಏನೂ ಇಲ್ಲಾ ಸಾರ್" ಎಂದು ಹೇಳಿದಾಗ ಹಸುಗೂಸಿನ ಮುಖದಂತಿತ್ತು.

ನನ್ನ ತಂದೆಯವರು 'ಹಾವು ಸಾಯಬಾರದು ಕೋಲು ಮುರಿಯ ಬಾರದು' ಅನ್ನುವಂತೆ 'ಹೋಗಲಿ, ಇನ್ನೊಂದಾಣೆ ಕೊಟ್ಟುಬಿಡೀಪ್ಪಾ' ಎಂದು ಅವನಿಗೆ ಹೇಳಿ, ಜಟಕಾದವನ ಕಡೆ ತಿರುಗಿ 'ಮನೆ ಹತ್ತಿರ ಬಿಟ್ಟು ಬಿಡಯ್ಯ' ಎಂದು ಹೇಳಿದರು. ಆತನು ಅವನಿಗೆ ಒಂದಾಣೆಯನ್ನು ಕೊಟ್ಟು 'ನಡಕೊಂಡು ಹೋಗ್ತೇನೆ,ಹೋಗು' ಎಂದು ಹೇಳಿ, ನಮ್ಮ ಕಡೆಗೆ ತಿರುಗಿ 'ನಮ್ಮ ತಾಯಿ ನಮ್ಮಕ್ಕ ಕಾದಿರುತ್ತಾರೆ ಅಂತ ಗಾಡೀಲಿ ಬಂದೆ. ನಮ್ಮ ತಂದೆಯವರು ಊರಲ್ಲಿಲ್ಲ ನಿಮ್ಮನ್ನು ನಿದ್ರೇಲಿ ಎಬ್ಬಿಸಿದನೇನೋ. ಕ್ಷಮಿಸ ಬೇಕು, ನಮಸ್ಕಾರ' ಎಂದು ಹೇಳಿ ನಡೆದೇಬಿಟ್ಟನು

'ಹೊತ್ತಾಯಿತು; ಹೋಗಿ ಮಲಗಮ್ಮಾ' ಎಂದು ನನ್ನ ತಂದೆಯವರು ಹೇಳಿ ತಾವು ಮಲಗಿದರು

ಕೋಣೆಗೆ ಬಂದು ಪುಸ್ತಕವನ್ನು ಹಿಡಿದುಕೊಂಡಾಗಲೂ ಆತನ ಮುಖವೇ ನನಗೆ ಅದರಲ್ಲಿ ಕಂಡು ಬಂದುದು ಆ ವಿಶಾಲವಾದ ಹಣೆ; ದೊಡ್ಡ ಕಣ್ಣುಗಳು; ಗುಂಗುರ ಕೂದಲು.. ....

ಮುಂದಕ್ಕೆ ಓದಲು ಸಾಧ್ಯವಾಗಲಿಲ್ಲ ಪುಸ್ತಕವನ್ನು ಮುಚ್ಚಿ ಹಾಸಿಗೆಯ ಮೇಲೆ ಬಿದ್ದುಕೊಂಡೆ ಆಗಲೂ ನನ್ನ ಕಣ್ಣಿಗೆ ಕಟ್ಟಿದುದು ಆ ಮುಖವೇ

* * * * *

ಕ್ರಮಕ್ರಮವಾಗಿ ಪರೀಕ್ಷೆಯು ಹತ್ತಿರ ಬಂತು ಪುಸ್ತಕದ ಗೀಳು ಹೆಚ್ಚಾಗುತ್ತಾ ಬಂದುದರಿಂದ ಆ ಮುಖವು ಮೊದಲಿನಷ್ಟು ನೆನಪಿಗೆ ಬರು ತ್ತಿರಲಿಲ್ಲ. ಅದು ನೆನಪಿಗೆ ಬಂದಾಗ ನನ್ನನ್ನು ನಾನು ಮರೆತುಬಿಡುತ್ತಿದ್ದೆ.

ಮೇಲೆ ಹೇಳಿದ ಸಂಗತಿಯು ನಡೆದು ಸುಮಾರು ಎರಡು ತಿಂಗಳು ಆಗಿತ್ತು ಅಂದು ರಾತ್ರಿ ನನ್ನ ತಂದೆಯವರು ಪತ್ರಿಕೆ ಓದುತ್ತಾ ಇದ್ದವರು ಸ್ಪೋರ್ಟ್ಸ್ ಕಲಮಿನಲ್ಲಿದ್ದ ಒಂದು ಚಿತ್ರವನ್ನು ನೋಡಿ "ಬಹುಶಃ ಈ ಮನುಷ್ಯನನ್ನುಎಲ್ಲೊ ನೋಡಿರಬೇಕು' ಎಂದು ಗೊಣಗುಟ್ಟಿದರು. ಅವರ ಬಳಿಗೆ ಹೋಗಿ ಅಲ್ಲಿನೋಡಿದರೆ ಅದೇ ಮುಖ; ನಾನವರಿಗೆ ಜ್ಞಾಪಿಸಿದೆ. ಕುತೂಹಲದಿಂದ ಇಬ್ಬರೂ ಚಿತ್ರ ಪರಿಚಯದ ಪಟ್ಟಿಯನ್ನು ಓದಿದೆವು ಇವರು ಈ ಸರ್ತಿ ಪೋಲಿಸ್ ಸ್ಪೋರ್ಟ್ಸ್‌ದಲ್ಲಿ ಒಂದು ಮೈಲು ಓಡುವ ಮತ್ತು ಇನ್ನೂರಿಪ್ಪತ್ತು ಗಜಗಳನ್ನು ಓಡುವ ಸ್ಪರ್ಧೆಗಳಲ್ಲಿ ಮೊದಲನೆಯ ಬಹು

ಮಾನವನ್ನು ಪಡೆದಿರುತ್ತಾರೆ. ಕಾಲೇಜಿನಲ್ಲೂ ಇವರಿಗೆ ಬಹುಮಾನದ ಸುರಿಮಳೆ. ಒಂದು ಮೈಲಿ ಓಟ, ನೂರಡಿ ಓಟ, ಲಾಂಗ್‌ಜಂಪ್, ಹೈ ಜಂಪ್ ಇವುಗಳಲ್ಲಿ ಇವರಿಗೇ ಪ್ರಥಮ ಬಹುಮಾನ. ೨೨೦ ಗಜ ಈಜುವ ಪಂದ್ಯದಲ್ಲಿ, ಒಲಿಂಪಿಕ್ಸ್ ಪಂದ್ಯದಲ್ಲಿ ಇವರಿಗೇ ಪ್ರಥಮ ಬಹುಮಾನ.... ಇವರ ಹೆಸರು ಕೃಷ್ಣಮೂರ್ತಿ; ಕಾಲೇಜಿನವರಿಗೆ 'ಕಿಟ್ಟು........'

* * * * *

ಕಾಲೇಜಿನಲ್ಲಿ ಇನ್ನೂ ಪಾಠಗಳು ಪ್ರಾರಂಭವಾಗಿರಲಿಲ್ಲ. ಆದರೂ ನಿತ್ಯವೂ ಹೋಗುತ್ತಾ ಇದ್ದೆ. ಹೊಸದಾಗಿ ಸೇರಿದ ಕಾಲೇಜು. ಹೊಸ ಗೆಳತಿಯರ ಪರಿಚಯ. ಒಂದು ದಿವಸ ನಮ್ಮ ಚಿಕ್ಕ ರೂಮಿನಿಂದ ಮ್ಯಾಥ ಮ್ಯಾಟಿಕ್ಸ್ ಬ್ಲಾಕಿಗೆ ಹೋಗುತ್ತಾ ಇದ್ದೆ ನನ್ನ ಮುಂದೆ ಮೂರು ನಾಲ್ಕು ಹುಡುಗರು ನಿಧಾನವಾಗಿ ಹೋಗುತ್ತಾ ಇದ್ದರು. ಅವರ ಸಂಭಾಷಣೆ ಯಲ್ಲಿ ನನಗೆ ಕುತೂಹಲವಿಲ್ಲದಿದ್ದರೂ ಅದು ನನಗೆ ಕೇಳುತಿತ್ತು.

'ಈ ಸರ್ತಿ ಸ್ವಿಮ್ಮಿಂಗಿಗೆ ಯಾರು ಕ್ಯಾಪ್ಟನ್?'

'ನಾನು ಕಾಲೇಜಿನಲ್ಲಿರುವ ವರೆಗೂ ಯಾರಿಗೆ ಸ್ಥಳ ಇದೆ ಅಲ್ಲಿ? ನನಗೆ ಅದು ಜಹಗೀರಲ್ಲಾ!

'ಹಾಗಾದರ ಈ ಸಲವೂ ಪ್ರೈಜುಗಳ ಸುರಿಮಳೆ.'

'ಇಲ್ಲಪ್ಪಾ, ಈ ವರ್ಷ ಓದದಿದ್ದರೆ ಆ ಮೇಲೆ ಪಾಸ್ ಡಿಗ್ರಿ ಕೊಡು ತ್ತಾರೆಯೇ?'

'ಆಂ. ನಿಮಗೇನ್ರಿ!'

ಆತನ ಮಾತುಗಳೇಕೋ ನನಗೆ ರುಚಿಸಲಿಲ್ಲ ಬಹಳ ಹೆಮ್ಮೆಯಿಂದ ಆತ್ಮಸ್ತುತಿ ಮಾಡಿಕೊಂಡವನೇನು ದೊಡ್ಡಮನುಷ್ಯ? ಅಷ್ಟೇ ಅಲ್ಲದೆ ಹೊಗಳುಭಟ್ಟರ ಹಾಗೆ ಅವನ ಸುತ್ತಲೂ ನೆರೆದ ಪರಿವಾರ... .. .ಕಾಸಿಗೆ ತಕ್ಕ ಕಜ್ಜಾಯವೇ ಎನಿಸಿತು ನನಗೆ.

ಈ ವಿಚಾರವನ್ನು ಮನಸ್ಸಿನಲ್ಲೇ ಚರ್ಚಿಸುತ್ತಾ ನಮ್ಮ ರೂಮಿನ ಬಳಿಗೆ ಬಂದೆ. ಅವರು ಇನ್ನೊಂದು ಕಡೆಯಿಂದ ನನ್ನೆದುರಿಗೆ ಬಂದರು.

ಹೆಮ್ಮೆ ಕೊಚ್ಚಿಕೊಂಡವನು ಆತನು. ಅತ್ಯಂತ ನಿಕೃಷ್ಟ ದೃಷ್ಟಿ ಯಿಂದೊಂದು ಬಾರಿ ಆತನನ್ನು ನೋಡಿ ನಾನು ನನ್ನ ರೂಮಿಗೆ ಹೋದೆ!

ಕ್ಲಾಸಿಗೆ ಹೋಗಲು ಮನಸ್ಸು ಬರಲಿಲ್ಲ. ನನ್ನ ಮನಸ್ಸಿಗೆ ಬಹಳ

ಬೇಸರವುಂಟಾಗಿತ್ತು. ಮನುಷ್ಯನ ಬಾಳಿನಲ್ಲಿ ಅನೇಕ ಸಲ ಹೀಗಾಗುವುದುಂಟು. ನಾವು ದೇವರೆಂದು ಪೂಜಿಸುವ ಮನುಷ್ಯರಲ್ಲಿ ದೋಷಗಳನ್ನು ಸಹಿಸಲು ಸಿದ್ಧರಾಗಿರುವುದಿಲ್ಲ. ಅಂತಹವರಲ್ಲಿ ದೋಷಗಳು ಕಂಡು ಬಂದರೆ ಅವರ ಮೇಲೆ ನಮಗಿರುವ ಪೂಜ್ಯಭಾವ ನಿರ್ನಾಮವಾಗಿ ಹೋಗಿ ಬಿಡುತ್ತದೆ. ನನಗ ಆದುದೂ ಹಾಗೆಯೇ. ನಾನು, ಮಗುವಿನಂತಹ ನಿಷ್ಕಲ್ಮಷ ಮುಖಭಾವವನ್ನು ಕಂಡು ಹೃದಯವೂ ಅಂತೆಯೇ ಎಂದು ತಿಳಿದಿದ್ದೆನೋ, ಅಂತಹವನಲ್ಲಿ ಹೆಮ್ಮೆಯು ತುಂಬಿ ತುಳುಕಾಡುತ್ತಾ ಇದೆಯೆಂದು ನನಗೆ ತೋರಿತು. ಆತನು ಇನ್ನೇನು ಕೃತ್ಯಗಳನ್ನು ಮಾಡಿದ್ದರೂ ಮನ್ನಿಸುತ್ತಿದ್ದೆನೇನೋ; ಆದರೆ ಅದನ್ನು ಮಾತ್ರ ಸಹಿಸಲು ನನಗೆ ಸಾಧ್ಯವಾಗಲಿಲ್ಲ.

ಅಂದಿನಿಂದ ಆತನನ್ನು ಕಂಡರೆ ನನಗೆ ಒಂದು ತೆರನ ಭಾವನೆ ಉಂಟಾಗುತಿತ್ತು. ಆವೇನು ಕೋಪವೋ? ಅಥವಾ ಇನ್ನಾವ ಮನೋಭಾವನೆಯೋ—ಹೇಳಲು ನನಗೆ ಸಾಧ್ಯವಿಲ್ಲ. ಅಷ್ಟೇ ಅಲ್ಲ, ಆತನನ್ನು ಮರೆತುಬಿಡೋಣವೆಂದು ಎಷ್ಟು ಯತ್ನಿಸಿದರೂ ಸಾಧ್ಯವಾಗುತ್ತಿರಲಿಲ್ಲ ಒಂದು ದಿನ ಆತನನ್ನು ನೋಡಲು ಸ್ವಲ್ಪ ತಡವಾದರೆ, ಆತನ ಆ ಒರಟು, ಆದರೂ ಹಸುಳೆಯಂತಿರುವ ಮುಖವನ್ನು ನೋಡಬೇಕೆಂದು ಮನಸ್ಸು ತಟವಟಗುಟ್ಟುತ್ತಿತ್ತು. ದಿನಕ್ಕೊಂದು ಬಾರಿಯಾದರೂ ಆತನನ್ನು ನೋಡಿ ಮುಖವನ್ನು ಗಂಟುಹಾಕಿಕೊಳ್ಳದಿದ್ದರೆ ನನಗೆ ಅಂದು ರಾತ್ರಿ ನಿದ್ರೆ ಬರುತ್ತಿರಲಿಲ್ಲ.

* * * * *

ಒಂದು ದಿವಸ ಕಾಲೇಜಿನಲ್ಲಿನ ನಮ್ಮ ರೂಮಿನಲ್ಲಿ ನಾನೊಬ್ಬಳೇ ಕುಳಿತಿದ್ದೆ. ಮಿಕ್ಕವರೆಲ್ಲಾ ಲೈಬ್ರರಿ ಪುಸ್ತಕಗಳನ್ನು ತರಲು ಹೋಗಿದ್ದರು. ಬಾಗಿಲನ್ನು ಟ್ಯಾಪ್ ಮಾಡಿದಂತೆ ಕೇಳಿಬರಲು ಬಾಗಿಲು ತೆರೆದು ನೋಡುತ್ತೇನೆ; ಈತ ರೋವರ್ ಯುನಿಫಾರಂ ಹಾಕಿಕೊಂಡಿದ್ದಾನೆ. ಕೈಯಲ್ಲಿ ಕಾಲೇಜು ಡೇ ಇನ್ವಿಟೇಶನ್ ಕಾರ್ಡುಗಳು. ಒರಟಾದ ಧ್ವನಿಯಿಂದ ಸ್ವಲ್ಪವೂ ಮರ್ಯಾದೆ ಇಲ್ಲದೆ (ನಾನು ಹಾಗೆ ಭಾವಿಸಿದ) 'ದಯವಿಟ್ಟು ನಿಮ್ಮ ಕಾರ್ಡು ತೆಗೆದುಕೊಂಡು ಮಿಕ್ಕವರ ಕಾರ್ಡುಗಳನ್ನು ಅಲ್ಲಿ ಮೇಜಿನ ಮೇಲಿಟ್ಟರೂ ಸರಿಯೇ; ಕೈಗೆ ಕೊಟ್ಟರೂ ಸರಿಯೆ' ಎಂದು ಹೇಳಿದನು.

ಆತ ಮಾತಾಡಿದುದನ್ನು ಕೇಳಿ ನನಗೆ ಸಂತೋಷ ಒಂದು ಕಡೆ; ನಾನೊಬ್ಬಳೇ ಇರುವಾಗ ಈತ ಬರಬೇಕೇ ಎಂಬ ಹೊಟ್ಟೆಯುರಿಯೊಂದೆಡೆ. ಇವುಗಳ ಜೊತೆಗೆ ಆತನ ಸಂಗಡ ಇನ್ನೂ ಸ್ವಲ್ಪ ಮಾತನಾಡಿ ಆತನನ್ನು ಕದ್ದು ನೋಡೋಣವೆಂಬ ಆಸೆ. ಆದರೆ ನಾಚಿಕೆ ಸಂತೋಷಗಳಿಂದ ಮಾತೇ ಹೊರಡಲಿಲ್ಲ. ಅಷ್ಟರಲ್ಲಿಯೇ ಆತ 'ನಮಸ್ಕಾರ' ಎಂದು ಹೇಳಿ ಹೊರಟೇಬಿಟ್ಟನು.

ಕಾಲೇಜು ಡೇ ಬಂದಿತು. ಕ್ರಿಕೆಟ್ ಪೆವಲಿಯನ್ ಮುಂದೆ ಸ್ವಾಗತ ಬಯಸಲು ಚಪ್ಪರ ಹಾಕಿದ್ದರು. ಮ್ಯಾಥಮ್ಯಾಟಿಕ್ಸ್ ಬ್ಲಾಕ್ ಗೇಟಿನ ಹತ್ತಿರ ಸ್ಟ್ಯಾಟಿನವರ ಒಂದು ಗುಡಾರವಿತ್ತು. ಅಲ್ಲೇ ಎನ್‌ಕ್ವಯರಿ ಆಫೀಸು. ಲಕಿಡಿಪ್ ಇದ್ದದ್ದು ಅಲ್ಲೇ

ಅಂದು ನಾನು, ಶಾರಿ, ಸುಶಿ, ಕಮಲು-ಇನ್ನೂ ಕೆಲವರು ಲಕಿಡಿಪ್‌ನಲ್ಲಿ ಅದೃಷ್ಟಪರೀಕ್ಷೆ ಮಾಡೋಣವೆಂದುಕೊಂಡೆವು.

ಆಲ್ಲಿ ಆತನೇ ಇರಬೇಕೆ? ಶಾರಿ ಆತನನ್ನು ಕುರಿತು, "ಅಯ್ಯಾ, ನನಗೋಸ್ಕರ ನೀವೆ ಚೀಟಿ ಎತ್ತಿರಿ" ಎಂದಳು. ಅದಕ್ಕೆ ಆತ "ಇಲ್ಲಾ. ನಾವೇ ಕಟ್ಟಿದವರು" ಎಂದನು. ಅವಳು ಬಹಳ ಬಲವಂತಪಡಿಸಲು "ಕಣ್ಣು ಮುಚ್ಚಿ ಚೀಟಿ ತೆಗೆಯುತ್ತೇನೆ" ಎಂದು ಒಂದು ಚೀಟಿ ಎತ್ತಿದನು. ಅದಕ್ಕೆ ಅವಳಿಗೆ ಒಂದು ಪರ್ಸ್ ಬಂದಿತು. ಸರಿ; ಒಲ್ಲರೂ ಆತನನ್ನೇ ಹಿಡಿದರು. ನನ್ನ ಸರದಿಯೂ ಬಂತು. ನಾನೇ ಎತ್ತುತ್ತೇನೆ-ಎಂದು ಒಂದು ನಂಬರು ಆರಿಸಿ ತೆಗೆದೆ. ನನಗೆ ಬಂದುದು ಒಂದು ಪೊಟ್ಣ. ಅದರಲ್ಲಿ ಇನ್ನೊಂದು, ಹೀಗೆ; ಕೊನೆಗೆ ಮಡಿಸಿಟ್ಟ ಒಂದು ಸಣ್ಣ ಕಾಗದ. ಕೆಲವರು ಅದರಲ್ಲಿ ನೋಟಿದೆ ಎಂದರು. ಕೆಲವರು 'ಬರೀ ಕಾಗದ' ಎಂದರು. ಆದರೆ ಆತ 'ಯು ಆರ್ ಎ ಫೂಲ್' ಎಂದರು. ಆ ಕಾಗದ ಬಿಚ್ಚಿದರೆ ಅದೇ ಇರಬೇಕೆ? ಆಗ ನಾನು ಕೋಪದಿಂದ 'ಇದೆಲ್ಲಾ ನಿಮ್ಮ ಕಳ್ಳವಿದ್ಯೆಯೇ?' ಎಂದೆ.

ಮಾತು ಹೊರಳಿದ ಮೇಲೆ, ನಾಲಿಗೆ ಕಚ್ಚಿಕೊಳ್ಳಬೇಕೆನ್ನಿಸಿತು. ಆಗ ಮಾತ್ರ ಆತನು ತನ್ನ ದೊಡ್ಡ ಕಣ್ಣುಗಳನ್ನು ನನ್ನ ಕಡೆ ಹೊರಳಿಸಿ ನನ್ನನ್ನು ನೋಡಿದನು.

*   *   *   *   *

ಯೂನಿವರ್ಸಿಟಿ ಎಕ್ಸಟೆನ್‌ಶನ್ ಲೆಕ್ಚರು. ಬಹಳ ಜನ ಬರುತ್ತಾರೆ ಎಂದು ನಮಗೆ ಗೊತ್ತಿತ್ತು. ಆದರೂ ಬೇಗನೇ ಹೋಗಿ ಅಲ್ಲಿ ಕುಳಿತು ಕೊಳ್ಳುವವರು ಯಾರು ಎಂದುಕೊಂಡು ನಿಧಾನವಾಗಿ ಹೋದೆವು. ಹೋದವರು ಆರುಮಂದಿ; ಇದ್ದುದು ಐದು ಕುರ್ಚಿ. ನನ್ನ ಜೊತೆಗಾರರು ಬೇಗನೆ ಕುಳಿತು ಬಿಟ್ಟರು. ನನಗೆ ಕುರ್ಚಿ ಇಲ್ಲದಾಗಿ ಮುಖವು ಸುಟ್ಟ ಬದನೆಯ ಕಾಯಿಯಾಯಿತು. ಹತ್ತಿರದಲ್ಲಿ ನಿಧಾನವಾಗಿ ಮಾತನಾಡಿದಂತಾಯಿತು "ಇದೂ ನಮ್ಮ ಕಳ್ಳ ವಿದ್ಯೆಯೇ ಇರಬಹುದಲ್ಲವೇ?" ಎಂದಂತೆ.

ಬೆಚ್ಚಿಬಿದ್ದು ಹಿಂತಿರುಗಿ ನೋಡುತ್ತೇನೆ!

ಸ್ಕೌಟು ಯೂನಿಫಾರಮ್ಮಿನಲ್ಲಿದ್ದ ಆತ.

ನನಗೋಸುಗ ಎಲ್ಲಿಂದಲೋ ಆತ ಒಂದು ಕುರ್ಚಿ ಹೊತ್ತುಕೊಂಡು ಬಂದ. ಥ್ಯಾಂಕ್ಸ್ ಎಂದು ಹೇಳಲು ನನಗೆ ಉಸಿರಿರಲಿಲ್ಲ.

* * * * *

ಅಂದು ರಾತ್ರಿಯೆಲ್ಲಾ ನಾನು ಬಹಳ ಪಶ್ಚಾತ್ತಾಪಪಟ್ಟೆನು. ಕಾಲೇಜಿನ ವಿದ್ಯಾರ್ಥಿಯಾಗಿ ಬಹುಮಾನಗಳನ್ನು ತೆಗೆದುಕೊಳ್ಳುವ ಹಕ್ಕಿಲ್ಲವೆ? ಹಕ್ಕಿದ್ದರೆ ಹಾಗೆ ಜಂಬದಿಂದ ಹೇಳಿಕೊಳ್ಳಬಹುದೇ! ಜಂಬವೆಲ್ಲಿಯದು? ಈ ವರ್ಷದಲ್ಲಿ ಒಟ್ಟಿನಲ್ಲಿ ಆತನಿಗೆ ಪನ್ನೊಂದು ಬಹುಮಾನ........

ಕಾಲೇಜಿನಲ್ಲಿ ಎಷ್ಟು ಜನ ಸ್ಕೌಟುಗಳಿಲ್ಲ! ಅವರಂತೆಯೇ ಆತನೂ ಒಬ್ಬನಲ್ಲವೆ? ಪರೋಪಕಾರಕ್ಕೋಸ್ಕರ ಕೆಲಸ ಮಾಡುತ್ತಿರುವ ಆತನು ಹೆಂಗುಸರು ಕೂತುಕೊಳ್ಳುವ ಸ್ಥಳದಲ್ಲಿ ನಿಂತುಕೊಂಡಿದ್ದು ತಪ್ಪೆ? ಇರಲಾರದು. ನನಗೆ ಕೊಡಲು ಕುರ್ಚಿಯಿಲ್ಲದಂತೆ ಆತನೇ ಮಾಡಿದನೇ? ಛೆ! ಇರಲಾರದು! ಒಡನೆ ಆತನೇ ಕುರ್ಚಿಯನ್ನು ತರಲಿಲ್ಲವೇ?....

ರಾತ್ರಿಯನ್ನೆಲ್ಲಾ ಮನೋಯುದ್ಧದಲ್ಲಿ ಕಳೆದನು. ಕ್ಷಮಾಪಣೆಯನ್ನು ಕೇಳಬೇಕಾದುದು ಧರ್ಮವಾಗಿತ್ತು. ಆದರೆ ಕೇಳದಿದ್ದರೆ ಏನು ನಷ್ಟ?-- ಎನ್ನುವ ಮನಸ್ಸು. ಕೊನೆಗೆ ಅಂದಿನ ರಾತ್ರೆಯ ನಗು ಮುಖ ನನ್ನ ಕಣ್ಣೆದುರಿಗೆ ಕಟ್ಟಿ, ಆ ಮುದ್ದು ಮುಖಕ್ಕೆ ಮನಸೋತು, ಮರುದಿನವೇ ಕ್ಷಮಾಭಿಕ್ಷೆಯನ್ನು ಕೇಳಬೇಕೆಂದು ನಿರ್ಧಾರಮಾಡಿಕೊಂಡೆ. ಹೇಗೆ ಕೇಳುವುದು?

ಕಾಗದ ಬರೆಯಲು ಮನಸ್ಸುಮಾಡಿ 'ಅಯ್ಯಾ' ಎಂದು ಪ್ರಾರಂಭಿಸಿದೆ; ಸರಿ ತೋರಲಿಲ್ಲ. 'ಪರಮ ಮಿತ್ರನಿಗೆ' ಎಂದು ಬರೆದೆ. ಪರಿಚ

ಯೆವೇ ಸಂಪೂರ್ಣವಾಗಿಲ್ಲದಿರುವಾಗ ಪರಮ ಮಿತ್ರನಾಗುವುದು ಹೇಗೆ-ಎನ್ನಿಸಿತು. 'ಪ್ರಿಯ ಕೃಷ್ಣಮೂರ್ತಿಗೆ', ಎಂದು ಬರೆಯುವಷ್ಟರಲ್ಲಿಯೇ ಅಷ್ಟು ಸಲಿಗೆ ಎಲ್ಲಿಯದು--ಎನಿಸಿತು. ಹೋಗಲಿ, ಕಾಲೇಜಿನಲ್ಲಿ ಬಾಯಿ ಮಾತಲ್ಲೇ ಕ್ಷಮಾಪಣೆ ಕೇಳಿಕೊಳ್ಳುವುದು ಎಂದೆನಿಸಿತು.

* * * * *

ಏನೋ ಒಂದು ಉತ್ಸಾಹದಿಂದ ಬೇಗನೆ ಕಾಲೇಜಿಗೆ ಹೋದೆ. ಕೌಕ್ಸ್‌ಟೌನ್ ಪಂದ್ಯದಲ್ಲಿ ಮೊದಲನೇ ಬಹುಮಾನ ಬಂದ ಕಪ್ಪನ್ನು ಹಿಡಿದುಕೊಂಡು ನೊಟೀಸು ಬೋರ್ಡು ನೋಡುತ್ತಿದ್ದಾಗ ಅಲ್ಲಿಗೆ ಹೋಗುತ್ತಿದ್ದ ಆತ ನನ್ನನ್ನು ಕಂಡು ಅಭಿವಾದನ ಮಾಡಿದನು.

ನಾನೇ ಆತನ ಬಳಿಗೆ ಹೇಗೆ ಹೋಗುವುದು? ಆತ ನನ್ನ ಕಡೆಯೇ ಬಂದ. ನಾನು ಧೈರ್ಯಮಾಡಿ ಉಳಿದ ಅಂತರ ಮುಗಿಸಿದೆ. ಇನ್ನು ಮಾತನಾಡಿಸುವುದು ಹೇಗೆ? ಕೈಯಲಿದ್ದ ಕಪ್ಪನ್ನು ಧ್ಯೇಯವಾಗಿಟ್ಟುಕೊಂಡು, ಮಾತನಾಡಿಸಿ, ಆತನಿಗೆ ಅದು ಬಂದುದಕ್ಕೆ ನನ್ನ ಸಂತೋಷವನ್ನು ಸೂಚಿಸಿದೆನು. ಹಾಗೆಯೇ ಮೆಲ್ಲಗೆ ಪೀಠಿಕೆಹಾಕುತ್ತಾ 'ನಾನು ಅಂದು ಹಾಗೆ ಹೇಳಬಾರದಾಗಿತ್ತು. ದಯವಿಟ್ಟು ನನ್ನನ್ನು ಕ್ಷಮಿಸಿರಿ!' ಎಂದೆ.

'ಅಷ್ಟು ದೊಡ್ಡ ಮಾತು ನೀವು ಹೇಳಬಾರದು. ನಾನು ನಿಮ್ಮ ಬಳಿಗೆ ಬಂದುದು ನಿಮ್ಮ ಕ್ಷಮೆಯನ್ನು ಬೇಡಲಿಕ್ಕೆ. ನಾನು ವ್ಯಂಗ್ಯವಾಗಿ ನಿನ್ನೆ ಮಾತನಾಡಬಾರದಿತ್ತು.'

ಇಬ್ಬರೂ ನಕ್ಕೆವು,

ಪುನಃ ಅದೇ ನಗು ಮುಖ, ದೊಡ್ಡ ಕಣ್ಣುಗಳು, ಮುದ್ದಾದ ಮುಖ.. ಆತನಿಗೆ ಆಗ ನನ್ನ ಮನಸ್ಸು ಸಂಪೂರ್ಣವಾಗಿ ಸೋತಿತ್ತು.

* * * * *

ನಾನು ಮಿಕ್ಕ ಹುಡುಗಿಯರಂತಲ್ಲವೆಂದುಕೊಂಡನೇನೋ ಆತ-ಇಲ್ಲ ಬೇರಾವ ಕಾರಣದಿಂದಲೋ, ನನ್ನನ್ನು ಆತನು ಕಾಲೇಜು ಬಳಿ ಮಾತನಾಡಿಸುತ್ತಿರಲಿಲ್ಲ ಅಷ್ಟೇ ಅಲ್ಲ, ನಿಮ್ಮನ್ನಾರನ್ನಾದರೂ ಕಂಡರೆ ಮುಖವನ್ನು ಗಂಟುಹಾಕಿಕೊಂಡು ನಡೆಯುತ್ತಿದ್ದನು. ಹೀಗಿರುವಾಗ ಆತ ನಮ್ಮ ಮನೆಗೆ ಬರುವ ವಿಧಾನ ಹೇಗೆ? ನಾನು ಬಹಳ ಆಲೋಚನೆ ಮಾಡಿ ಒಂದುಪಾಯವನ್ನು ಹುಡುಕಿದೆ. ಅಮ್ಮನ ಮುಂದೆ ಕುಳಿತು 'ಬೆಡ್ಡರ್ಡ್'

ಬೇಕಾಗಿತ್ತು. ಯಾರ ಹತ್ತಿರವೂ ಸಿಕ್ಕುವುದಿಲ್ಲವೆಂದು ಗೊಣಗಿದೆ.

ಅದಕ್ಕೆ ಅವಳು 'ನಿಮ್ಮ ಲೈಬ್ರರಿಯಲ್ಲೋ ಕ್ಲಾಸು ಹುಡುಗಿಯರಿಂದಲೋ ತೆಗೆದುಕೊಳ್ಳಬಾರದೇ' ಎಂದಳು.

'ಹಾಗಾದರೆ ನಮ್ಮ ಮನೆ ಹತ್ತಿರ ಇರುವ ಕಿಟ್ಟುವನ್ನು ಕೇಳಲೇ?'

'ಏನಾದರೂ ಮಾಡಿಕೊ'

ಒಂದು ಚೀಟಿಯಲ್ಲಿ ಪುಸ್ತಕದ ಹೆಸರು ಬರೆದು, ಅದನ್ನು ಅವರ ಮನೆಗೆ ಅಟ್ಟಿವೆ. ಆ ಚೀಟಿಯನ್ನು ಬರೆದವರಾರು ಎಂಬುದೂ ಅದರ ಮೇಲಿರಲಿಲ್ಲ. ಚೀಟಿಯನ್ನು ನಾನೇ ಬರೆದೆನೆಂದು ಊಹಿಸಿ, ಆತ ನಮ್ಮ ಮನೆಗೆ ಬಂದರು. ಅಂದಿನಿಂದ ಆತ ನಮ್ಮ ಮನೆಗೆ ಬರಲು ಆರಂಭಿಸಿದರು.

ಅಂದಿನಿಂದ ನನ್ನ ಪ್ರಣಯವು ವೃದ್ಧಿಯಾಗುತ್ತಾ ಬಂದಿತು. ಆದರೆ ಅವರು ನನ್ನನ್ನು ಪ್ರೀತಿಸುತ್ತಾರೋ ಇಲ್ಲವೋ ಎಂಬುದನ್ನು ಕಂಡು ಹಿಡಿಯಲು ಒಂದುಪಾಯವನ್ನು ಮಾಡಿದೆ. ಆವುದೋ ಕಾಗದವನ್ನು ಬರೆದು ಕೊನೆಯಲ್ಲಿ 'ಅಫೆಕ್ಷನೇಟ್ಲಿ' ಎಂದು ರುಜುಮಾಡಿದೆ.

ಅವಕ್ಕೆ ಅವರಿಂದ ಉತ್ತರ ಬಂದ ಪತ್ರದಲ್ಲಿ, ಆ ಪದವನ್ನು ಬರೆದು ಅದರ ಕೆಳಗೆ ಎರಡಾವರ್ತಿ ಗೆರೆ ಎಳೆದಿದ್ದರು.

ಅವರೂ ನನ್ನಲ್ಲಿ ವಿಶ್ವಾಸವಿಟ್ಟಿರುವ ವಿಷಯವನ್ನು ನನಗೆ ತಿಳಿದೊಡನೆಯೇ ನನಗೂ ಸ್ವರ್ಗಕ್ಕೂ ಒಂದೇ ಮೆಟ್ಟಿಲು ಅಂತರ ಉಳಿಯಿತು.

ಪರೀಕ್ಷೆಯು ಕಳೆದು ಬೇಸಿಗೆ ರಜವು ಬಂದ ಎರಡು ದಿನಗಳಿಗೆ, ಅವರು ನಮ್ಮ ಮನೆಗೆ ಬಂದು 'ಕ್ಯಾಂಪಿಗೆ ಹೋಗುತ್ತೇನೆ. ನಿತ್ಯ ಕಾಗದ ಬರೆಯುತ್ತಿರುತ್ತೇನೆ; ಇಷ್ಟಪಟ್ಟರೆ ಉತ್ತರ ಬರೆಯಬಹುದು' ಎಂದರು.

ಅವರು ಕ್ಯಾಂಪಿಗೆ ಹೋಗಿ ನಾಲ್ಕು ದಿನಗಳಾದರೂ ಕಾಗದ ಬರೆಯಲಿಲ್ಲ. ನನಗೆ ಬಹಳ ಕಷ್ಟಕ್ಕಿಟ್ಟುಕೊಂಡಿತು. ಯಾರನ್ನೂ ಕೇಳುವ ಹಾಗೆ ಇರಲಿಲ್ಲ, ಕೇಳದಿದ್ದರೆ ಮನಸ್ಸು ತಡೆಯುವಂತಿರಲಿಲ್ಲ. ದಿನಕ್ಕೆ ನೂರು ಬಾರಿಯಾದರೂ ಅವರ ಮೇಲೆ ಮುನಿಸುಗೊಳ್ಳುತ್ತಿದ್ದೆ. ಆದರೆ ಆ ನಗುಮುಖವನ್ನು ನೆನಸಿಕೊಂಡೊಡನೆಯೇ ನನ್ನ ಕೋಪವೆಲ್ಲವು ಮಾಯವಾಗುತ್ತಿತ್ತು.

ಒಂದೊರಮೇಲೊಂದರಂತೆ ಹನ್ನೆರಡು ದೀರ್ಘ ದಿನಗಳುರುಳಿದರೂ ಅವರಿಂದ ಕಾಗದವಿಲ್ಲ. ಅಂದು ಆವರು ಬರಬೇಕಾಗಿತ್ತು; ಬರಲಿಲ್ಲ.

ನನ್ನ ಸಂಕಟವನ್ನು ಆರ ಬಳಿಯಲ್ಲಿಯೂ ಹೇಳಿಕೊಳ್ಳುವಂತಿರಲಿಲ್ಲ. ಮನಸ್ಸನ್ನು ಬಿಗಿಹಿಡಿದರೂ ಅದು ಎತ್ತಲೋ ಹೋಗಿಬಿಟ್ಟಿತ್ತು. ಊಟಉಪಚಾರಗಳು ಬೇಕಾಗಿರಲಿಲ್ಲ. ಅಮ್ಮನು ದಂಡಿಸಲು ಪ್ರಾರಂಭಿಸಿದಳು. ಅದಾದರೂ ನನಗೆ ಹೇಗೆ ತಿಳಿಯಬೇಕು!

ಅಂದಿಗೆ ಇಪ್ಪತ್ತೆರಡು ದಿನಗಳಾಗಿದ್ದುವು. ಬೆಳಗಿನಿಂದ ಅಂಚೆಯಾಳಿಗೆ ಕಾದಿದ್ದೆನು. ಹತ್ತೂವರೆ ಘಂಟೆಗೆ ಅಂಚೆಯವನು ಮನೆಗಿನ್ನೂ ದೂರರವಿರುವಾಗಲೇ ಕೈಯ್ಯಾಡಿಸಿ ಹೊರಟುಹೋದನು.

ನನಗೆ ಅಳು ಬಂದಿತು. ನನ್ನ ಕೊಟಡಿಗೆ ಬಂದು ಉರುಳಿಕೊಂಡು ಹಾಸಿಗೆಯ ಮೇಲೆ ಬಹಳ ಹೊತ್ತು ಗೋಳಾಡಿದೆನು. ದುಃಖವು ಸ್ವಲ್ಪ ಶಾಂತವಾದ ಮೇಲೆ ಅವರ ಮೇಲೆ ನನಗೆ ಕೋಪ ಬಂದಿತು. ನಿರಪರಾಧಿ ಅಲ್ಲದೆ ಮುಗ್ಧೆಯಾದ ನನ್ನನು ಮೋಸಪಡಿಸಿ, ನನ್ನ ಒಲವನ್ನು ಕದ್ದು ನನ್ನ ಜೀವನಕ್ಕೆ ಕಂಟಕಪ್ರಾಯರಾದರಲ್ಲಾ ಎಂದೆನಿಸಿತು. ಕೋಪಮಾಡಿಕೊಂಡು ಪ್ರಯೋಜನವಿಲ್ಲೆಂದೂ ಆ ಮೂರ್ತಿಯನ್ನು ದಗ್ಧಹೃದಯದಿಂದ ಕಿತ್ತುಹಾಕಲು ಯತ್ನಿಸಬೇಕೆಂದೂ ನಿರ್ಧರಿಸಿಕೊಂಡು ಮೇಲಕ್ಕೆದ್ದೆನು.

ಅಂದಿನ ಪೇಪರು ನೆಲದ ಮೇಲೆ ಬಿದ್ದು ಗಾಳಿಗೆ ಹಾರಾಡುತ್ತಾ ಇತ್ತು. ಅದನ್ನು ತುಳಿಯಲು ಹಿಂಜರಿದು ಬಗ್ಗಿ ನುಡಿಸುತ್ತಿದ್ದಾಗ ಆಚಿನ ಕಲಮ್ಮಿನಲ್ಲಿದ್ದ ಒಂದು ಹೆಡ್ಡಿಂಗನ್ನು ನೋಡಿ ನನ್ನ ಎದೆಯೇ ಒಡೆದು ಹೋಯಿತು. “ಕಿಟ್ಟುವು ಭಾಗವಹಿಸಲು ಅನಾನುಕೂಲ”.

“ಕ್ಯಾಂಪಿಗೆ ಹೋದ ಕಿಟ್ಟುವು ಅಲ್ಲೇ ಜ್ವರದಿಂದ ಮಲಗಲು ಆಸ್ಪತ್ರೆಗೆ ಸೇರಿಸಲ್ಪಟ್ಟರು ಕಳೆದ ಎಂಟು ದಿನಗಳಿಂದಲೂ ಬರುತ್ತಿರುವ ಟೈಫಾಯಿಡ್ ಜ್ವರದ ಜೊತೆಗೆ ನಿಮೋನಿಯವೂ ಬಂದು, ಅವರು ಹಾಸಿಗೆ ಹಿಡಿದಿರುವುದರಿಂದ ಮದ್ರಾಸ್ ಸ್ವಿಮ್ಮಿಂಗ್ ಕ್ಲಬ್ಬಿನವರು ನಡೆಸುತ್ತಿರುವ ವಾಟರ್ ಪೋಲೋ ಪಂದ್ಯಕ್ಕೆ ಅವರು ಹೋಗಲಾರದಿರುವುದು ಅತಿಶಯ ಶೋಚನೀಯ ಸಂಗತಿ. ಅಷ್ಟೇ ಅಲ್ಲ. ಅವರಿಗೆ ಪ್ರಾಣಭಯವೂ ಇರುವುದಾಗಿ ವೈದ್ಯರು ಅಭಿಪ್ರಾಯಪಡುತ್ತಾರೆ.”

ಸ್ವಲ್ಪ ಹೊತ್ತು ಅಲ್ಲಿಯೇ ಕುಳಿತು ಮನಸ್ಸನ್ನು ಸ್ತಿಮಿತಕ್ಕೆ ತಂದುಕೊಂಡು, ಅಮ್ಮನ ಬಳಿಗೆ ಹೋಗಿ ಕಿಟ್ಟುವಿಗೆ ಬಹಳ ಕಾಯಿಲೆಯೆಂದೂ ಆಸ್ಪತ್ರೆಗೆ ಹೋಗಬೇಕೆಂದೂ ಹೇಳಿದೆ. ಅಮ್ಮನು ನಾಳೆ ಹೋಗವಿಯುಂತೆ

ಎಂದಳು. ಆದರೆ ನಾನು ಬಲವಂತಪಡಿಸಿ ಅಂತೇನೆ ಹೊರಡಲು ಒಪ್ಪಿಸಿದೆ. ಬಹಳ ಒತ್ತಿ ಹೇಳಲು ನನಗೆ ಭಯ; ನಾನು ಅವರನ್ನು ಪ್ರೀತಿಸುತ್ತೇನೆಂದು ಅಮ್ಮನಿಗೆ ಹೇಗಾದರೂ ತಿಳಿದೀತೆಂಬ ಸಂಕೋಚ.

ಅಮ್ಮನು ಒಪ್ಪಿದ ಮೇಲೆ ನನ್ನ ರೂಮಿಗೆ ಹೋದೆ. ನಾನೇ ಕಸೂತಿ ಕೆಲಸ ಮಾಡಿದ್ದ ವಿಷ್ಣುವಿನ ಪಟದ ಮುಂದ ಕೈ ಜೋಡಿಸಿ-'ಅಪ್ಪಾ, ಅವರನ್ನು ಉಳಿಸಿಕೊಟ್ಟು, ನಮ್ಮ ಪ್ರೀತಿಯು ಫಲಿಸುವಂತೆ ಮಾಡು. ಅವರೇ ನನಗೆ ಜನ್ಮ ಜನ್ಮದಲ್ಲಿಯೂ ಪತಿಯಾಗಿರಲಿ' ಎಂದು ಬೇಡಿಕೊಂಡೆ. ಪರಮಾತ್ಮನಿಗೆ ನನ್ನ ಮೊರೆಯು ಮುಟ್ಟಿರಬೇಕು.

ಆಸ್ಪತ್ರೆಗೆ ಹೋದರೆ ಅವರ ವಾರ್ಡಿನೊಳಗೆ ಹೋಗಲು ಕಾಲೇ ಬಾರದು. ಬಾಗಿಲ ಬಳಿ ಮೂವರು ಮಾತಾಡುತ್ತಿದ್ದರು

ಅವರಿಗೆ ಬ್ರೈಯಿನ್ ಫೀವರೂ ಇದೆ. ಯಾರ ವಿಷಯವೋ ಬಹಳ ಅವರ ನೆನಪಿಗೆ ಬರುತ್ತಿದೆ. ಅವರು ಬರದಿದ್ದರೆ ಕಿಟ್ಟಿ ಬದುಕುವ ಮಾರ್ಗವಿಲ್ಲ ನೀವು ಅವರ ತಂದೆಯವರು. ನಿಮಗೆ ಕೆಟ್ಟ ಸುದ್ದಿಯನ್ನು ಆದಷ್ಟು ದಿವಸ ತಳ್ಳಿ ಹೇಳೋಣವೆನ್ನುವುದು ನನಗೆ ಸರಿತೋರಲಿಲ್ಲ

'ಅವನ ಬಂಧುಗಳು ನಾವೆಲ್ಲಾ ಇಲ್ಲೇ ಇದ್ದೇವೆ; ಆದರೆ ಅವನನ್ನು ಇಲ್ಲಿಗೆ ಕರೆತಂದ ದಿವಸ-ಸೀತಾ, ಸೀತಾ-ಎಂದು ಬಹಳ ಕನವರಿಸುತ್ತಿದ್ದ. ಯಾರೋ ಗೊತ್ತಾಗಲಿಲ್ಲ, ಅವನಿಗಿನ್ನೂ ಮದುವೆಯಾಗಿಲ್ಲ. ಅವನ ಜೊತೆ ಹುಡುಗಿಯರು ಯಾರಾದರೂ ಇದ್ದಾರೇನೋ ವಿಚಾರಿಸಬೇಕು.'

ನನ್ನ ಕಿವಿಗೆ ಬಿದ್ದುದು ಅಷ್ಟೆ. ಅವರ ತಂದೆಯನ್ನು ಅಲ್ಲಿ ನೋಡಿ ನಾವು ಒಳಹೊಕ್ಕೆವು ನಾವೆಲ್ಲ ಹಾಸಿಗೆಯ ಬಳಿ ಬಂದುದನ್ನು ಕಂಡು ಅವರ ತಾಯಿಯವರು ಕಣ್ಣಲ್ಲಿ ನೀರು ಸುರಿಸುತ್ತಾ, 'ಎಷ್ಟು ಒಳ್ಳೆಯವರಪ್ಪಾ ನೀವು! ಯಾರಾದರೂ ನಿತ್ಯ ಬರ್ತ ಇರ್ತೀರಲ್ಲಪ್ಪಾ' ಎಂದು ಇನ್ನೂ ಹೇಳುತ್ತಿರುವಾಗಲೇ ನಮ್ಮ ತಂದೆಯವರು 'ಉಪಚಾರ ಬೇಡೀಮ್ಮಾ' ಎಂದು ಹೇಳುತ್ತಾ ಹಾಸಿಗೆಯ ಬಳಿ ನಿಂತುಕೊಂಡು ಎರಡು ಬಾರಿ ಅವರ ಹೆಸರನ್ನು ಹಿಡಿದು ಕೂಗಿದರು. ಆಯಾಸದಿಂದ ಕಣ್ಣು ಮುಚ್ಚಿಕೊಂಡಿದ್ದ ಅವರು ಕಣ್ಣು ತೆರೆಯಲು ಮೊದಲು, ಅವರ ದೃಷ್ಟಿಗೆ ಗೋಚರಿಸಿದವಳು ಅವರ ಕಾಲ ಬಳಿ ಇದ್ದ ನಾನು! ಅವರು ಒಂದು ಬಾರಿ ನನ್ನ ಹೆಸರನ್ನುಸಿರಿದರು. ರಕ್ತವಿಲ್ಲದೆ ಶುಷ್ಕವಾಗಿದ್ದ ಅವರ ಕೆನ್ನೆಗಳು ಸ್ವಲ್ಪ ಕೆಂಪೇರಿ

ದುವು. ಓಡಿಹೋಗಿ ಅವರ ತಲೆಯನ್ನು ತೋಳಿನ ಮೇಲಿಟ್ಟುಕೊಂಡು ನನ್ನ ಕಣ್ಣೀರಿಂದ ತೊಯ್ಯಿಸಬೇಕೆನ್ನಿಸಿತು. ಆದರೆ ಭಯ ಸಂಕೋಚ ಗಳಿಂದ ಹಿಂಜರಿದು ಕಣ್ಣೀರು ತುಂಬಿದ ಕಣ್ಣಾಲಿಗಳನ್ನು ಅತ್ತ ತಿರುಗಿಸಿ ದೆನು.

ಅಂದಿನಿಂದ ದಿನಕ್ಕೆ ಒಮ್ಮೆಯಾದರೂ ಆಸ್ಪತ್ರೆಗೆ ಹೋಗಿ ಅವರನ್ನು ಕಂಡು ಬರುತ್ತಿದ್ದೆ.

ಒಂದು ದಿನ ಎಂದಿನಂತೆ ಆಸ್ಪತ್ರೆಗೆ ಹೋಗಿದ್ದೆನು. ನನ್ನನ್ನು ಅವರ ಅಕ್ಕನವರು ಕರೆದು, 'ನೀವು ಯಾವ ಕ್ಲಾಸಿನಲ್ಲಿ ಓದುತ್ತಿದ್ದೀರಿ?' ಎಂದು ಕೇಳಿದರು.

'ನನ್ನದು ಇನ್ನೂ ಮೊದಲನೆಯ ವರ್ಷ. ಈ ವರ್ಷ ನಮ್ಮ ಕಿಟ್ಟಿ ಕಾಲೇಜು ಬಿಡುತ್ತಾರೆ. ನಮಗೆಲ್ಲಾ ಪರಿಚಯವಾಗಿ ಐದಾರು ತಿಂಗಳಾ ದುವು. ಆದರೆ ಆವರನ್ನು ನಾನು ಮೊದಲೇ ಕಂಡಿದ್ದೆ!' ಎಂದು ಹೇಳಿ ಅಂದು ರಾತ್ರಿ ನಡೆದ ಕತೆಯನ್ನು ತಿಳಿಸಿದೆನು.

"ನನ್ನ ತಮ್ಮ ಸ್ವಲ್ಪ ದುಡುಕು (ಪಾಪ! ತಮ್ಮನೆಂಬ ವಿಶ್ವಾಸದಿಂದ ಸ್ವಲ್ಪವೆಂದು ಹೇಳಿದರೇನೋ) ಒಂದೊಂದು ಸಲ ಒರಟಾಗಿ ಆಡುತ್ತಾನೆ. ಕ್ಯಾಂಪಿನಲ್ಲಿ ಬಹಳ ಕಷ್ಟಪಟ್ಟು, ಮೈಗೆ ಆಲಸ್ಯ ತಂದುಕೊಂಡ".

ಆಸ್ಪತ್ರೆಯಿಂದ ಅವರು ಮನೆಗೆ ಬಂದರು. ಅವರನ್ನು ಡಿಸ್ಚಾರ್ಜ್ ಮಾಡಿದ ದಿನ ಅವರ ತಾಯಿಯವರು 'ಖಂಡಿತ ನಮ್ಮ ಮನೆಗೆ ಬನ್ನಿ' ಎಂದು ಹೇಳಿದ್ದರು. ಅವರು ಅಷ್ಟರಮಟ್ಟಿಗೆ ಹೇಳಿದರಲ್ಲಾ ಎಂದು ನಾನು ಹಿಗ್ಗೀ ಹೀರೇ ಕಾಯಾದೆ.

* * * * *

ಅಂದು ಆವರು ನಮ್ಮ ಮನೆಗೆ ಬಂದು, ನಮ್ಮನ್ನು ಅವರ ಮನೆಗೆ ಕರೆದೊಯ್ದರು. ಮನೆಯಲ್ಲಿ ಅವರ ಮಾತೃಶ್ರೀಯರೊಬ್ಬರೇ ಇದ್ದರು. ನಿಧಾನವಾಗಿ ಊಟ ಉಪಚಾರಗಳಾದುವು. ಎಲೆಯನ್ನು ಬಿಸಾಡಲು ಅವರೇನೆ ಹೋದರು. ನನಗೆ ಬಹಳ ನಾಚಿಕೆಯಾಯಿತು. ಸ್ಥಳ ಶುದ್ಧಿ ಮಾಡಲು ಸೆಗಣಿ ಹುಡುಕಲು ಹೋದರು. ಅದಕ್ಕೆ ಅವರ ತಾಯಿಯವರು 'ನಾನು ಮಡೀಲಿರೋವಾಗ ಅದೆಲ್ಲಾ ಮಾಡಿ ನಮ್ಮ ಹುಡುಗನಿಗೆ ರೂಢಿ ಯುಂಟು. ಮನೆಗೆ ಬಂದವರ ಕೈಯಲ್ಲಿ ಅವೆಲ್ಲಾ ಮಾಡಿಸುತ್ತಾರೆಯೇ?

ನಾಳೆ ನಾನು ನಿಮ್ಮ ಮನೆಗೆ ಬಂದರೆ ನನ್ನ ಕೈಲಿ ನೀವು ಕೆಲಸಮಾಡಿಸು ತ್ತೀರಾ? ಎಂದರು. ಅದಕ್ಕೆ ನಮ್ಮ ತಾಯಿಯವರು, 'ನಮ್ಮ ಮನೆಯವ ರನ್ನೂ ನಿಮ್ಮ ಮನೆಗೆ ಸೇರಿಸಿಕೊಂಡು ಬಿಡಿ' ಎಂದು ಸೂಕ್ಷ್ಮವಾಗಿ ಮಾತ ನಾಡಿದರು.

ನಾವು ಒಬ್ಬರನೊಬ್ಬರು ಕಣ್ಣು ನೋಡಿ, ನಕ್ಕೆವು



# 6. ಚಿಕ್ಕೀ ಪರಿಣಯ

'ಜೋಗಪ್ಪನ ಬಂಡೆ' 'ಜೋಗಪ್ಪನ ಪ್ಯೈಯ್ಯ' 'ಮುರುಕು ಗೋಡೆ' 'ಹಿಂಗಿದ ಹಗೆತನ' ಇವೆಲ್ಲ ಕೇಳಿದವರಿಗೆ ಕಂಚುಗಾರ ಕೃಷ್ಣಪ್ಪ ಏನೂ ಹೊಸಬನಲ್ಲ. ರಂಗಪ್ಪ, ಕಂಚುಗಾರ ಕೃಷ್ಣಪ್ಪ, ಈರಿ ಗಂಡ—ಅವನ ಹೆಸರು ನನಗೆ ಮರೆತು ಹೋಗಿದೆ. ಹುಸೇನಿ, ಮುಲ್ಕ, ಸಾಬಿ–ಇವರವೆಲ್ಲ ಒಬ್ಬೊಬ್ಬರದೂ ಒಂದೊಂದು ಕತೆ.

ಕಂಚುಗಾರ ಕೃಷ್ಣಪ್ಪ ಅವರ ತಂದೆ ಕಾಲದಿಂದ ಮಾತ್ರ ವಿಟ್ಲಾಲಿ ಯಲ್ಲಿ ವಾಸಮಾಡುತ್ತಾ ಇದ್ದುದು. ಅವರ ಸ್ಥಳ ಬಳ್ಳಾರಿ ಹತ್ತಿರ ಒಂದು ಹಳ್ಳಿ. ಆವರು ವರ್ಷ ವರ್ಷವೂ ಅಲ್ಲಿಂದ ಗಾಡಿಗಳಲ್ಲಿ ದುರ್ಗ, ಹಿರಿಯೂರು, ಚಳ್ಳಕೆರೆ, ಈ ಪ್ರಾಂತ್ಯಕ್ಕೆ ಕಂಚು ಹಿತ್ತಾಳೆಗಳ ಪಾತ್ರೆಗಳನ್ನು ಹಾಕಿಕೊಂಡು ಬಂದು ಹೊಸ ಪಾತ್ರೆ ಮಾರಿ, ಹಳೆಪಾತ್ರೆ ಕೊಂಡುಕೊಂಡು, ಸಾಲಕೇಳಿದವರಿಗೂ ಕೊಟ್ಟು, ವ್ಯಾಪಾರ ನಡೆಸುತ್ತಾ ಇದ್ದರು. ಬಳ್ಳಾರಿ ಬಹಳ ದೂರವಾದ್ದರಿಂದಲೂ ಪ್ರತಿವರ್ಷ ಬರುವುದು ತಪ್ಪದೇ ಇದ್ದುದ ರಿಂದಲೂ, ಅಣ್ಣ ತಮ್ಮಂದಿರ ಭಾಗವಾದುದರಿಂದಲೂ, ಕೃಷ್ಣಪ್ಪನ ತಂದೆ ವಿಟ್ಲಾಲಿಯಲ್ಲೇ ಮನೆಮಾಡಿ, ಅಂಗಡಿಯನ್ನು ತೆಗೆದು, ಅಲ್ಲೇ ಇರುತ್ತಾ, ಹಳೆ ಸರಕು ಹೆಚ್ಚಾದಾಗಲೂ ಹೊಸ ಸರಕು ತರಬೇಕಾದಾಗಲೂ ಬಳ್ಳಾರಿ ಪ್ರಾಂತ್ಯಕ್ಕೆ ಹೋಗುತ್ತಾ, ನಾಲ್ಕು ಜನಕ್ಕೆ ಬೇಕಾದವರಾಗಿ ಸ್ವಲ್ಪ ಆಸ್ತಿ ಪಾಸ್ತೀನೂ ಮಾಡಿಕೊಂಡು ಹಾಯಾಗಿದ್ದರು

ಕಂಚುಗಾರ ಸಹ ಕೃಷ್ಣಪ್ಪ ನಾರಾಯಣಾಚಾರ್ಯರ ಕೂಲಿ ಮಠ ದಲ್ಲಿ ಓದಿ, ಇಂಗ್ಲಿಷ್ ಕನ್ನಡ ಲೋವರ್ ಸೆಕೆಂಡರಿ ಪರೀಕ್ಷೆ ಪಾಸ್ ಮಾಡಿ ಬುದ್ಧಿವಂತನಾಗಿಯೇ ಇದ್ದುಕೊಂಡು, ಜೋಗಪ್ಪನ ಗರಡಿಗೆ ಹೋಗುತ್ತಾ ದೇಹವನ್ನೂ ಚೆನ್ನಾಗಿಯೇ ಇಟ್ಟುಕೊಂಡು, ತಂದೆಯ ಕೆಲಸಕ್ಕೂ ನೆರ ವಾಗುತ್ತ, ಆಗಾಗ್ಯೆ ಆತನ ಸಂಗಡ ಜೋರನ ಕುಂಟೆ, ಗೋರ್ಲಡಕು,' ಆಲೂರು, ನಂದಿಹಳ್ಳಿ, ವಿಶಾಲ, ಈ ಕಡೆ ಹೋಗುತ್ತ, ತಂದೆಯ ವ್ಯೆವಾಟ ನ್ನೆಲ್ಲ ತಿಳಿದುಕೊಂಡಿದ್ದ.

ಹೀಗಿರುವಾಗ–ಒಂದು ಸಲ ತಂದೆ ಮಗ ಇಬ್ಬರೂ ಹರ್ತಿಕೋಟೆ ಜಾತ್ರೆಗೆ (ಹಿರಿಯೂರು ತಾಲೂಕು) ಹೋಗಿದ್ದಾಗ ಅಲ್ಲಿ ಅಕಸ್ಮಾತ್ ವಾಂತಿ

ಭೇಧಿಗಳಾಗಿ ಕೃಷ್ಣಪ್ಪನ ತಂದೆ ಕಾಲವಾಗಿ ಹೋದ

ಕೃಷ್ಣಪ್ಪ ಒಬ್ಬಂಟಿಗನಾದರೂ ತಂದೆಯ ವೃತ್ತಿಯನ್ನು ಅನುಸರಿಸುತ್ತಾ ಹಾಯಾಗಿಯೇ ಇದ್ದ.

ಹೀಗೆಯೇ ಒಂದು ಸಲ, ಪಾತ್ರೆ ಹೇರಿಕೊಂಡು ಎರಬಳ್ಳಿ ಹತ್ತಿರ ಇರುವ ಗೊಲ್ಲಹಟ್ಟಿಯ ಬಳಿ ಬರುತ್ತ ಇರುವಾಗ, ರಂಗೇಗೌಡನ ಅಂಗಳದಲ್ಲಿ ಒಬ್ಬ ಹೆಂಗುಸು ಮುಸುರೆ ತಿಕ್ಕುತ್ತಾ ಇದ್ದುದನ್ನು ನೋಡಿದ. ಅವಳ ಮುಖವನ್ನು ಯಾಕೋ ಇನ್ನೊಂದು ಸಲ ನೋಡಬೇಕೆನ್ನಿಸಿತು ಅವನಿಗೆ. ಆ ಮುಖದಲ್ಲಿ ಅದೊಂದು ತರಹ ದೈನ್ಯತೆ, ನಿರಾಶೆಗಳು ಮೂಡಿ ಮಂಕಾಗಿದ್ದಿತು. ಎತ್ತರವಾದ, ದೊಡ್ಡದಾಗಿ ಕುಂಕುಮವಿಟ್ಟಿದ್ದ ಹಣೆ. ಕೆದರಿದ ತೆಲೆ. ಕರಿಮಣಿಯಾಗಲೀ ಬೊಟ್ಟಾಗಲೀ ಇಲ್ಲದಿರುವ ಹವಳದ ಸರ ಕತ್ತಿನಲ್ಲಿ.

ಕೃಷ್ಣಪ್ಪ ಹಾಗೆಯೇ ನಿಂತುಕೊಂಡ. 'ಕಂಚಿನ ಪಾತ್ರೆ' ಎಂತ ಒಂದು ಸಲ ಗಟ್ಟಿಯಾಗಿ ಕೂಗಿದ

ಮನೆ ಒಳಗಿನಿಂದ ಧ್ವನಿ ಬಂತು, 'ಯಾರೇ ಅದು ಚಿಕ್ಕಿ?' ಎಂದು

'ಕಂಚಿನ ಪಾತ್ರೆಯವನು'

ಚಿಕ್ಕಿ ಕೈತೊಳೆದುಕೊಂಡು,ಅಂಗಳ ದಾಟಿ ಬಂದು ನೋಡುತ್ತಾಳೆ-ಕೃಷ್ಣಪ್ಪ ಕೈಯಲ್ಲಿ ತಕ್ಕಡಿ ಹಿಡಿದುಕೊಂಡು ಬಾಗಿಲಲ್ಲಿ ನಿಂತಿದ್ದಾನೆ.

ಕೃಷ್ಣಪ್ಪ ಚಿಕ್ಕಿಯನ್ನು ನೋಡಿ 'ಹೊಸಪಾತ್ರೆ ತಕೋತೀರಾ, 'ಹಳೆ ಪಾತ್ರೆ ಕೊಡ್ತೀರಾ?' ಎಂದ.

'ವಿಚಾರಿಸುತ್ತೇನೆ, ಕಣಣ್ಣಾ' ಎಂತ ಚಿಕ್ಕಿ ಹೇಳಿ, ಮನೆಯೊಳಗೆ ಹೋಗಿ ತನ್ನ ಒಡತಿಗೆ ತಿಳಿಸಿದಳು.

'ಇನ್ನೂ ಒಂದು ಕೆಲಸವೂ ಆಗಿಲ್ಲ. ಬೆಣ್ಣೆ ಸಹ ತೆಗೀಲಿಲ್ಲ; ಅಡಿಗೆ ಆಗೋದರಲ್ಲಿದೆ. ಕಂಚುಗಾರನೂ ಇಂದೇ ಬರಬೇಕೆ? ಉಗ್ರಾಣ ಹೊಕ್ಕು' ಪಾತ್ರೆ ಹುಡುಕುತ್ತಾ ಕುಳಿತರೆ ಗೌಡ ಬಂದು ಸುಮ್ಮನೆ ಬೈದುಬಿಟ್ಟಾನು. ಎಂತ ಒಡತಿ ಹೇಳುತ್ತಾ ಬೀದಿಗೆ ಬಂದು, 'ನಾಳೆ ಬರುವುದಕ್ಕೆ ಆಗೋಲ್ಲವೆ, ಇಂದು ಪುರಸೊತ್ತಿಲ್ಲ,' ಎಂದಳು.

'ದಿನ ದಿನಾ ಬಂದ ಊರಿಗೇ ಬರೋಕೆ ನಂಗೂ ವಿರಾಮವಿಲ್ಲ; ಇದೊಂದೇ ಊರೇ, ಇದೊಂದೇ ಮನೆಯೇ. ನಾನು ಬರುವಾಗಲೆಲ್ಲ,

ಬಂದ ಊರಲ್ಲೆಲ್ಲಾ ಎಲ್ಲರಿಗೂ ವಿರಾಮ ಇದೆಯೋ-ಎಂತ ಶಕುನ ಕೇಳಿ ಬರುವುದಕ್ಕಾಗುತ್ತಯೇ'

'ಅವುದು, ಕಣಪ್ಪ, ನಮ್ಮ ಕೆಲಸ ಹೆಂಗೋ ನಿಮಗೂ ಹಂಗೇ ನೂರು ಕೆಲಸ, ನೂರು ಊರು... ಉಗ್ರಾಣದಿಂದಲೂ ಅಟ್ಟದ ಮೇಲಿಂದಲೂ ಪಾತ್ರೆ ತೆಗೀಬೇಕು.'

'ಅದಕ್ಕೇನಪ್ಪ, ಎರಡು ಗಳಿಗೆ ಕಾದಿರಲಾರೆನಾ. ಬೆಳಗಿನ ಜಾವ ಗಾಡಿಕಟ್ಟಿದ್ದು. ಎತ್ತುಗಳಿಗೂ ದಣಿವಾರ್ತ್ತದೆ' ಎಂದು ಹೇಳಿ, ಎತ್ತು ಬಿಚ್ಚಿ, ಹಟ್ಟಿಯೊಳಗೆ ಬಂದು ಕುಳಿತ.

ಮನೆಯಾಕೆ,'ಚಿಕ್ಕೀ, ಬೇಗ ಮುಸುರೆತೊಳೆಯೋಕೆ ಆಗಿಲ್ಲವೇನೊ. ಪಾಪ, ಎಷ್ಟು ಹೊತ್ತು ಕೇಳೀತೀಯ. ಬೆಳಗಿನಿಂದ ಅದೊಂದೇ ಬದುಕು ಮಾಡ್ತಾ ಕುತಿದೀಯಾ' ಎಂತ ಗದರಿಸಿ ಅಟ್ಟಹತ್ತುವುದಕ್ಕೆ ಹೋದಳು.

ಮನೆಯಾಕೆಯ ಗದರಿಗೆ ಹೆದರಿ, ಮುಖ ಚಿಕ್ಕದು ಮಾಡಿಕೊಂಡು, ಬೇಗಬೇಗ ಮುಸುರೆತೊಳೆಯುತ್ತಿದ್ದ ಚಿಕ್ಕಿಯನ್ನು ಕೃಷ್ಣಪ್ಪ ಸ್ವಲ್ಪಹೊತ್ತು ಹಾಗೆಯೇ ದಿಟ್ಟಿಸಿ ನೋಡಿದ. ಇದನ್ನರಿತ ಚಿಕ್ಕಿಯು ಮುಖ ಸ್ವಲ್ಪ ಸಿಂಪರಿಸಿಕೊಂಡರೂ, ಏನೂ ಹೇಳದೆ ಬೇಗಬೇಗ ಪಾತ್ರೆ ತೊಳೆಯುತ್ತಿದ್ದಳು.

'ಬಾಯಾರೈತೆ, ಒಸಿ ನೀರು ಕೊಟ್ಟೆಯಾ, ಕುಡಿಯೋಕೆ?'

ಚಿಕ್ಕಿ ತನ್ನ ಕೈ ಮೊದಲು ತೊಳೆದುಕೊಂಡು ತಾನು ಬೆಳ್ಳಗೆ ಬೆಳಗಿಟ್ಟಿದ್ದ ಲೋಟ ಒಂದನ್ನು ತೊಳೆದು, ಒಳಗೆ ಹೋಗಿ ತಣ್ಣಗಿರುವ ಶುಭವಾದ ನೀರು ತಂದು ಕೊಟ್ಟಳು.

'ತಣ್ಣಗಿರಲವ್ವ, ನಿನ್ನ ಹೊಟ್ಟೆ' ಬಹಳ ಬಾಯಾರಿತ್ತು.

ನೀರು ಕುಡಿದು ಕೃಷ್ಣಪ್ಪ ಪುನಃ ಪಾತ್ರೆ ಬೆಳಗುತ್ತಿದ್ದ ಚಿಕ್ಕಿಯ ಬಳಿ ಹೋಗಿ, ಬಹಳ ನಯವಾಗಿ ಅವಳ ಹೆಗಲ ಮೇಲೆ ಕೈಯಿಟ್ಟ.

ಚಿಕ್ಕಿ ಬೆಚ್ಚಿಬಿದ್ದು, 'ಅಯ್ಯೋ' ಎಂತ ಕಿರುಚಿ ಎದ್ದುನಿಂತಳು.

ಕೃಷ್ಣಪ್ಪ ತನ್ನ ಬಾಯಿಯಮೇಲೆ ಬೊಟ್ಟಿಟ್ಟು 'ಉಶ್, ಕೂಗಬೇಡ. ನಾನೇನು ಹುಲಿಯೇ, ಕರಡಿಯೇ, ಕಳ್ಳನೇ, ನಿನ್ನನ್ನು ಹೊತ್ತುಕೊಂಡು ಹೋಗಲು ಬಂದಿದ್ದೇನೆಯೇ? ನಿನ್ನ ಸರಿಯಾಗಿ ನೋಡೋಣ ಅನ್ನಿಸಿತು, ಅದಕ್ಕೋಸ್ಕರ ಹತ್ತಿರ ಬಂದೆ; ಬೇರೆ ಗಮನದಲ್ಲಿದ್ದೆ. ಆದ್ದರಿಂದ ಹೆಗಲ ಮೇಲೆ ಕೈಯಿಟ್ಟೆ' ಎಂತ ಹೇಳ್ತಾ, ದನಿಯನ್ನು ಎಷ್ಟು ನಯವಾಗಿ ಮಾಡಲು

ಸಾಧ್ಯವೋ ಅಷ್ಟು ನಯಮಾಡಿಕೊಂಡು, 'ನಿನಗೆ ತಂದೆ ತಾಯಿ ಯಾರೂ ಇಲ್ವಾ, ನನ್ನ ಹಾಗೆಯೇ ಪರದೇಶಿ ಕಂಡ್ಹಾಂಗೆ ಕಾಣ್ತೀಯ. ನಿನ್ನವರು ಯಾರೂ ಇಲ್ಲವಾ' ಎಂದ.

ಭಯಗೊಂಡಿದ್ದ ಚಿಕ್ಕಿ, ತನ್ನ ಕಣ್ಣಾಲೆಗಳನ್ನು ಅವನ ಕಡೆ ತಿರುಗಿಸಿದಳು. ಕಣ್ಣಿನಲ್ಲಿ ನೀರು ತುಂಬಿತ್ತು.

ಅವೇ ಧ್ವನಿಯಲ್ಲೇ ಕೃಷ್ಣಪ್ಪ ತನ್ನ ಮಾತು ಮುಂದುವರಿಸಿದ—

'ಯಾಕೆ, ಅಳ್ತಾ ಇದೀಯ, ನಿಂಗ್ಯಾರೂ ದಿಕ್ಕಿಲ್ಲವಾ'

ಚಿಕ್ಕಿ ತಲೆಯಲ್ಲಾಡಿಸಿ, 'ಸದ್ಯ ದೂರ ಹೋಗಪ್ಪ, ನಿನ್ನ ಬೇಡುತ್ತೀನೆ. ನನ್ನನ್ನೂ ನೀ ಮುಟ್ಟಿದ್ದೇ ಆಗಲಿ, ನಿನ್ನೊಡನೆ ನಾನು ಮಾತಾಡ್ತಾ ಇರೋದೇ ಆಗಲಿ, ನನ್ನೊಡತಿ ಕಂಡರೆ ನನ್ನ ಜೀವದೊರಸೆ ಇಡಗೊಡಾಕಿಲ್ಲ' ಎಂದಳು.

'ಇಗೋ ದೂರ ಸರಿದೆ. ಹೆದರಬೇಡ. ನಿನ್ನ ನಾನೇನೂ ಮಾಡೊಲ್ಲ. ಒಂದೆರಡು ಪ್ರಶ್ನೆ ಕೇಳ್ತೀನೆ; ನಿನ್ನಾಣೆ ಸರಿಯಾಗಿ ಉತ್ತರ ಹೇಳು. ನೀನು ಸುಖವಾಗಿಲ್ಲ, ಅಂತೀನಿ. ನಿನ್ನ ಯಜಮಾನಿ ನಿನಗೆ ಹಿಂಸೆಕೊಡ್ತಾಳಾ? ಒಳ್ಳೆಯವಳಲ್ವ?'

'ನಾನು ಆಕೆ ಒಳ್ಳೆಯವಳಲ್ಲ-ಎಂತ ಹೇಳಲೇ? ದಿಕ್ಕಿಲ್ಲದ ಭಿಕಾರಿಗೆ ಹೊಟ್ಟೆಗೆ ಹಿಟ್ಟು ಹಾಕ್ತಾಳೆ. ಮಾನ ಮುಚ್ಚಿಕೊಳ್ಳೋಕೆ ಬಟ್ಟೆ ಕೊಡ್ತಾಳೆ. ಇರೋಕೆ ಜಾಗ ಇತ್ತಿದಾಳೆ. ಒಬ್ಬೊಂಟಿಗಳಿಗೆ ದಿಕ್ಕಾಗಿದ್ದಾಳೆ. ಇಲ್ಲದಿದ್ದರೆ ನಾನು ಹೇಗೆ ಮಾನವಾಗಿ ಬದುಕಿರೋದು!'

'ಅಯ್ಯೋ ಪಾಪ! ನಿನ್ನ ಅರಮನೇಲಿ ಕೂಡಿಸಿ ಗಿಣಿ ಸಾಕಿದ ಹಾಗೆ ಸಾಕ್ತಾ ಇದಾಳೆ! ನನ್ನೆದುರಿಗೇನೆ ಬೈದಳಲ್ಲ! ನಾನು ಬರೋಕೆ ಮೊದಲಿಂದಲೂ ಬೈತಿದ್ದಳೇನೋ?'

'ಹುಂ. ಇಂದು ನನಗೆ ಮೈ ಸ್ವಸ್ಥವಿರಲಿಲ್ಲ. ತಲೆನೋವು ಬಂದಿತ್ತು. ಏಳೋದು ನಿಧಾನವಾಯ್ತು. ಎದ್ದ ಲಾಗಾಯ್ತು ಅನ್ತಾ ಇದಾಳೆ.'

'ನಿಂಗೆ ದಿಕ್ಕು ದಿವಾಣಾ ಯಾರೂ ಇಲ್ಲ ಅಂತ ಲೆಖ್ಖಾಚಾರ ಇಲ್ಲದೆ ಗಾಣದ ಎತ್ತಿನ್ಹಾಂಗೆ ದುಡಿಸ್ತಾ ಇದ್ದಾಳೆ ಅಂತ ಕಾಣುತ್ತೆ'

'ಸಂಸಾರಿಗಳ ಮನೇಲಿ ಕೆಲಸ ಇಲ್ದೆ ಇರುತ್ತೆಯಾ?'

'ಅಡುಗೆ, ಬುತ್ತಿ ಹೊರೋದು, ಕಸ, ಮುಸುರೆ, ದನಬಿಟ್ಟುಕೊಂಡು

ಹೋಗೋದು, ಕಟ್ಟೋದು, ಹಾಲು ಕರೆಯೋದು, ಎಲ್ಲ ನಿನ್ನ ಕೆಲಸಾನೇ ಅಂತೇನೆ.'

'ಹುಂ'

'ಎಷ್ಟು ದಿಸದಿಂದ ಇದ್ದೀಯೊ, ಇಲ್ಲಿ?'

'ನನಗೆ ಬುದ್ಧಿ ಬರೋಕೆ ಮೊದಲಿಂದ.'

'ನಂಗೆ ನಿಲ್ಲೋಕೆ ತಳ ಇಲ್ಲದಿದ್ದಾಗ, ಒಂದು ಓಡಿ ಅನ್ನ ಹಾಕೋರು ದಿಕ್ಕಿಲ್ಲದಾಗ, ಮನೇಗೆ ಕರಕೊಂಡು ಬಂದು ಇಟ್ಕೊಂಡಳು. ಇಷ್ಟು ದಿನದ ವರೆಗೂ ಈ ದೇಹ ಬೆಳೆಸಿದಳು. ಆದರೂ ನನಗೆ ವಯಸ್ಸು ಬಂದದ್ದೆ, ನನ್ನ ಜವಾಬ್ದಾರಿ ತಿಳಿದದ್ದೆ. ನನಗೆ ಅನ್ನ ಕೊಟ್ಟವಳಲ್ಲಿ ನಾನು ಕೃತಜ್ಞತೆ ತೋರಿಸಬೇಕು ಅಂತ ನನಗೆ ತಿಳಿದದ್ದ, ಅಂತ ಅವಳಿಗೆ ಗೊತ್ತಾಗಿರೋ ಮಟ್ಟಿಗೆ ಕಾಣೆ. ಒಂದು ದಿನವೂ ಒಸಿಕೂಡ ಯಾವುದೂ ಹೆಚ್ಚು ಕಡಿಮೆ ಯಾಗಾಕಿಲ್ಲ! ಚಳಿಜ್ವರ, ತಲೆನೋವು, ಮೂಗು ನೋವು, ಏನಾದರೂ ಹೇಳಿಕೊಳ್ಳೋಹಾಗಿಲ್ಲ! ನಾನೂ ಮನುಷಿ ಎಂತ ಅನ್ನುವ ದಯಾ ದಾಕ್ಷಿಣ್ಯವೇ ಇಲ್ಲ.'

'ಹೋಗಲಿ, ಗಾಣದ ಎತ್ತಿಗಿಂತ ಹೆಚ್ಚಾಗಿ ದುಡೀತೀಯಲ್ಲ, ಸಂಬಳ ಗಿಂಬಳ ಕೊಡ್ತಾಳೋ?'

'ನಂಗೆ ಹದಿನೆಂಟು ವಯಸ್ಸಾಗೋ ವರೇಗೆ ಕಡಲೆಪುರಿಗೆ ಮೂರು ಕಾಸು ಬೇಕಾದರೂ ತಿರುಪ ಬೇಡಬೇಕಾಗಿತ್ತು. ಈಗ ವರ್ಷಕ್ಕೆ ಹನ್ನೆರಡು ರೂಪಾಯಿ ಕೊಡ್ತೇನೆ ಎಂತ ಹೇಳ್ತಿದಾಳೆ. ಮೂರು ವರ್ಷದ ಸಂಬಳ ಅವಳ ಮ್ಯಾಗೇ ಬಾಕೀ. ಏಕೆ?

'ಹೋಗಲಿ, ನಿಮ್ಮ ಜನ ಯಾರಾದರೂ ಇದ್ದಾರೊ?'

'ನಮ್ಮ ಜನ ಯಾರಾದರೂ ಇದ್ದಿದ್ದರೆ ನಂಗ್ಯಾಕೆ ಈ ಗತಿ ಬರ್ತಾ ಇತ್ತು. ನನ್ನ ತಾಯಿತಂದೆ ಆರು ಮಕ್ಕಳು ಬಿಟ್ಟು ಈಗ್ಗೆ ೧೮-೨೦ ವರ್ಷದ ಕೆಳಗೆ ಬಂದಿದ್ದ ದೊಡ್ಡ ಮಾರಮ್ಮನ ಉಪದ್ರದಲ್ಲಿ ಕಾಲವಾದರು. ಎಲ್ಲರಿಗಿಂತ ನಾನೇ ಚಿಕ್ಕವಳು. ನನಗೆ ತಿರಕೊಂಡು ತಿಂಬೋಕೂ ಯೋಗ್ಯತೆ ಇರಲಿಲ್ಲ. ಆ ಕಾಲದಲ್ಲಿ ಈಯಮ್ಮ ದಯೆ ತೋರಿಸಿ ನನ್ನ ಸಾಕ್ಕೊಂಡ್ರು. ಉಳಿದವರು ದಿಕ್ಕಾಪಾಲಾದರು. ಎಲ್ಲಿದ್ದಾರೆ ಅನ್ನೋದೇ ನಂಗೆ ಗೊತ್ತಿಲ್ಲ. ನಾನು ನಿರ್ಗತಿಕಳು. ಮನೆಮಾರು ನೋಡಿಕೊಳ್ಳೋಕೆ ನಂಗೆ ಯೊಗ್ಯತೆ

ಇದೆ ಎಂತ ಎಷ್ಟೋ ಜನಕ್ಕೆ ತಿಳಿದಿದ್ದರೂ, ಗತಿಯಿಲ್ಲದವಳಾದ್ದರಿಂದ ಯಾರೂ ಮದುವೆಯಾಗರು. ಹೋಗಲಿ, ನನಗೆ ಮದುವೆಮಾಡಿ ನಾನು ಸಂಸಾರಿಯಾಗಿ ಒಂದು ಮನೆಗೆ ಯಜಮಾನಿ ಅಂತ ಅನ್ನಿಸಿಕೊಳ್ಳೋದನ್ನು ನೋಡಬೇಕೆಂಬ ಶ್ರದ್ಧೆಯಾಗಲೀ ಆಸೆಯಾಗಲೀ ಯಾರಿಗಿದೆ! ನಡೆದಷ್ಟು ದಿನ ಹಿಂಗೇ ನಡೀಲಿ ಎಂತ ಈಯಮ್ಮನ ಮನಸ್ಸು. ಇನ್ನು ನಂಗೆ ಲಗ್ನ ಮಾಡ್ತಾಳೆ!

ಕೃಷ್ಣಪ್ಪನಿಗೆ ಅಯ್ಯೋ, ಅನಿಸಿತು. ಆಲೋಚನೆ ಹೆಚ್ಚಾಯಿತು. ಹಟ್ಟೀಲಿ ಅತ್ತಿತ್ತ ಒಂದೆರಡು ಸಲ ಓಡಾಡಿ, ಅವಳೆದುರು ನಿಂತು 'ಇಲ್ಲಿ ನೋಡು, ಒಂದು ಸಲ ನನ್ನ ಕಡೆ ನೋಡು. ಚೆನ್ನಾಗಿ ನೋಡಿ, ನಾನು ಹೆಂಗೆ ಕಾಣಿಸ್ತೀನಿ,ಅಂತ ಹೇಳು. ಏನು ನಂಬಿಕಸ್ತನ ಹಾಗೆ ಕಾಣಸ್ತೀನಾ, ಅಥವ ದಗಾಖೋರ ಕಂಡಾಗೆ ಕಾಣಿಸ್ತೀನಾ' ಎಂದ.

ಚಿಕ್ಕಿ ಅವನ ಕಡೆ ನೋಡಿ, ನಾಚಿಕೆಯಿಂದಲೂ ಅನುಮಾನದಿಂದಲೂ, 'ಏನೋಪ್ಪ, ನಂಗೆ ಯಾಕೆ ಆ ಮಾತು' ಎಂದಳು.

'ನಿಂಗ ಸಂಬಂಧಪಟ್ಟಷ್ಟುಅದು ಯಾರಿಗೂ ಸಂಬಂಧ ಪಡಲಾರದು ಅಂತ ನನ್ನ ಮಾತು ಮುಗಿದ ಮೇಲೆ ನಿಂಗೆ ಅನ್ನಿಸ್ತದೆ. ಹಟ್ಟೀ ಆಚೆ ರಸ್ತೆಯಲ್ಲಿ ನೋಡು; ಅಲ್ಲಿ ಎತ್ತು ಗಾಡಿ ಇದಾವೆ. ಗಾಡಿ ತುಂಬಾ ಪಾತ್ರೆ ಸಾಮಾನು ಇದ್ದಾವೆ. ಇವೆಲ್ಲ ನಂದೇ. ಊರಲ್ಲಿ ಮನೆಮಠ ಐತೆ. ಒಸಿ ನಗದೂ ಸ್ವಲ್ಪ ಭೂಮಿ ಕಾಣೀನೂ ಅವೆ. ನನಗೂ ಸಂಸಾರವಿಲ್ಲ. ರಂಗಪ್ಪ ನಾಣೆ ಹೇಳ್ತೀನೆ. ನಿನ್ನ ಲಗ್ನವಾಗಬೇಕೆನ್ನಿಸಿದೆ. ನಿನ್ನ ಕರಕೊಂಡು ಹೋಗಿ ಲಗ್ನಮಾಡಿಕೊಂಡು ನಿನ್ನ ಈ ಕಷ್ಟ ತಪ್ಪಿಸಬೇಕು ಅಂತ ದೇವರು ನನ್ನ ಮನಸ್ಸಿನಾಗೆ ಹೇಳ್ತಾ ಇದಾನೆ. ನಿನ್ನ ಕರಕೊಂಡು ಹೋಗಿ ಮದುವೆಯಾಗ್ತೀನಿ. ಈ ದರಿದ್ರ ಚಾಕರಿ ಬಿಟ್ಟು ಬಂದು ನನ್ನ ಮನೇಲಿ ಯಜಮಾನಿಯಾಗಿರು. ನಿನಗೇನೂ ಮೋಸಮಾಡುವುದಿಲ್ಲ. ಇಷ್ಟಬಂದರೆ ನೀನು ಮಕ್ಕಳು ಮರಿಯಾಗೋವರೆಗೂ ನನ್ನ ಜೊತೇಲೇ ಓಡಾಡಿಕೊಂಡಿರಬಹುದು.'

ಚಿಕ್ಕಿ ಒಂದು ಸಲ ಅವನನ್ನು ನೋಡಿ ತಲೆ ತಗ್ಗಿಸಿದಳು. ನಾಚಿಕೆಯಿಂದ ಅವಳ ಮುಖಕ್ಕೆ ರಂಗೇರಿತು.

'ನಾನೇನೂ ಮನ್ಮಥನಲ್ಲ, ನಂಗೂ ಒಬ್ಬಳು ಹೆಂಡತಿ ಇದ್ದಿದ್ದಳು.

ಈಗಿಲ್ಲ. ನನ್ನ ನೋಡಿದ ತಕ್ಷಣ ಮೆಚ್ಚಿಬಿಡು ಎಂತ ಹೇಳೋಲ್ಲ. ಒಂದೆ ರಡು ದಿನ ಒಟ್ಟಿಗಿದ್ದರೆ ನಮನಮಗೆ ಸರಿಹೋಗಬಹುದು. ನಿಂಗೆ ಇಷ್ಟ ಬಂದರೆ ಮದುವೆಯಾಗು. ಮದುವೆಯಾಗುವವರೆಗೆ ನಿನ್ನ ತಂಟೆಗೆ ಬರು ವುದಿಲ್ಲ. ದೇವರಾಣೆಮಾಡಿ ಹೇಳ್ತೀನೆ; ಇಲ್ಲಿ ನೀನು ಬದುಕಿರುವುದಕ್ಕಿಂತ ಮಾನವಾಗಿ ಕಾಣ್ತೇನೆ. ನಿನ್ನ 'ಜೀವನವನ್ನು 'ಇಲ್ಲಿಯ' ಜೀವನಕ್ಕಿಂತ ಚೆನ್ನಾಗಿ ನಡಸ್ತೇನೆ.'

ಚಿಕ್ಕಿ ಏನೂ ಹೇಳಲಿಲ್ಲ. ಆದರೆ ಕೃಷ್ಣಪ್ಪನನ್ನು ನೋಡುತ್ತಾ ನಿಂತಳು.

'ನೀನೇನೂ ರತಿಯೆಲ್ಲ'

'ಊಹೂಂ' ಎಂತ ತಲೆ ಅಲ್ಲಾಡಿಸಿದಳು, ಚಿಕ್ಕಿ

'ಏನು, ಬೇಗ ಹೇಳು. ನನ್ನ ಸಂಗಡ ಬರ್ತೀಯಾ?' ಬರೋಹಾಗಿ ದ್ದರೆ ತಕ್ಷಣವೇ ಹೊರಡಬೇಕು. ಇಲ್ಲದಿದ್ದರೆ ನಿನ್ನ ಯಜಮಾನಿ ಅಟ್ಟ ಇಳಿದು ಬಂದುಬಿಡ್ತಾಳೆ.'

ಚಿಕ್ಕಿ ಯಾವ ಸೀಮೆಯನ್ನೂ ಯಾವ ಜನವನ್ನೂ ಕಂಡರಿಯದಿ ದ್ದರೂ ಮಾನಾವಮಾನಗಳೇನೆಂದು ತಿಳಿದಿದ್ದಳು. ಪ್ರಾಯ ಬಂದಿದ್ದರೂ ತನಗೆ ತಾನೇ ಒಡತಿಯಾಗಿದ್ದರೂ ತನ್ನ ಮಾನವನ್ನು ಯಾರಿಗೂ ಮಾರಿರ ಲಿಲ್ಲ. ಮತ್ತು ಮಾನವಾಗಿ ಬಡತನದಲ್ಲಿ ಕಾಲಹಾಕುವುದು ದೇಹ ಮಾರಿ ಬರುವ ಐಶ್ವರ್ಯದ ಜೀವನಕ್ಕಿಂತ ಉತ್ತಮವೆಂತ ಅವಳ ಭಾವನೆಯಾ ಗಿತ್ತು.

ಕೃಷ್ಣಪ್ಪನ ಕಡೆ ನೋಡಿ ಚಿಕ್ಕಿ ಹೇಳಿದಳು.—'ನನಗಿಂತ ನೀನು ನೋಡುವುದಕ್ಕೆ ಲಕ್ಷಣವಾಗಿದೀಯ! ಪ್ರಾಯವಿದೆ. ಹಣವಿದೆ ಎನ್ನು ತ್ತೀಯಾ? ನಿನಗೆ ಒಳ್ಳೆ ಹೆಣ್ಣು ಸಿಗಬಹುದು. ನಾನೇಕೆ ಬರಲಿ ನಿನ್ನ ಸಂಗಡ? ನಿನ್ನೊಡನೆ ಬಂದು ನಿನ್ನ ಸೂಳೆಯಂತೆ ನಾನಿರಲಾರೆ.'

ಕೃಷ್ಣಪ್ಪನ ಮುಖಕ್ಕೆರಂಗೇರಿತು.'ನೀನು ಹೇಳುವುದು ನ್ಯಾಯವೇ ಇಲ್ಲಿ ನೋಡು, ರಂಗಪ್ಪನಾಣೆ. ಸೂಳೆಗಾರಿಕೆ ಮಾಡಲು ನಿನ್ನ ಬಳಿಗೆ ಬರಬೇಕೆ! ಹಣಕೊಟ್ಟರೆ ನಿನಗಿಂತ ಚೆನ್ನಾಗಿರುವವರು ಸಿಗುತ್ತಾರೆ. ಆದರೆ ನಿನ್ನನ್ನು ಸುಖವಾಗಿಟ್ಟು, ನಿನ್ನ ಮನಸ್ಸಂತೋಷಗೊಳಿಸಿ ನಿನ್ನ ಪ್ರೀತಿ ಸಂಪಾದಿಸಿ, ನಾನೂ ನಿನ್ನಿಂದ ಸುಖಪಡಬೇಕೆಂಬ ಆಸೆ ನನ್ನ

ಮನಸ್ಸಿನಲ್ಲಿ ಮೂಡಿವೆ. ನೀನು ಯಾರನ್ನೂ ಕೇಳಿಕೊಂಡು ಬರದ ತಪ್ಪಿಗಾಗಿ, ಹಗಲು ರಾತ್ರಿಯೆನ್ನದೆ ಕತ್ತೆಯ ಹಾಗೆ ದುಡಿಯುವುದನ್ನು ತಪ್ಪಿಸಬೇಕೆಂದು ನನ್ನ ಇಷ್ಟ. ಏನು ಹೇಳುತ್ತೀಯ, ಬೇಗ ಹೇಳು. ತಡಮಾಡಿದರೆ ನಿನ್ನ ಒಡತಿ ಬಂದು ಬಿಡುತ್ತಾಳೆ. ಪುನಃ ಪ್ರಮಾಣ ಮಾಡಿ ಹೇಳುತ್ತೇನೆ. ನಿನ್ನನ್ನು ಕೆಡಿಸಬೇಕೆಂದು ನನಗೆ ಇಷ್ಟವಿಲ್ಲ. ನಿನ್ನನ್ನು ಈ ತನಕದಿಂದ ಉದ್ಧಾರ ಮಾಡಬೇಕೆಂದೇ ಆಸೆ'

ವಯಸ್ಸಾದಂತಲ್ಲ, ಚಿಕ್ಕಿಗೂ ಮದುವೆಯಾಗಿ ತನ್ನ ಸಂಸಾರದಲ್ಲಿ ತಾನು ಸುಖವಾಗಿರಬೇಕೆಂಬ ಆಸೆ ಬಂದಿತ್ತು. ಆದರೆ ಅದಕ್ಕೆ ಮಾರ್ಗವಿರಲಿಲ್ಲ. ಕಂಚುಗಾರನ ಕಡೆ ನೋಡಿದಳು. ಇನ್ನೂ ಮೂವತ್ತು ವರ್ಷ ವಯಸ್ಸು ಆಗಿರಲಿಲ್ಲ. ಎಣ್ಣೆಗೆಂಪು ಬಣ್ಣ. ಲಕ್ಷಣವಾಗಿದ್ದ ರೂಪ; ಪ್ರಾಯಗಳಿಗೆ ಉಕ್ಕುತ್ತಿದ್ದ ದೇಹಧಾರ್ಢ್ಯ ಇನ್ನೂ ಕಳೆಕೊಟ್ಟಿತ್ತು

ಚಿಕ್ಕಿಗೆ ಅವನ ಸಂಗಡ ಹೋಗಬೇಕೆಂತ ಇಷ್ಟವಾದರೂ ಮನಸ್ಸು ಹಿಂದೆಗೆಯುತಿತ್ತು. ಅಪರಿಚಯಸ್ಥನ ಹಿಂದೆ ಓಡಿ ಹೋಗಿ, ಅವನು ಮೋಸ ಮಾಡಿದರೆ!

ಆಕೆಯ ಮುಖದ ಮೇಲೆ ಆಡಿದ ಅನುಮಾನದ ಚಿನ್ಹೆಯನ್ನು ಕೃಷ್ಣಪ್ಪ ನೋಡಿದ. 'ಯಾಕೆ, ಇನ್ನೂ ಅನುಮಾನವೆ! ರಂಗಪ್ಪನಾಣೆ ಇದೆ. ನಿನ್ನನ್ನು ನಮ್ಮೂರಲ್ಲಿ ಲಗ್ನವಾಗುವವರಿಗೆ ಮುಟ್ಟುವುದು ಕೂಡ ಇಲ್ಲ; ನಮ್ಮನ್ನು ನೋಡಿಲ್ಲವೆ, ನೀನು! ವರ್ಷಾಂತರಗಳಿಂದ ಈ ಪ್ರಾಂತ್ಯ ಸುತ್ತಾಡುತ್ತಿಲ್ಲವೆ? ನಮ್ಮ ಮರ್ಯಾದೆ ಏನಾಗಬೇಕು!' ಎಂದ.

'ಈಗಲೇ ಬರಬೇಕೆ! ಒಡತಿಗೆ ಹೇಳಿ ಬರುತ್ತೇನೆ'

'ತಕ್ಷಣ ಹೊರಡದಿದ್ದರೆ ನಿನ್ನೊಡತಿ ನಿನ್ನನ್ನು ಬಿಟ್ಟಾಳು! ಊರಿಗೆ ಹೋಗೋಣ; ಅಲ್ಲಿ ಲಗ್ನವಾಗೋಣ. ಲಗ್ನವಾದ ಮೇಲೆ ನಮ್ಮ ಗೆಳೆಯರೊಡನೆ ನಿನಗಿಲ್ಲಿಗೆ ಬರಬೇಕಂತ ಮನಸ್ಸಾದರೆ ಬರುವ!

'ನಾನು ಹೋದದ್ದು ತಿಳಿದರೆ ಆಯಮ್ಮ ಸುಮ್ಮನೆ ಬಿಟ್ಟುಬಿಟ್ಟಾಳ!

'ನಾನು ಅದೆಲ್ಲ ನೋಡಿಕೋತೇನೆ. ನೀನು ಗಾಡಿಯಲ್ಲಿ ಕೂಡು. ನಿನ್ನನ್ನು ಕರೆದುಕೊಂಡು ಹೋಗುತ್ತೇನಂತ ಆಕೆಯೊಡನೆ ಹೇಳಿಯೇನು. ಆದರೆ ಆಕೆ ಕೂಗಾಡುತ್ತಾಳೆ. ಈಗಲೇ ಹೆದರಿರುವ ನೀನು, ಆಗ ಧೈರ್ಯವಾಗಿ ಆಕೆಯೊಡನೆ ನೀನು ಹೋಗುವವಳೆಂದು ಹೇಳಬಲ್ಲೆಯಾ! ಗಾಬರಿ

ಯಿಂದ ನಿಂತು ಬಿಡುತ್ತೀಯೆ. ನಡಿ! ಹುಂ! ಹೊತ್ತಾಯಿತು!'

'ನನ್ನ ಶಾಲೆ ತರಬೇಡವೆ!'

'ಶಾಲೆಯೂ ಬೇಡ, ಕಂಬಳಿಯೂ ಬೇಡ. ಹಿರಿಯೂರಿನಲ್ಲಿ ಜಾನಯ್ಯ ಶೆಟ್ಟಿ ಅಂಗಡಿಯಲ್ಲಿ ರೇಷ್ಮೆಪತ್ತಲ ತೆಗೆದು ಕೊಡುತ್ತೇನೆ.'

ಕೃಷ್ಣಪ್ಪ ಅರ್ಧ ಮನಸ್ಸಿನ ಚಿಕ್ಕಿಯ ರಟ್ಟೆಯನ್ನು ಹಿಡಿದುಕೊಂಡು ಗಾಡಿಯವರೆಗೂ ಕರೆದುಕೊಂಡು ಬಂದು, ಗಾಡಿಯಲ್ಲಿ ಸಾಮಾನಿನ ಮಧ್ಯೆ ಜಾಗಮಾಡಿ ತನ್ನ ಕಂಬಳಿ ಹಾಕಿ ಅದರ ಮೇಲೆ ಕೂಡಿಸಿದ.

ಚಿಕ್ಕಿಯು ಅವನನ್ನು ದಿಟ್ಟಿಸಿ ನೋಡುತ್ತಾ 'ನನಗ್ಯಾರೂ ದಿಕ್ಕಿಲ್ಲ, ನೀನೇ ದೇವರೆಂತ ನಿನ್ನ ಹಿಂದೆ ಬರಲು ಹೊರಟು ನಿಂತಿದ್ದೇನೆ. ನನಗೆ ಮೋಸಮಾಡಿ ನನ್ನನ್ನು ಕೆಡಿಸುವುದಿಲ್ಲ ತಾನೆ–'ಎಂದಳು.

ಕೃಷ್ಣಪ್ಪನಿಗೆ 'ಅಯ್ಯೋ' ಎನಿಸಿತು. 'ನೀನು ನಂಬಿದ ದೇವರು ನಿನ್ನನ್ನು ಹಾಳುಮಾಡಲು ಪ್ರಯತ್ನಿಸುವವನ ಮನೆ ಹಾಳುಮಾಡಲಿ ದೇವರ ಹೆಸರು ಹೇಳಿ ಕುಂತಿದೀಯೆ. ದೇವರಾಣೆ ನಿನಗೆ ತೊಂದರೆಕೊಡುವುದಿಲ್ಲ. ಇಂದಿನಿಂದ ನಾನೇ ನಿನಗೆ ದಿಕ್ಕು. ನಿನ್ನನ್ನು ನಾನು ಬಾಳಿಸಿದಂತೆ ದೇವರು ನನ್ನನ್ನು ಬಾಳಿಸಲಿ! ದೇವರ ಮೇಲೆ ಭಾರ ಹಾಕಿ ಆ ದೇವರೇ ನನ್ನನ್ನು ಇಂದು ಇಲ್ಲಿಗೆ ನಿನ್ನನ್ನು ಉಳಿಸಲಿಕ್ಕಾಗಲಿ ಕೆಡಿಸಲಿಕ್ಕಾಗಲಿ ಕರೆತಂದನೆಂದು ನಂಬಿ ಕುಳಿತುಕೊ' ಎಂತ ಹೇಳಿ ಒಂದೆರಡು ಪಾತ್ರೆಗಳಿಂದ ಅವಳನ್ನು ಮರೆಮಾಡಿ, ಹಟ್ಟಿಯ ಮುಂದೆ ಹೋಗಿ ನಿಲ್ಲುವ ವೇಳೆಗೆ ಸರಿಯಾಗಿ, ಮನೆಯಾಕೆ ಬಂದು ನಿಂತಳು.

'ಏನಪ್ಪ, ಹೊತ್ತಾಯಿತೇ'.

'ಇಲ್ಲ ಎಂತ ಹೇಳಲೆ, ಹೊತ್ತಾಯಿತು ಎನಲೆ. ನೀವೇ ನೋಡಮ್ಮ

ನಾಲ್ಕೈದು ದಿವಸಕ್ಕೆ ಮೊದಲೇ ಹಳೆ ಪಾತ್ರೆಗಳನ್ನೆಲ್ಲ ಒಂದು ಕಡೆ ಹಾಕು ಎಂತ ಚಿಕ್ಕಿಗೆ ಹೇಳಿದ್ದೆ. ಅವಳಿಲ್ಲಿ ಮಾಡ್ತಾಳೆ, ಅಗೋ ಮಾರಿ! ಜ್ವರ ಎಂತ ಮಲಗಿಬಿಟ್ಟಳು. ಎಲ್ಲಿ ಹೋದಳು ಅವಳು, ಮುಸರೇನೂ ಅಲ್ಲಿ ಬಿಟ್ಟು!'

'ಯಾರು!'

'ಮುಸುರೆ ತಿಕ್ಕುತ್ತಿರಲಿಲ್ಲವೆ, ಆ ಹೆಂಗಸು.'

'ಓ! ಆಕೆಯ, ನಾನು ಎತ್ತು ನೋಡಿಕೊಂಡು ಬರೋಣ ಎಂತ

ಹೋದಾಗ ಆಕೆ ಎಲ್ಲೋ ಆಚೆ ಹೋದ ಹಾಗೆ ನನಗೆ ಜ್ಞಾಪಕ.'

'ತಡಿಯಪ್ಪ, ಅವಳನ್ನ ಕರೀತೇನೆ ಹಳೆ ಪಾತ್ರೆಗಳನ್ನು ತರಲಿ, ಎಂತ ಹೇಳುತ್ತಾ ಆಕೆ ಬಾಗಿಲ ಕಡೆ ಹೊರಟಳು

ಕೃಷ್ಣಪ್ಪ ಆಕೆಗೆ ಅಡ್ಡ ಬಂದು, 'ಈಗೇನಮ್ಮ, ನೀನು ಪಾತ್ರೆ ತರ್ತೀಯಾ, ನಾನು ಹೊರಡಲೋ' ಎಂದ

ನಿರ್ವಾಹವಿಲ್ಲದೆ ಆಕೆ ಮನೆಯಿಂದ ಹಳೇ ಪಾತ್ರೆ ತಂದುಹಾಕಿದಳು ಕೃಷ್ಣಪ್ಪ ಬಹಳ ಚೌಕಾಸಿ ಮಾಡದೆ, ಐದು ನಿಮಿಷದಲ್ಲಿ ವ್ಯಾಪಾರ ಮುಗಿಸಿ ಗಾಡಿ ಬಿಟ್ಟುಕೊಂಡು ಹೊರಡುತ್ತಾ ಇದ್ದ ಹಾಗೆ ಆಕೆ 'ಚಿಕ್ಕೀ, ಚಿಕ್ಕೀ, ಎಲ್ಲಿ ಹೋದಳೋ ಈ ಹಾಳಾದವಳು' ಎಂತ ಅರಚಲು ಪ್ರಾರಂಭಿಸಿದಳು.

ಎರಬಳ್ಳಿ ದಾಟಿ ಸ್ವಲ್ಪದೂರ ಹೋದಮೇಲೆ ಕೃಷ್ಣಪ್ಪ ಗಾಡಿಯನ್ನು ನಿಲ್ಲಿಸಿ ಸಂದಿಯಲ್ಲಿ ಚಿಕ್ಕಿಯನ್ನು ನೋಡಿದ ಚಿಕ್ಕಿಯೂ ಇವನನ್ನ ನೋಡುತ್ತಿದ್ದಳು

'ಜಾಗ ಇಕ್ಕಟ್ಟೋ ಸರಿಯಾಗಿದೆಯೋ?' 'ಜಾಗ ಹೇಗಾದರೂ ಇರಲಿ, ಮಹಾರಾಯ–ನಿನ್ನ ಧರ್ಮ ಗಾಡಿ ನಿಲ್ಲಿಸಿ ನನ್ನ ಬಿಟ್ಟುಬಿಡಪ್ಪ, ನಾನು ಹೊರಟು ಹೋಗ್ತೇನೆ'

'ನೀನೇನೋ ಹೋದೀಯ, ಆವರೆ ಆ ಯಜಮಾನಿ ನಿನ್ನ ಮನೆ ಸೇರಿಕೋತಾಳೊ? ಹೋಗು, ಅದ್ಯಾರ ಹಿಂದೆ ಹೋಗಿದ್ಯೋ? ಅವನ ಸಂಗಡಲೇ–ಅಂತಾಳೆ ಇನ್ನೇನು ಸ್ವಲ್ಪ ತಡಕೊ ಹಿರಿಯೂರು ಸಿಕ್ತದೆ. ಅಲ್ಲಿ ಬೇಕಾದರೆ ನಮ್ಮ ಯೋಗ್ಯತೆ ವಿಚಾರಿಸಿಕೋ. ಅದು ವರೆಗೆ ನನ್ನ ಮಗ್ಗಲಾಗೇ ಕೂಡು, ಬಾ; ಯಾರಾದರೂ ಬಂದರೆ ಈ ದೊಡ್ಡ ದಂಡೆ ಹಿಂದೆ ಸರೀತಿಯಂತೆ, ಬೇಕಾದರೆ!

ಕೃಷ್ಣಪ್ಪ, ಭಯದಿಂದ ಅದುರುತ್ತಿದ್ದ ಚಿಕ್ಕಿಯನ್ನು ಬಹಳ ನಯವಾಗಿ ಸಮಾಧಾನಪಡಿಸಿದ.

ಹಿರಿಯೂರಿಗೆ ಹೋಗುತ್ತಲೇ ಕೃಷ್ಣಪ್ಪ, ಗಾಡಿಯನ್ನು ಜಾನಯ್ಯ ಶೆಟ್ಟರ ಅಂಗಡಿ ಬಳಿಗೆ ಹೊಡೆದ. ಚಿಕ್ಕಿಯನ್ನು ಕರೆದುಕೊಂಡು ಅವರ ಅಂಗಡಿಯೊಳಕ್ಕೆ ಹೋದ

ಚಿಕ್ಕಿಯನ್ನ ನೋಡಿ ಶೆಟ್ಟರು, 'ಯಾರು ಕೃಷ್ಣಪ್ಪ, ಈ ಅಮ್ಮ?' ಎಂದರು.

ಕೃಷ್ಣಪ್ಪ 'ನಮ್ಮ ಮಾವನ ಮಗಳು' ಅಂದ.

'ಅಂದರೆ? ಎಂತ ಶೆಟ್ಟರು ಕೇಳಿದರು'.

'ನಿಮ್ಮ ಮಾವನ ಮಗಳು ನಿಮಗೇನಾಗಬೇಕು' ಎಂತ ಕೃಷ್ಣಪ್ಪ ಮರುಸವಾಲು ಹಾಕಿದ.

'ಹಾಗೋ, ಹೆಂಡತಿ ಎನ್ನಬಾರದೇ'?

ಚಿಕ್ಕಿಯ ಕಡೆ ನೋಡಿ ಕೃಷ್ಣಪ್ಪ 'ನಿನಗೆ ಬೇಕಾದ ಸೀರೆ ತೆಗೆ ದುಕೋ' ಎಂದ.

ಆಕೆ ಎರಡು ಸಾಧಾರಣವಾದ ಸೀರೆಯನ್ನೂ ಅದಕ್ಕೆ ತಕ್ಕ ರವಿಕೆ ಬಟ್ಟೆಯನ್ನೂ ಆರಿಸಿದಳು. ಕೃಷ್ಣಪ್ಪ ಎರಡು ಭಾರಿ ಕಲಾಬತ್ತಿನ ರೇಶ್ಮೆ ಸೀರೆ, ಕಣಗಳನ್ನೂ ತನಗೆ ಬೇಕಾದ ಜವಳಿಯನ್ನೂ ತೆಗೆದುಕೊಂಡ.

ಓರಿಯೂರು ಸುತ್ತಮುತ್ತ ಹಳ್ಳಿಗಳನ್ನು ಸುತ್ತಿ ಮೂರು ನಾಲ್ಕು ದಿನ ಆದ ಮೇಲ ಕೃಷ್ಣಪ್ಪ ಊರಿಗೆ ಚಿಕ್ಕಿಯೊಡನೆ ಹೋದ.

ಊರಿಗೆ ಹೋದೊಡನೆಯೇ ರಂಗಪ್ಪನ ಪಟಲಾಂ ಎಲ್ಲ ಕೃಷ್ಣಪ್ಪನ ಮನೆಗೆ ಬಂದರು ರಂಗಪ್ಪ ಚಿಕ್ಕಿಯನ್ನು ನೋಡಿ ಈಕೆ ಯಾರು ಎಂದ. ಕೃಷ್ಣಪ್ಪ ಸಮಾಚಾರವೆಲ್ಲ ಹೇಳಿದ. ರಂಗಪ್ಪ ತಕ್ಷಣ ಊರಿನ ದೊಡ್ಡ ಮನುಷ್ಯರಿಗೂ ಗೌಡನಿಗೂ ಶಾನುಭೋಗರಿಗೂ ಹೇಳಿಕಳಿಸಿದ. ರಂಗಪ್ಪನೇ ನಿಂತ. ಒಳ್ಳೆ ಮುಹೂರ್ತ ನೋಡಿ ಲಗ್ನವೂ ಆಗಿಯೇ ಹೋಯಿತು.

ಲಗ್ನವಾದ ಎಂಟು ಹತ್ತು ದಿನ ಕೃಷ್ಣಪ್ಪ ಎಲ್ಲೂ ಹೊರಡಲಿಲ್ಲ. ಆದರೆ ಸುಮ್ಮನೆ ಕೂತರೆ ವ್ಯಾಪಾರದ ಗತಿಯೇನು. ಪುನಃ ಊರು ಬಿಟ್ಟು ಹೊರಡುವ ಮೊದಲು ಗೌಡನನ್ನೂ ಶಾನುಭೋಗರನ್ನೂ ಕರೆದು, ದಿಕ್ಕಿಲ್ಲದ ಒಬ್ಬ ಪರದೇಶಿಯನ್ನು ಬಾಳಿಸಬೇಕೆಂತ ತಾನು ತಂದಿರುವುದಾಗಿಯೂ ಆಕೆಯ ಉದ್ಧಾರ ಊರಿಗೆ ಯಜಮಾನರಾದ ಅವರ ಕೈಯ್ಯಲ್ಲಿದೆಯೆಂದೂ ತಾನಿಲ್ಲದ ವೇಳೆ ಆಕೆಗೆ ಸಹಾಯ ಮಾಡಬೇಕೆಂದೂ-ಕೇಳಿಕೊಂಡ.

ಹೀಗೆಯೇ ನಾಲ್ಕಾರು ತಿಂಗಳು ಕಳೆಯಿತು. ಸೂರ್ಯ ಹುಟ್ಟುವುದಕ್ಕೆ ಮೊದಲೇ ಎದ್ದು, ರಾತ್ರಿ ಎಲ್ಲರೂ ಮಲಗಿದ ಮೇಲೂ ದುಡಿಯುತ್ತಿದ್ದರೂ ಸಹ ಬೈಸಿಕೊಳ್ಳುತ್ತಿದ್ದ ಚಿಕ್ಕಿಗೆ ಈಗ ಬೈಗಳು ತಪ್ಪಿ, ತನ್ನದೇ ಒಂದು ಮನೆ ಅಂತ ಆಗಿ, ತಾನು ಅದಕ್ಕೆ ಯಜಮಾನಿ ಅಂತ ಅನ್ನಿಸಿಕೊಂಡು ಓಡಾಡುತ್ತ ಇದ್ದುದರಿಂದಲೂ, ಆಗಿಂದಾಗ್ಗೆ ಹಳ್ಳಿ ಹಳ್ಳಿ ಅಲೆ

ದರೂ ಅದರಿಂದ ಒಂದು ತರಹ ಸುಖವೇ ದೊರೆಯುತ್ತಿದ್ದುದರಿಂದಲೂ ಚಿಕ್ಕಿಗೆ ಸ್ವರ್ಗ ಸುಖ ಎಂಥದು ಎಂತ ತಿಳಿಯದಿದ್ದರೂ ತಾನು ಸ್ವರ್ಗಸುಖಕ್ಕಿಂತ ಹೆಚ್ಚಿನ ಸುಖ ಅನುಭವಿಸುತ್ತಿದ್ದೇನೆ ಎಂತ ಭಾವನೆಯಾಗುತ್ತಿತ್ತು.

ಹೀಗೆಯೇ ಸುಮಾರು ಒಂದು ವರ್ಷ ಕಳೆದುಹೋಯಿತು.

ಒಂದು ಸಲ ಇಬ್ಬರೂ ಗಾಡಿಯಲ್ಲಿ ಚಳ್ಳಕೆರೆಗೆ ಹೊರಟರು. ಅಲ್ಲಿಗೆ ಹೋಗುತ್ತಿರುವಾಗ ದಾರಿಯಲ್ಲಿ ಕೃಷ್ಣಪ್ಪ ಆ ಕಡೆ ಎಂಟುದಿನ ಇರಬೇಕಾಗ ಬಹುದು ಎಂತ ಹೇಳುತ್ತಿದ್ದವನು, ಚಳ್ಳಕೆರೆಯಲ್ಲಿ ಒಬ್ಬ ಶೆಟ್ಟರ ಅಂಗಡಿಗೆ ಹೋಗಿ ಬೇಗ ಹಿಂತಿರುಗಿ ಬಂದು, ಗಾಡಿ ಹೊಡಕೊಂಡು ಹಿಂತಿರುಗಿ ಬಿಟ್ಟ.

ಬಣ್ಣಗೆಟ್ಟ ಅವನ ಮುಖ, ತಕ್ಷಣ ಬಂದು ಗಾಡಿ ತಿರುಗಿಸಿದ್ದು, ಅವನ ಮೌನ, ಜೋರು ಜೋರಾಗಿ ಗಾಡಿ ಹೊಡೆದದ್ದು ಇದೆಲ್ಲ ಅವಳಿಗೆ ಆಶ್ಚರ್ಯವನ್ನುಂಟುಮಾಡಿತು. ಆದರೆ ಅವನು ಮೌನವಾಗಿದ್ದುದರಿಂದ ಅವಳೂ ಮಾತನಾಡಲು ಹಿಂತೆಗೆದಳು.

ದುರ್ಗಕ್ಕೆ ಬರುವ ವರೆಗೂ ಕೃಷ್ಣಪ್ಪ ಮಾತನ್ನೇ ಆಡಲಿಲ್ಲ. ಅಲ್ಲಿಗೆ ಬಂದಾಗ 'ಇಲ್ಲಿ ನೋಡು ಚಿಕ್ಕಿ, ನಿಂಗೆ ನಾನೇನೂ ಮೋಸಮಾಡಿಲ್ಲ ತಾನೆ; ನಾನು ಏನು ಹೇಳಿದರೂ ನಂಬುತ್ತೀಯ ತಾನೆ? ಏನು ಬಂದರೂ ಭಯ ಪಡದೆ ಧೈರ್ಯವಾಗಿರಬಲ್ಲೆಯಾ?' ಎಂದ.

'ಯಾಕೆ ಹೀಗೆ ಮಾತನಾಡುತ್ತೀ, ನನಗೆ ಹೇಳಬಾರದಾ; ಮನಸ್ಸಿಗೆ ಗಾಬರಿಯಾಗ್ತದೆ.'

'ಧೈರ್ಯವಾಗಿರಬಲ್ಲೆಯಾ ಎಂದರೆ ಗಾಬರಿಯಾಗ್ತದೆ ಅಂತೀಯಲ್ಲ'

'ನೀನು ಧೈರ್ಯವಾಗಿರಬೇಕು, ಅಂದರೆ ಇರ್ತೇನೆ.'

'ನಾನು ಇರಬೇಕು ಅಂತೇನೆ. ಯಾವಾಗಲೂ ಎದೆಗೆಡಬಾರದು; ನಂಬಿಕೆ ಬಿಡಬಾರದು.'

ಚಿಕ್ಕಿ 'ಊಂ' ಎಂದವಳೇ ಕೃಷ್ಣಪ್ಪನನ್ನು ತಬ್ಬಿಕೊಂಡು, 'ಯಾಕೆ ಹೀಗಾಡ್ತೀರಿ, ನಂಗೆ ಕೈಕಾಲೇ ಆಡದಲ್ಲ,' ಎಂದಳು.

ಕೃಷ್ಣಪ್ಪ ಅವಳನ್ನಪ್ಪಿಕೊಂಡು, 'ನೋಡು ಧೈರ್ಯಗೆಡಬಾರದು, ಎಂತ ಹೇಳ್ತಿದ್ದರೂ ಕೈಕಾಲು ಆಡದು ಅಂತೀಯಾ; ಇನ್ನು ನಂಬಿಕೇನೂ ಇಲ್ಲದ ಹಾಗಾದರೆ!' ಎಂದ.

ಕೃಷ್ಣಪ್ಪ ಇನ್ನು ಹೆಚ್ಚು ಹೇಳಲಿಲ್ಲ. ಧೈರ್ಯಗೆಟ್ಟರೆ, ನಂಬದಿದ್ದರೆ ಇನ್ನು ಗತಿಯೇನು ಎಂತ ಚಿಕ್ಕಿ ಧೈರ್ಯಮಾಡಿಕೊಂಡಳು.

ಆ ಸಂಜೆ ಕೃಷ್ಣಪ್ಪ ತನ್ನ ದುಡ್ಡಿನ ಚೀಲವನ್ನು ಸೊಂಟದಿಂದ ಬಿಚ್ಚಿ, ಚಿಕ್ಕಿಗೆ 'ದುಡ್ಡು ಎಣಿಸು' ಎಂದ. ಆಕೆಗೆ ತಾನು ಜಾನಯ್ಯ ಶೆಟ್ಟರ ಬಳಿ ಮತ್ತು ಊರ ಗೌಡ ಶ್ಯಾನುಭಾಗರ ಬಳಿ ಇಟ್ಟಿದ್ದ ಲೇವಾದೇವಿ ವಿಚಾರ ಸಹ ತಿಳಿಸಿದ. ಮತ್ತು ಅವರನ್ನು ಕೇಳಿದರೆ ಹಣ ಸಹ ಕೊಡುತ್ತಾರೆ ಎಂತ ತಿಳಿಸಿ, ತನಗಿದ್ದ, ಆಕೆಗೆ ಸರಿಯಾಗಿ ತಿಳಿಯದಿದ್ದ ಪ್ರತಿಯೊಂದು ಆದಾಯವೆಚ್ಚದ ಬಾಬುಗಳನ್ನೂ ಆಕೆಗೆ ತಿಳಿಸಿದ. ಆ ರಾತ್ರಿ ಅವರು ಮಲಗಿಕೊಳ್ಳುವ ಮೊದಲು, ತನ್ನ ಯಾವದ್ವಿಶಿಷ್ಟ ಜಮಾಖರ್ಚಿನ ವಿಚಾರ ಆಕೆಗೆ ತಿಳಿಸುತ್ತಿದ್ದಾನೆಂತ ಆಕೆಗೆ ತಿಳಿಯದ ಹಾಗೆಯೇ, ಆದರೆ ಸಮಸ್ತವೂ ಮುಂದಟ್ಟಾಗುವಂತೆ ತಿಳಿಸಿದ.

ಆ ರಾತ್ರಿ ಎಂದಿನ ರಾತ್ರಿಯಂತೆಯೇ ಚಿಕ್ಕಿ ಹಸುಳೆಯಂತೆ ನಿದ್ದೆ ಮಾಡಿದಳು. ಆದರೆ ಕೃಷ್ಣಪ್ಪ ಬೆಳಗಿನ ಜಾವದ ವರೆಗೂ ಹಾಸಿಗೆಯ ಮೇಲೆ ಹೊರಳಾಡಿ, ದೀಪ ಉರಿಸಿ 'ಒಂದು ಕಾಗದ ಬರೆದು' ಆ ಕಾಗದ ಅವಳಿಗೆ ಕಾಣುವಂತಹ ಸ್ಥಳದಲ್ಲಿಟ್ಟು, ನಿಶ್ಶಬ್ದವಾಗಿ ಹೊರಟುಹೋದ.

ಚಿಕ್ಕಿ ಬೆಳಿಗ್ಗೆದ್ದು ನೋಡುತ್ತಾಳೆ-ಗಂಡ ಇಲ್ಲ! ಬದಲು ಕಾಗದವಿದೆ! ಕಾಗದದ ಒಕ್ಕಣೆ ಹೀಗಿತ್ತು.

'ಚಿಕ್ಕಿ, ನಿನ್ನನ್ನೂ ಬಿಟ್ಟು ಹೋಗಬೇಕಾಗಿದೆ. ಸದ್ಯಕ್ಕೆ ನನಗೆ ತೋರುತ್ತಿರುವುದು ಅದೊಂದೇ ದಾರಿ. ನಿನ್ನನ್ನು ಬಿಟ್ಟಿರಲು ಸಾಧ್ಯವಿಲ್ಲವಾದುದರಿಂದ ಬರುವುದಕ್ಕೆ ಸಾಧ್ಯವಾದೊಡನೆ ಬರುತ್ತೇನೆ. ನನ್ನ ವೈವಾಟೆಲ್ಲ ನಿನಗೆ ರಾತ್ರಿ ತಿಳಿಸಿದ್ದೇನೆ.

'ಊರಿಗೆ ಗಾಡಿ ಹೊಡೆದುಕೊಂಡು ಹೋಗು. ಶ್ಯಾನುಭೋಗರಿಗೋ, ಗೌಡನಿಗೋ ರಂಗಪ್ಪನಿಗೋ ಯಾರಿಗೆ ತಿಳಿಸಿದರೂ, ಎತ್ತು ಗಾಡಿ ಮಾರಿ ಹಣ ಕೊಡಿಸುತ್ತಾರೆ. ಅದನ್ನಿಟ್ಟುಕೊಂಡರೆ ನೀನು ಸುಧಾರಿಸಲಾರೆ. ಊರಲ್ಲಿ ರಂಗಪ್ಪ ಗುತ್ತಿಗೆ ಬಾಬ್ತು ಕಾಳು ತಂದುಹಾಕುತ್ತಾನೆ. ನಾಲ್ಕು ದಿನ ಕಾಲ ಹಾಕು; ನನ್ನ ಮರೆಯಬೇಡ. ಧೈರ್ಯ ಬಿಡಬೇಡ. ನಂಬಿಕೆ ಕೆಡದಿರಲಿ'.

ನಿನ್ನ ಕೃಷ್ಣಪ್ಪ'.

ಹೊಟ್ಟೆಗೆ ಹಿಟ್ಟಿಲ್ಲದ ಬೀದಿಯ ಭಿಕಾರಿಯನ್ನು ತಂದು, ಮನೆಗೆ ಯಜಮಾನಿಯನ್ನಾಗಿ ಮಾಡಿ, ಅಕ್ಷರ ಸಹ ಕಲಿಸಿ, ಸುಖ ಕೊಟ್ಟಿದ್ದ ಕೃಷ್ಣಪ್ಪನನ್ನು ಮರೆತಂವೇ, ಆತನ ಮೇಲೆ ತನಗೆ ಅನುಮಾನ ಬಂದಂವೇ, ತನ್ನ ಜೀವ ಹಾರಿಹೋಗಲಿ-ಎಂತ ಚಿಕ್ಕಿ ಅಂದುಕೊಂಡು, ಕಾಗದವನ್ನೂ ಹಣದ ಚೀಲವನ್ನೂ ಭದ್ರವಡಿಸಿದಳು. ಆತನು ಹೇಳದೆ ಹೊರಟು ಹೋಗಿದ್ದುದರಿಂದ,ಆಕೆಗೆ ಹುಚ್ಚು ಹಿಡಿಯುವುದೊಂದು ಬಾಕಿಯಾಗಿತ್ತು. ಆದರೆ ಧೈರ್ಯಗೆಡಬೇಡವೆಂದು ಗಂಡನ ಆಣತಿಯಾಗಿರಲಿಲ್ಲವೇ!

ಸಂತೆಯ ಗಾಡಿಗಳ ಸಂಗಡ ತಾನು ಹಿರಿಯೂರಿಗೆ ಬಂದು, ಜ್ಞಾನಯ್ಯ ಶೆಟ್ಟರ ಅಂಗಡಿಗೆ ಹೋಗಿ,ಚೀಲದಲ್ಲಿದ್ದ ಹಣವೆಲ್ಲ ಅವರಿಗೆ ಕೊಟ್ಟು, ಗಂಡ ಬಳ್ಳಾರಿಗೆ ಹೋಗಿದ್ದಾನೆಂತ ಹೇಳಿ, ತಾನು ಅವರಿಗೆ ಕೊಟ್ಟಿದ್ದ ಹಣಕ್ಕೂ ಹಿಂದೆ ತನ್ನ ಗಂಡ ಕೊಟ್ಟಿದ್ದ ಒಟ್ಟು ಹಣಕ್ಕೂ ಒಂದು ರಸೀದಿ ಬೇಕಂತ ಹೇಳಿ, ರಸೀದಿಯನ್ನು ಪಡೆದು ಭದ್ರವಾಗಿಟ್ಟುಕೊಂಡಳು. ಹಳ್ಳಿಗೆ ಹೋಗಿ ತಮ್ಮ ಜಮೀನು ಗುತ್ತಿಗೆ ಮಾಡುವ ರಂಗಪ್ಪನ ಮಗ ಹತ್ತುವರ್ಷದ ಗಂಗನನ್ನು ತನ್ನ ಗಾಡಿಹೊಡೆಯುವ ಕೆಲಸಕ್ಕೆ ನಿಯಮಿಸಿಕೊಂಡಳು ಗಾಡಿ ಹೊಡೆಯುವುದಕ್ಕೆಂದೇ ರಂಗಪ್ಪನಿಗೆ ತಿಳಿಸಿದ್ದರೂ ವಾಸ್ತವ್ಯವಾಗಿ ಒಬ್ಬಂಟಿಗಳಾದ ತನ್ನ ಸಹಾಯಕ್ಕಾರೆಂದೇ ಅವನನ್ನು ಗೊತ್ತುಮಾಡಿಕೊಂಡುದು

ಅಲ್ಪಕಾಲದಲ್ಲಿಯೇ ತನ್ನ ಗಂಡನಷ್ಟೇ ಜೋರಾಗಿ ವ್ಯಾಪಾರ ನಡೆಸುತ್ತಿದ್ದೇನಂತ ಚಿಕ್ಕಿಗೆ ತಿಳಿಯಿತು. ಅವಳ ಗಂಡ ತಾನು ಹೋಗುತ್ತಿದ್ದ ಊರುಗಳಿಗೆಲ್ಲ ಅವಳನ್ನೂ ಕರೆದುಕೊಂಡು ಹೋಗಿದ್ದುದರಿಂದ,ಅವಳಿಗೆ ಈ ವಿಚಾರದಲ್ಲಿ ಕಷ್ಟವೇನೂ ಉಂಟಾಗಲಿಲ್ಲ. ಎಷ್ಟಾದರೂ ಹೆಂಗಸರು ಗಂಡಸರಿಗಿಂತ ಸೂಕ್ಷ್ಮಬುದ್ಧಿಯುಳ್ಳವಳು. ಪಾತ್ರೆ ಪರಡಿಗಳ ಜೊತೆಗೆ ಹೆಂಗಸರಿಗೆ ಬೇಕಾಗುವಂಥ ಸೂಜಿ, ದಾರ, ಗುಂಡಿ, ಪಿನ್ನು, ಟೇಪು, ಇಂತಹ ಸಣ್ಣ ಪುಟ್ಟ ಸಾಮಾನನ್ನೂ ತೆಗೆದುಕೊಂಡು ಹೋಗುತ್ತಿದ್ದುದರಿಂದ, ಇವಳಿಗಾಗಿ ಹಳ್ಳಿಗರು ಕಾದಿರುತ್ತಿದ್ದರು.

ಚಿಕ್ಕಿ ಎಷ್ಟಾದರೂ ಹೆಂಗಸು. ಸಂಜೆಯಾದ ಮೇಲೆ ಪ್ರಯಾಣ ಮಾಡುತ್ತಲೇ ಇರಲಿಲ್ಲ. ಜೊತೆ ಗಾಡಿಗಳಿರದಿದ್ದರೆ ಯಾವ ಊರಲ್ಲಿ ಸಂಜೆಯಾದರೆ ಅದೇ ಊರ ಚಾವಡಿಯಲ್ಲಿ ರಾತ್ರೆ ಕಾಲ ಕಳೆಯುತ್ತಿದ್ದಳು.

ಸಾಮಾನ್ಯವಾಗಿ ತನ್ನ ಪ್ರತಿದಿನದ ಲೇವಾದೇವಿಗೆ ಎಷ್ಟು ಹಣ ಬೇಕೋ ಅಷ್ಟನ್ನು ಮಾತ್ರ ಸಂಗಡ ಒಯ್ಯುತ್ತಿದ್ದಳು. ಹಣ ಹೆಚ್ಚಿದರೆ ತಕ್ಷಣ ಹಿರಿಯೂರಿಗೆ ಹೋಗಿ ಜಾನಯ್ಯ ಶೆಟ್ಟರ ಬಳಿಯೋ, ಊರಲ್ಲಿ ಶ್ಯಾನುಭೋಗರ ಬಳಿಯೋ ಕೊಟ್ಟು ಬಿಡುತ್ತಿದ್ದಳು. ಕೊನೆ ಕೊನೆಗೆ ಪೋಸ್ಟಾಫೀಸಿನಲ್ಲಿ ಹಣ ಇಡುವುದಕ್ಕೆ ಕಲಿತು, ಅವರುಗಳಿಗೂ ಅವಳ ಮೇಲೆ ಅನುಮಾನ ಬಾರದ ರೀತಿಯಲ್ಲಿ, ಅವರಲ್ಲಿದ್ದ ದುಡ್ಡಿನಲ್ಲಿ ಸ್ವಲ್ಪಮಾತ್ರ ಬಿಟ್ಟು ಉಳಿದುದನ್ನೆಲ್ಲಾ ತೆಗೆದುಕೊಂಡು ಪೋಸ್ಟಾಫೀಸಿನಲ್ಲಿಟ್ಟಳು. ಇನ್ನು ಸಲ್ಪ ಹಣವನ್ನು ಊರಿನಲ್ಲಿಯೇ ಒಂದೆಡೆ ಹುಗಿದಿಟ್ಟಳು.

ಅಂತೂ ಯಾವ ವಿಧವಾದ ತಾಪತ್ರಯವೂ ಇಲ್ಲದಂತೆ ಗಂಡನ ವೃತ್ತಿಯನ್ನು ಮುಂದುವರಿಸಿ, ಗಂಡನ ಸಮೀಪದಲ್ಲಿಲ್ಲದ ಒಂದು ಚಿಂತೆಯನ್ನುಳಿದರೆ, ಬೇರೆ ಚಿಂತೆಯಿಲ್ಲದೆ ಆವನ ಬರವನ್ನೇ ಕಾಯುತ್ತ, ಆತನ ಅಸಲನ್ನು ಹೆಚ್ಚುಮಾಡುತ್ತಾ ಕಾಲಕಳೆಯುತ್ತಿದ್ದಳು

ಮೂರು ವರ್ಷಗಳು ಕಳೆದುಹೋದುವು! ಈ ಕಾಲದಲ್ಲಿ ಕೃಷ್ಣಪ್ಪನಿಂದ ಪ್ರತಿ ತಿಂಗಳೂ ತಪ್ಪದೆ ಜಾನಯ್ಯಶೆಟ್ಟರ ವಿಳಾಸಕ್ಕೆ ಇವಳಿಗಾಗಿ ಹಣ ಬರುತ್ತಿತ್ತು. ಒಂದೊಂದು ಸಲ ಒಂದೊಂದು ಊರಿನಿಂದ ಬರುತ್ತಿತ್ತು ವಿಳಾಸವಿಲ್ಲದುದರಿಂದ ಕಾಗದ ಎಲ್ಲಿಗೆ ಬರೆಯಬೇಕೆಂದು ಚಿಕ್ಕಿಗೆ ಗೊತ್ತಾಗುತ್ತಿರಲಿಲ್ಲ ಎಲ್ಲಿಗೆ ಬರೆಯಬೇಕು ಎನ್ನುವ ವಿಚಾರವಾಗಿ ಯಾರನ್ನೂ ಕೇಳಲು ಅವಳು ಸಿದ್ಧಳಾಗಿರಲಿಲ್ಲ ಯಾಕೆಂದರೆ ಗಂಡ ತಮ್ಮೂರಿಗೆ ಹೋಗಿದ್ದಾನೆಂತ ಆಕೆ ಎಲ್ಲರಿಗೂ ಹೇಳಿದ್ದಳೇ ಹೊರತು, ತನ್ನ ಗಂಡ ಅಜ್ಞಾತವಾಸದಲ್ಲಿರುವನೆಂತ ಆಕೆ ಯಾರಿಗೂ ಹೇಳಿರಲಿಲ್ಲ. ಅಲ್ಲದ ಜನಗಳಿಗೆ ತನ್ನ ಮೇಲಾಗಲಿ ತನ್ನ ಗಂಡನ ಮೇಲಾಗಲಿ ಅನುಮಾನ ಬರಕೂಡದೆಂಬುದೇ ಆಕೆಯ ಆಶೆಯಾಗಿತ್ತು.

ಈ ಹಣವೂ ಸಹ ಜಾನಯ್ಯಸೆಟ್ಟರ ಬಳಿ ಬೆಳೆಯುತ್ತಿತ್ತು

ಇಷ್ಟು ದೀರ್ಘಕಾಲ ಗಂಡನು ತನ್ನ ಕಡೆ ತಿರುಗಿ ನೋಡದಿದ್ದರೂ ಸಹ ಚಿಕ್ಕಿ ಗಂಡನ ಮೇಲೆ ಕೋಪಗೊಳ್ಳಲಿಲ್ಲ. ಧೈರ್ಯ ಬಿಡಲಿಲ್ಲ ಅನುಮಾನಪಡಲಿಲ್ಲ. ನಂಬಿಕೆ ಬಿಡಲಿಲ್ಲ. ಯಾವ ಸಂಬಂಧವೂ ಇಲ್ಲದ, ಪರದೇಶಿಯಾದ ತನ್ನನ್ನುದ್ಧಾರಮಾಡಿದ ತನ್ನ ಗಂಡನು ಅಕಾರಣವಾಗಿ ತನ್ನನ್ನು ಮದುವೆಯಾದ ಮೇಲೆ ತ್ಯಜಿಸಿ, ಊರಲ್ಲಿನ ಆಸ್ತಿಪಾಸ್ತಿಗಳನ್ನೂ

ಬಿಟ್ಟು, ದೇಶತ್ಯಾಗ ಮಾಡಿ ಹೊರಟುಹೋಗುವವನಲ್ಲವೆಂದು ಆಕೆ ಅರಿತಿದ್ದಳು. ಯಾವುದೋ ಮಹತ್ತರವಾದ ಕಾರಣವಿರಬೇಕು; ಆ ಕಾರಣ ಮುಗಿದ ಮೇಲೆ ಹೇಳದೆ ಹೊರಟುಹೋದವನು ಹೇಳದೆಯೇ ತನ್ನನ್ನು ನೋಡಲು ಬಂದೇ ಬರುತ್ತಾನೆಂದು ಆಕೆ ನಂಬಿದ್ದಳು. ಈ ನಂಬಿಕೆ ಇದ್ದುದರಿಂದಲೇ ಗಂಡನ ವೃತ್ತಿಯನ್ನು ಅಭಿವೃದ್ಧಿ ಮಾಡವೆ, ಆತನ ಆಸ್ತಿಯಿಂದ ಜೀವಿಸುವುದು ಆಕೆಗೆ ಸರಿತೋರಲಿಲ್ಲ. ಏಕಾಕಿಯಾಗಿ, ಹಣ, ಸಾಮಾನುಗಳೊಡನೆ ಊರೂರು ತಿರುಗಲು ಆ ಯುವತಿ ಎಷ್ಟು ಧೈರ್ಯಮಾಡಿರಬೇಕು! ಇಂದಲ್ಲ, ನಾಳೆಯಾದರೂ ಆತನು ಬಂದೇ ಬರುತ್ತಾನೆಂಬ ನಿರೀಕ್ಷಣೆಯ ಮೇಲೆ ಆತನನ್ನೇ ಇದಿರುನೋಡುತ್ತ ಅವನಿಗಾಗಿ ಹಣವನ್ನು ಕೂಡಿಡುತ್ತ ತನಗೆ ಯಾರೂ ದಿಕ್ಕಿಲ್ಲದಿದ್ದ ಕಾಲದಲ್ಲಿ ಮನೆಮಠ ಆಸ್ತಿಪಾಸ್ತಿಗಳಿಲ್ಲದ ಕಾಲದಲ್ಲಿ, ತನಗೆ ಸಮಸ್ತವನ್ನೂ ಕೊಟ್ಟು ಮಾನ ಸಂರಕ್ಷಣೆ ಮಾಡಿದ ಕೃಷ್ಣಪ್ಪನೇ ತನ್ನ ಕೃಷ್ಣನೆಂದು ಧ್ಯಾನಿಸುತ್ತಿದ್ದಳು. ಎಷ್ಟೋ ಬಾರಿ ದೂರದಲ್ಲಿ ಬರುತ್ತಿದ್ದ ವ್ಯಕ್ತಿಯೊಂದನ್ನು ಕೃಷ್ಣಪ್ಪನೆಂದೇ ಭ್ರಮಿಸಿ ಸಮೀಪಕ್ಕೆ ಆ ವ್ಯಕ್ತಿ ಬಂದ ಮೇಲೆ ತನ್ನದು ಬರಿಯ ಭ್ರಾಂತಿಯೆಂದು ತೋರಿದೊಡನೆ, ಕೃಷ್ಣಪ್ಪನ ವಿರಹದಿಂದ ಉಂಟಾದ ಉದ್ವೇಗವನ್ನು ತಾಳಲಾರದೆ, ಮನಃಪೂರ್ತಿಯಾಗಿ ನೀರವನಾಗಿ ಅತ್ತು, ಪುನಃ ತಾನೇ ಮನಸ್ಸಮಾಧಾನ ಮಾಡಿಕೊಂಡು, ಕೃಷ್ಣ ಬಂದೇ ಬರುತ್ತಾನೆಂಬ ದೃಢ ನಂಬಿಕೆಯಿಂದ ರಾಧೆಯು ಕಾಯುತ್ತಿದ್ದಂತೆ ಕಾಯುತ್ತಿದ್ದಳು.

ಮೂರು ವರ್ಷಗಳು ಕಳೆದಿದ್ದರೂ ಕೃಷ್ಣಪ್ಪನ ಸುಳಿವೇ ಇರಲಿಲ್ಲ! ಒಂದು ದಿನ ಮಧ್ಯಾಹ್ನ ಸುಮಾರು ೩ ಗಂಟೆ ಇರಬಹುದು. ಹಿರಿಯೂರಿನಿಂದ ಊರಿಗೆ ಹೋಗಲು ಚಿಕ್ಕಿಯೇ ಗಾಡಿ ಹೊಡೆದುಕೊಂಡು ಹೋಗುತ್ತಿದ್ದಳು. ಗಂಗನು ಆದಿವಾಲದಲ್ಲಿ ಬೀಡಿಕೊಳ್ಳಲು ಹೋಗಿದ್ದವನು ಇನ್ನೂ ಬಂದಿರಲಿಲ್ಲ. ಕೃಷ್ಣಪ್ಪನು ಈಗ ಬಂದರೆ ಎಂತ ಚಿಕ್ಕಿ ಮನಸ್ಸಿನಲ್ಲೇ ಹಂಬಲಿಸುತ್ತಾ ಬಾಹ್ಯಪ್ರಪಂಚವನ್ನೇ ಮರೆತು ಮೆಲ್ಲನೆ ಗಾಡಿಯನ್ನು ಹೊಡೆದುಕೊಂಡು ಹೋಗುತ್ತಿದ್ದಳು.

ಆಗ ಗಾಡಿಯ ಗಡಗಡ ಶಬ್ದವನ್ನೂ ಮೀರಿಸಿ, ತನ್ನನ್ನು 'ಚಿಕ್ಕೀ ಚಿಕ್ಕೀ,' ಎಂತ ಗಾಡಿಯ ಹಿಂದುಗಡೆ ಯಾರೋ ಕೂಗಿದಂತಾಗಲು, ತಲೆ ತಿರುಗಿಸಿ ನೋಡುತ್ತಾಳೆ!

ಕೃಷ್ಣಪ್ಪ ಓಡಿಯೋಡಿ ಬರುತ್ತಿದ್ದಾನೆ!

ಗಾಡಿನಿಲ್ಲಿಸಿ ಚಿಕ್ಕಿ ಸಂತೋಷದಿಂದ ಸ್ತಂಭಿತಳಾದಳು ತಾನು ಕನಸನ್ನೇ ಕಾಣುತ್ತಿದೇನೆಯೋ, ಅಥವ ಗಂಡನನ್ನು ನಿಜವಾಗಿ ಕಾಣುತ್ತಿದ್ದೇನೆಯೋ, ಅದು ಕನಸಾಗದೆ ನಿಜವೇ ಆಗಿರಲಿ, ಎಂತ ದೇವರಲ್ಲಿ ಪ್ರಾರ್ಥಿಸುತ್ತ ಕುಳಿತಳು.

ಓಡಿಬರುತ್ತಿದ್ದ ಶಬ್ದ ಇನ್ನೂ ಹತ್ತಿರ ಬಂತು ಗಾಡಿಗೆ ಸರಿಯಾಗಿ ಬಂದು ನಿಂತಿತು ತಲೆಯೆತ್ತಿ ನೋಡುತ್ತಾಳೆ-ಕೃಷ್ಣಪ್ಪನೇ!

'ಬಂದೆಯಾ, ಎಷ್ಟು ದಿನ ಕಾಯಿಸಿದೆ?' ಎಂತ ಹೇಳಿ, ಚಿಕ್ಕಿ ಮೂರ್ಛೆ ಹೋಗುವುದರೊಳಗಾಗಿ, ಆಜಾನುಬಾಹುವಾದ ಕೃಷ್ಣಪ್ಪ ಅವಳನ್ನು ಆತುಕೊಂಡು, ರಸ್ತೆಯ ಪಕ್ಕದಲ್ಲಿ ತೊಡೆಯ ಮೇಲೆ ಮಲಗಿಸಿಕೊಂಡು, ಶೈತ್ಯೋಪಚಾರಮಾಡಿದ

ಸ್ವಲ್ಪ ಹೊತ್ತಾದ ಮೇಲೆ ಚಿಕ್ಕಿಯು ಮೆಲ್ಲನೆ ಕಣ್ಣು ತೆರೆದು, 'ಕೃಷ್ಣ, ಬಂದೆಯಾ', ಎಂದಳು.

'ಚಿಕ್ಕೀ, ಚಿಕ್ಕೀ'

'ಉಂ ಕೊನೆಗೂ ಬಂದೆಯಲ್ಲ, ಧೈರ್ಯಗೆಡಲಿಲ್ಲ; ನಂಬಿಕೆ ಬಿಡಲಿಲ್ಲ'

'ಚಿಕ್ಕೀ, ನನ್ನ ಚಿಕ್ಕೀ, ನನಗೆಲ್ಲ ಗೊತ್ತು ಎಲ್ಲ ವಿಚಾರಿಸಿದೆ, ಜಾನಯ್ಯ ಶೆಟ್ರು ಎಲ್ಲ ಹೇಳಿದರು ನಿನಗೆ ಈ ಕಷ್ಟ ಕೊಟ್ಟದ್ದು ತಪ್ಪಾಯಿತು ಕೃಷ್ಣಪ್ಪ ಚಿಕ್ಕಿಯ ಕೆನ್ನೆಗೆ ತನ್ನ ಕನ್ನೆ ತಗಲಿಸಿ ಬಿಕ್ಕಿ ಬಿಕ್ಕಿ ಅತ್ತ

'ಅಳಬೇಡ. ಹೆಣ್ಣಾದ ನಾನೇ ಅಳಲಿಲ್ಲ ನನಗಾಗಿ ನೀನು ಅಳಬೇಕೆ!'

'ನನ್ನ ಪುಣ್ಯದಿಂದ ನೀನು ನಂಗೆ ಸಿಕ್ಕಿದ ನಿನಗೆ ಲಾಯಖ್ಖಾದವನಲ್ಲ, ನಾನು. ದುರ್ಗದಲ್ಲಿ ನನ್ನ ಮೇಲೆ ಏನೇನೋ ಹೇಳಿರಬೇಕಲ್ಲಾ'

ಈ ಮಾತು ಕೇಳಿ ಚಿಕ್ಕಿ ಬೆಚ್ಚಿಬಿದ್ದಳು ದುರ್ಗದಲ್ಲಿ ನಂದಯ್ಯ ಶೆಟ್ಟರ ಅಂಗಡಿಯಲ್ಲಿ ಕೇಳಿದ್ದ ಮಾತನ್ನೂ ಅವಳು ಮರೆತಿರಲಿಲ್ಲ ಮನಸ್ಸಿನಲ್ಲಿ ಆ ನೋವೂ ಭಯವೂ ಇದ್ದೇ ಇದ್ದಿತು

'ಹೂಂ. ಅಲ್ಲಿ ನೀನು ಯಾರನ್ನೋ ಕಟ್ಟಿಕೊಂಡು ಓಡಿಹೋಗಿದ್ದೆಯಂತೆ.'

'ಏನು ಹೇಳಿದೆ, ನೀನು ಅದಕ್ಕೆ!'

'ನಾನು ಅದನ್ನು ನಂಬಲಿಲ್ಲ. ನನ್ನನ್ನು ಬದುಕಿಸಿದ ಹಾಗೆಯೇ ಬೇರೆ ಯಾರನ್ನೂಬದುಕಿಸಲು ನೀನು ಪ್ರಯತ್ನಪಟ್ಟಿರಬಹುದೆಂದು ಅಂದು ಕೊಂಡೆ. ಕೃಷ್ಣನಿಗೆ ಅಷ್ಟು ಜನವಿದ್ದರಂತೆ. ನಿನಗೆ ಇಬ್ಬರು ಹೆಚ್ಚಾದಾರಾ! ಅವಳನ್ನೂ ಕರೆದುಕೊಂಡು ಬಾ, ಸುಖವಾಗಿರೋಣ.'

'ಕಟ್ಟಿಕೊಂಡು ಹೋದದ್ದುಂಟು. ನಾನು ಅವಳನ್ನಲ್ಲ. ಅವಳು ನನ್ನನ್ನು.'

'ಹೋಗಲಿ, ಈಗ ಆ ಮಾತೇಕೆ? ಇದ್ದರೆ ಅವಳೂ ಬರಲಿ. ಇದ ಕ್ಕಾಗಿ ನೀನು ನನ್ನ ಬಿಟ್ಟು ಹೋಗಬೇಕಿತ್ತೇ!'

'ನಿನ್ನ ಮೊದಲನೆ ದಿನ ಕಂಡಾಗಲೇ ನಾನೂ, ನಂಗೂ ಒಬ್ಬಳು ಹೆಂಡತಿ ಇದ್ದಳು, ಎಂದಿದ್ದೆ. ನಿನ್ನ ಲಗ್ನವಾಗೋಕೆ ಮೊದಲು ನಾನು ಬೇರೆ ಲಗ್ನವಾಗಿದ್ದೆ. ದುರ್ಗದಲ್ಲಿ ನಂಜಯ್ಯ ಶೆಟ್ಟರ ಅಂಗಡಿ ಇಲ್ವಾ, ಅದರ ಪಕ್ಕದ ಮನೆಯಲ್ಲಿ ನಮ್ಮ ಜನವೇ ಒಬ್ಬರು ಇದ್ದರು. ಅವರೂ ಅಲ್ಲಿ ಒಂದು ಚಿಲ್ಲರೆ ಅಂಗಡಿ ಇಟ್ಟುಕೊಂಡು ವ್ಯಾಪಾರಮಾಡಿಕೊಂಡಿದ್ದರು. ಅವರಿಗೆ ೧೪-೧೫ ವರ್ಷದ ಒಬ್ಬಳೇ ಮಗಳು. ಬಹಳ ಚೆಲುವೆ. ಒಂದು ದಿನ ನಾನೂ ನಮ್ಮ ತಂದೆ ಒಂದು ಸಲ ಅಲ್ಲಿಗೆ ಹೋಗಿದ್ದಾಗ, ಆತ ಇದ್ದ ಕ್ಕಿದ್ದ ಹಾಗೆ ವಾಂತಿಭೇದಿಯಿಂದ ಕಾಲವಾಗಿ ಹೋಗಿಬಿಟ್ಟ. ಆತ ಬಡವ. ಊರಲ್ಲಿ ಅವರ ಜನ ಯಾರೂ ಹೆಣದ ಹತ್ತಿರ ಸಹ ಬರಲು ಹೆದರಿದರು, ಆಗ ನಾನೂ ನಮ್ಮ ತಂದೆ ಹೆಣ ಸಾಗಿಸಿ ಮಣ್ಣು ಮಾಡೋಕೆ ಮುಂದೆ ನಿಂತೆವು. ಕರ್ಮಗಳನ್ನು ಮಾಡಿಸಿದೆವು. ಆ ಹುಡುಗಿಯ ದೂರದ ಸಂಬಂ ಧದವಳು ಒಬ್ಬ ಹೆಂಗಸನ್ನು ಆಕೆಯ ಜೊತೆಗೆ ಇಟ್ಟೆವು. ಅದರ ಮೇಲೆ ನಾವು ಆ ಊರಿಗೆ ಹೋದಾಗಲೆಲ್ಲ ಅವರ ಮನೆಗೆ ಹೋಗ್ತಾ ಇದ್ದೆವು. ನನ್ನ ನೋಡೇ ಇದೀಯಲ್ಲ! ಪ್ರಾಯದ ಹುಡುಗಿ ಅವಳು. ಬುದ್ಧಿ ಹೇಳು ವವರು ಯಾರೂ ಇರಲಿಲ್ಲ. ನನ್ನ ಮೇಲೆ ಕಣ್ಣು ಮಡಗಿದಳು. ನಾನೇನು ಷಂಡನಾ? ನಂಗೂ ಚಿಕ್ಕ ವಯಸ್ಸು, ಈಗಿನಷ್ಟು ಬುದ್ಧಿ ಇರಲಿಲ್ಲ. ಮೆಲ್ಲಗೆ ಇಬ್ಬರೂ ಒಟ್ಟಾದೆವು. ಎರಡು ದಿನ ಕಳೆಯುವುದರೊಳಗೆ ಅವಳು 'ನಾವಿಲ್ಲಿ ದ್ದರೆ ಬೈತಾರೆ, ದಾವಣಗೆರೆಗೆ ಹೋಗಿ ನಾಲ್ಕು ದಿನ ಇದ್ದು ಬರೋಣ ಅಂತ ಹೇಳಿ ಪುಸಲಾಯಿಸಿದಳು.

ದಾವಣಗೆರೆಗೆ ಓಡಿಹೋಪೆವು ನಮ್ಮ ತಂದೆಗೆ ಹೇಳಿದ್ದರೆ ಅವರು ಏನೂ ಹೇಳುತ್ತಿರಲಿಲ್ಲವೆಂದು ಕೊಳ್ಳುತ್ತೇನೆ; ಈಗ ಕೈಲಿದ್ದ ಪುಡಿಕಾಸು ಖರ್ಚಾಯಿತು. ನಾನು ಗಿರಣಿಗಳಲ್ಲಿ ಕೂಲಿನಾಲಿಮಾಡಿ ಜೀವನೋಪಾಯಕ್ಕೆ ನಾಲ್ಕು ಕಾಸು ಸಂಪಾದಿಸಲು ಹೋಗುತ್ತಿದ್ದೆ. ನನ್ನ ಕಾಸು ನೋಡಿ ನನ್ನ ಹಿಂದೆ ಬಿದ್ದಿದ್ದ ಇವಳಿಗೆ ನನ್ನ ಬಡತನದ ಸಂಸಾರ ಒಗ್ಗಲಿಲ್ಲವೇನೊ! ನಾನು ಮಧ್ಯಾಹ್ನ ಮನೆಯಲ್ಲಿಲ್ಲದ ವೇಳೆ ಇತರರನ್ನು ಮನೆಯೊಳಗೆ ಬಿಟ್ಟು ಕೊಳ್ಳುತ್ತಿದ್ದಳು. ಇವರ ಪೈಕಿ ಒಬ್ಬ ಸಾಹುಕಾರನೂ ಇದ್ದ. ಅವನ ಮಾತು ಕೇಳಿಕೊಂಡು ಅವನ ಆಶ್ರಯದಲ್ಲಿರುವುದಕ್ಕೆ ಒಂದು ಹಳ್ಳಿಗೆ ನನಗೆ ಹೇಳದೆಕೇಳದೆ ಹೊರಟುಹೋದಳು. ಸದ್ಯ, ಪೀಡೆ ನಿವೃತ್ತಿಯಾಯಿತಲ್ಲ, ಎಂತ ಪುನಃ ಬಂದು ತಂದೆಯನ್ನು ಸೇರಿಕೊಂಡೆ. ತಂದೆ ಹೋದ ಮೇಲೆ ನನ್ನ ಪಾಡಿಗೆ ನಾನಿದ್ದೆ ಅಂದು ಗಾಡಿ ಹೊಡೆದುಕೊಂಡು ಬರಲಿಲ್ಲವಾ, ಆ ದಿನ ನೀನು ಗಾಡಿಯಲ್ಲಿ ಕೂತಿದ್ದನ್ನು ಅವಳು ಕಂಡಳು ಆ ಸಾಹುಕಾರ ನಾಲ್ಕು ದಿನ ಅವಳನ್ನು ಇಟ್ಟುಕೊಂಡು ಓಡಿಸಿಬಿಟ್ಟಿದ್ದ ಅವಳೂ ನಾಲ್ಕಾರು ಕಡೆ ತಿರುಗಿ ನನ್ನನ್ನರಸಿಕೊಂಡು ಅಲ್ಲಿಗೆ ಬಂದಿದ್ದಳು ಗಾಡಿಯಲ್ಲಿ ನೀನಿದ್ದುದನ್ನೂ ಕಂಡಳು. ಸಂದಯ್ಯಶೆಟ್ಟರ ಬಳಿ ತಾನು ಕೆಡಲು, ನಾನೇ ಕಾರಣವೆಂತ ಸುಳ್ಳು ಹೇಳಿದ್ದಳು. ಅವರ ಮುಂದ ಪಂಚಾಯತಿಮಾಡಿ ನನ್ನಿಂದ ಹಣ ಕಸಿದುಕೊಳ್ಳಬೇಕೆಂದು, ನಾನು ಒಳ್ಳೆಯವನಲ್ಲವೆಂತ ನಿನಗೆ ಬೋಧೆ ಮಾಡಬೇಕೆಂದೂ ಮನಸ್ಸಿನಲ್ಲಿಟ್ಟು ಕೊಂಡು ನನ್ನ ಬಿಟ್ಟು ಹೋಗಿದ್ದು ತಪ್ಪಾಯಿತು ಎಂತ ಅತ್ತು ಕರೆದು ಹೇಳಿಕೊಂಡು ನಟಿಸಿದಳು. ಕೊನೆಗೆ ಹೆದರಿಸಿಯೂ ಹೆದರಿಸಿದಳು. ಆಗ ನನಗೇನು ಮಾಡುವುದಕ್ಕೂ ತೋಚಲಿಲ್ಲ. ಬೆಳಿಗ್ಗೆ ಬರುತ್ತೇನೆ ಇಂಥ ಕಡೆ ಇರು ಎಂತ ಹೇಳಿ ನಿನ್ನಲ್ಲಿಗೆ ಬಂದೆ. ನಿನಗೆ ಈ ಸಂಗತಿ ತಿಳಿಸಲು ನನ್ನ ಮನಸ್ಸು ಯಾಕೋ ಹಿಂದೇಟು ಹಾಕಿತು. ನಿನಗೆ ಏಕ್‌ದಂ ಈ ಸಮಾಚಾರ ಹೇಳಿ ನೀನು ನನ್ನ ಮಾತು ನಂಬದಿದ್ದರೆ! ನಮ್ಮ ವಿಶ್ವಾಸಕ್ಕೆ ಒಂದು ಬಾರಿ ಭಂಗ ಬಂದ ಮೇಲೆ ಪುನಃ ಮನಸ್ಸು ಸರಿಹೋದೀತೆ!

'ಅದಕ್ಕೆ ನಾನು ನಿನ್ನ ಬಿಟ್ಟು ಓಡಿಹೋದದ್ದು. ಪುನಃ ದುರ್ಗದಲ್ಲಿ ಮನೆಮಾಡಿ ಇವಳನ್ನಲ್ಲಿಟ್ಟೆ. ಏನು ಮಾಡಬೇಕೆಂತ ಒಬ್ಬ ಲಾಯರನ್ನು ಕೇಳಿದೆ. ಅವರು ಒಂದುಪಾಯ ಹೇಳಿಕೊಟ್ಟರು. ನಾನು ಒಂದು ಕಡೆ

ಕೂಲಿಮಾಡಲು ಸೇರಿಕೊಂಡೆ. ಅವಳ ಮೇಲೆ ಜನಕಾವಲು ಇಟ್ಟು 'ಅವಳ ಮನೆಗೆ ನಾನಿಲ್ಲದ ವೇಳೆ ಬೇರೆ ಜನ ಹೋಗ್ತಾರೆ, ಅವಳ ನಡತೆ ಚೆನ್ನಾಗಿಲ್ಲ' ಎಂತ ಮಾಡಿ, ನಾಲ್ಕಾರು ಜನಕ್ಕೆ ತೋರಿಸಿ, ಲಾಯರ ಮುಖಾಂತರ ನೋಟೀಸು ಕೊಡಿಸಿ, ಕೋರ್ಟಿನಲ್ಲಿ ಅವಳಿಗೂ ನನಗೂ ಸಂಬಂಧವಿಲ್ಲವೆಂತ ಮಾಡಿಸಿ ಬರಬೇಕಾಯಿತು ಅದಕ್ಕೇ ಇಷ್ಟು ತಡ ಆದದ್ದು.

ಇದನ್ನೆಲ್ಲ ಮೊದಲೇ ಹೇಳದೆ ನಿನ್ನನ್ನೂ ಕರೆತಂದದ್ದೂ ತಪ್ಪು; ಕರೆತಂದ ಮೇಲೂ ಹೇಳದೆ ಓಡಿಹೋದ್ದೂ ತಪ್ಪು. ಚಿಕ್ಕೀ, ನನ್ನನ್ನು ಕ್ಷಮಿಸಲಾರೆಯಾ?'

ಚಿಕ್ಕಿ ಮಾತನ್ನೇ ಆಡಲಿಲ್ಲ. ತೃಪ್ತಿಯ ನಿಟ್ಟುಸಿರೊಂದನ್ನು ಕರೆದು ಅವನ ಕಡೆ ನೋಡಿದಳು. ಆ ನೋಟದಲ್ಲಿ-ಕ್ಷಮೆ, ಪ್ರಣಯ, ಆದರಗಳೆಲ್ಲ ಕೂಡಿದ್ದವು.



# 7. ವೀರಚೆನ್ನೇನ ಹಳ್ಳಿ

ಮಿಡಗೇಶಿ ಹತ್ತಿರ ಇರುವ ನೀರ್ಕಲ್ಲಿಗೆ ಒಂದು ಹೆಣದ ತನಿಖೆಗಾಗಿ ಹೋಗಿದ್ದೆ. ಎಲ್ಲ ಪೂರೈಸಿಕೊಂಡು ಹಿಂತಿರುಗಿ ಮಿಡಗೇಶಿಗೆ ಬರಬೇಕಾದರೆ ಸಾಯಂಕಾಲ ಸುಮಾರು ಐದು ಐದೂವರೆ ಗಂಟೆಯಾಗಿ ಹೋಯಿತು ಒಳ್ಳೆ ಮಳೆಗಾಲ; ಆಕಾಶದಲ್ಲಿ ಇಲ್ಲೊಂದು ಅಲ್ಲೊಂದು ಕರಿ ಮೋಡ ಸೇರುತ್ತಾ ಇತ್ತು ವೆಂಕಟರಾವ್ ಇದ್ದುಕೊಂಡು, 'ಮಳೆ ಬರೋ ಹಾಗಿದೆ, ೧೩ ಮೈಲಿ; ಒಬ್ಬರೇ; ಅದೂ ಸೈಕಲ್ ಮೇಲೆ; ಸಾಯಂಕಾಲ ವಾಗಿ ಹೋಗಿದೆ ಹಾಯಾಗಿ ಇಲ್ಲೇ ಇದ್ದು ಬೆಳಿಗ್ಗೆ ಎದ್ದು ಮೋಟಾರಿ ನಲ್ಲಿ ಹೋಗ್ತಿರಂತೆ' ಅಂದನು. 'ಬೆಳಗ್ಗಿನವರೆಗೆ ಯಾರು ಕಾಯುವರು,೧೩ ಮೈಲಿ ತಾನೆ' ಸೈಕಲ್ ತುಳಿಯೋಕೆ ಒಂದೂ ಕಾಲು ಗಂಟೆ ಬೇಕು; ಇನ್ನೂ ಕಾಲು ಗಂಟೆ ಯಾತಕ್ಕಾದರೂ ಇಟ್ಟುಕೊಂಬೋಣ, ಒಂದೂವರೆ ಗಂಟೆ ಯೊಳಗಾಗಿ ಅಂದರೆ ಏಳುಗಂಟೆಗೆ ಊರು ಸೇರ್ತೇನೆ' ಎಂದ

ಆತನು ಬೇಡವೆಂತ ಪದೇಪದೇ ಹೇಳಿದರೂ ಕೇಳದೆ ಊರಕಡೆಗೆ ಹೊರಟ.

ಚೆನ್ನೇನ ಹಳ್ಳಿ ದಾಟಿ ಸುಮಾರು ಎರಡು ಫರ್ಲಾಂಗು ಹೋದ. ಸೈಕಲಿನ ಹಿಂದಿನ ಚಕ್ರಕ್ಕೆ ಲಾಳ ಹೊಡೆದು ಟಸ್ ಅಂತ ನಾನು ಇಳಿಯೋಕೆ ಮೊದಲೇ ಗಾಳಿ ಹೊರಟುಹೋಯಿತು ಹೋಗಬೇಡ ಅಂತ ಅಡ್ಡಿ ಮಾತು ಹೇಳಿದನಲ್ಲ, ವೆಂಕಟರಾವ್, ಅದಕ್ಕೆ ಹೀಗಾದುದು, ಅಂತ ಆತನಿಗೆ ಶಾಪಹಾಕುತ್ತಾ ಸೈಕಲ್ ಬಿಚ್ಚಿದೆ.

ಕಂಡವರ ಮೇಲೆ, ಯಾಕೆ ಮಾಡಲಿಲ್ಲ, ಅಂತ ಬೀಳೋಕೆ ಮಾತು ಕಲವರಿಗೆ ಆಗ್ತದ; ತಮಗೆ ಮಾಡೋಕೆ ಬರೋದೂ ಇಲ್ಲ; ಕೈಲೂ ಹರಿಯೋಲ್ಲ-ಅಂಥವರ ಗುಂಪಿನಲ್ಲಿ ನನಗೇ ಅಗ್ರತಾಂಬೂಲ ಕೊಡಬೇಕು, ಅಂತ ಕಾಣುತ್ತೆ. ಅಂತು ಹಾಗೂ ಹೀಗೂ ತಾಪತ್ರಯ ಪಟ್ಟುಕೊಂಡು ಸರಿಮಾಡ್ತಾ ಇದ್ದ ಹಾಗೇ ಪ್ರಾರಂಭವಾಯಿತು-ಎದುರು ಗಾಳಿ, ಪ್ರಪಂಚ ದಲ್ಲಿರೋ ಮಣ್ಣೆಲ್ಲಾ ಕಣ್ಣಿಗೆ ತುಂಬೋಕೆ. ಇನ್ನೂ ಅದರಲ್ಲಿ ಎಲ್ಲಿ ಸೈಕಲ್ ತುಳಿಯೋದುದು ನನ್ನ ತಲೆ! ಕಷ್ಟಪಟ್ಟು ಇನ್ನೆರಡು ಮೈಲಿ ಹೋಗುವ ಹೊತ್ತಿಗೆ 'ಬಂದನಾ ಮಳೆರಾಯನು'. ಅದೂ ಹೇಗೆ? ಏನೋ

ದ್ರೋಣ' ಅನ್ನುತ್ತಾರಲ್ಲ ಹಾಗೆ

ನಿಲ್ಲಲು ಸ್ಥಳ ಇಲ್ಲ. ಯಾವುದೋ ಒಂದು ಮರದ ಬುಡದಲ್ಲಿ ತಲೆ ಮರೆಮಾಡಿಕೊಂಡು ನಿಂತರೂ ಯುನಿಫಾರಂ, ಕೋಟು, ನಿಕ್ಕರು, ಕಾಲು ಚೀಲ, ಎಲ್ಲ ನೆನೆದು ಮುದ್ದೆಯಾಗಿ ಮೈಮೇಲೆ ಮಧುಗಿರಿ ಹೊತ್ತಷ್ಟು ಭಾರವಾಗಿ ಹೋಯಿತು.

ಸೈಕಲ್ ರಿಪೇರಿ, ಮಳೆ, ಇವುಗಳ ಜೊತೆಗೆ ಮಣ್ಣು ತೂರುತ್ತಿರುವ ಎದುರು ಗಾಳಿ, ಈ ಅನಾಹುತಗಳಿಗೆ ನಾನು ಅವಕಾಶಕೊಟ್ಟಿದ್ದ ಕಾಲು ಗಂಟೆಗೆ ಇನ್ನೂ ಎರಡು ಗಂಟೆ ಸೇರಿಸಿದರೂ ನನಗೂ ಮಧುಗಿರಿಗೂ ೮-೯ ಮೈಲಿ ಅಂತರ ಉಳಿದಿತ್ತು!

ಮೋಡ ಮುಚ್ಚಿಕೊಂಡು ರಸ್ತೆ ಕಾಣಿಸದ ಹೋಯಿತು ಮನಸ್ಸಿನಲ್ಲಿ ಹೆದರಿಕೆ ಬೇರೆ ಪ್ರಾರಂಭವಾಯಿತು. ಬೇರೆ ಯಾವ ಹೆದರಿಕೆಯೂ ಅಲ್ಲ, ಚಿರತೆ, ಹುಲಿ ಅಡ್ಡ ಹಾಯ್ದರೆ ಏನು ಗತಿ, ಅಂತ.

ಇನ್ನೂ ಸ್ವಲ್ಪ ಮುಂದಕ್ಕೆ ಹೋದೆ. ಅಮಾವಾಸ್ಯೆಯಾದ್ದರಿಂದ ಮೊದಲೇ ಕತ್ತಲು, ಜೊತೆಗೆ ಆಕಾಶ ಕಾಣದಷ್ಟು ಮೋಡ; ಸಾಲದುದಕ್ಕೆ ರಸ್ತೆಯ ಎರಡು ಕಡೆಗಳಲ್ಲೂ ಸಾಲುಮರ. ಒಳ್ಳೆ ಮಧ್ಯ ದಾರಿಗೆ ಬರುವ ಹೊತ್ತಿಗೆ ಸಾಕುಸಾಕಾಗಿ ಹೋಯಿತು.

ಅತ್ತ ಮಿಡಗೇಶಿ ಆರು ಮೈಲಿ; ಇತ್ತ ಮಧುಗಿರಿ ೬-೭ ಮೈಲಿ ಒಳ್ಳೆ ಒಂದು ಕಣಿವೆ ಮಧ್ಯೆ.

ರಸ್ತೆಯಲ್ಲಿ ನನ್ನನ್ನು ಬಿಟ್ಟರೆ ಬೇರೆ ಪ್ರಾಣಿಯಿಲ್ಲ ಸೈಕಲ್ ಜೋರಾಗಿ ತುಳಿಯೋಕೆ ಕಗ್ಗತ್ತಲೆ ಸಾಲದುದಕ್ಕೆ ಹನಿಕಲು ಮಳೆ!

ಪ್ರತಿಕ್ಷಣ ವೆಂಕಟರಾವ್ ಹೇಳಿದ ಮಾತು ಮನಸ್ಸಿನ ಮುಂದೆ ಒಡೆದು ನಿಲ್ಲುತ್ತ ಇತ್ತು.

ಹಾಗೇ ಇನ್ನೊಂದು ಹತ್ತು ಹೆಜ್ಜೆ ಮುಂದಕ್ಕೆ ಹೋದೆ. ಮೆಟ್ಟಿಬಿದ್ದೆ! ನನ್ನ ಹಿಂದೆ ಯಾರೋ ಮಾತಾಡಿದ ಹಾಗಾಯಿತು ಒಂದು ಕ್ಷಣದ ಹಿಂದೆ ನಾನೊಬ್ಬನೇ ಇದ್ದುದು, ಅಲ್ಲಿ ಬೇರೆ ಯಾರೂ ಇರಲಿಲ್ಲ ಅಂತ ದೇವರ ಮೇಲೆ ಆಣೆ ಇಟ್ಟು ಹೇಳ್ತಾ ಇದ್ದೆ, ಬೇಕಾದ್ರೆ.

ಆತ ಮಾತಾಡುತ್ತ ಇದ್ದ.

'ಎಂಥ ಹಾಳುಮಳೆ, ಇನ್ನೂ ಪ್ರಾರಂಭಿಸೋದರಲ್ಲಿದೆ. ಇನ್ನು ಸ್ವಲ್ಪ

ಹೊತ್ತಿಗೆ ಪುನಃ ಜೋರಾಗಬಹುದು. ಸಿಡಿಲು, ಮಿಂಚು! ಒಂದು ಕ್ಷಣ ನಿಂತುಕೊಳ್ಳಬಾರದೇ'; ಬಟ್ಟೆ ಎಲ್ಲ ಒದ್ದೆಯಾಗಿದೆ. ಬೇರೆ ಕೊಡ್ತೇವೆ.

'ನಿಂಗ್ಯಾಕೆ ತೊಂದರೆ, ಬಿಡಪ್ಪ. ಇನ್ನೇನು ಮಹಾದೂರ, ಹೊರಟು ಹೋಗುತ್ತೇನೆ,' ಅಂತ ಕತ್ತಲಲ್ಲಿ ನನ್ನೆದುರಿಗೆ ಕಾಣಿಸುತ್ತಿದ್ದ ಕೋಲು ಮನುಷ್ಯನಿಗೆ ಹೇಳಿದೆ.

'ನಿಮ್ಮಿಷ್ಟ', ಎಂತ ಆತ ಹೇಳುತ್ತಿದ್ದ ಹಾಗೇ ಒಂದು ಸೆಳೆ ಮಿಂಚು ಬಂದು, ಅದರ ಹಿಂದೆಯೇ ಕಿವಿ ಕಿವುಡಾಗುವ ಹಾಗೆ ಸಿಡಿಲು ಹೊಡೆದು, ಒಂದು ನಾಲು ಮರಕ್ಕೆ ಬೆಂಕಿ ಹತ್ತಿತು.

'ನಿಮ್ಮಿಷ್ಟ ಬಂದ ಹಾಗೆ ಮಾಡಬಹುದು; ಏನೋ ಒಂದು ರಾತ್ರೆ ಬಡವನ ಗುಡಿಸಲಿನಲ್ಲಿ ಇರುವುದಕ್ಕೆ ಬೇಕಾದ ಅನುಕೂಲವಿದೆ'.

ನಿಂತರೆ ಸಾಕು ಎಲ್ಲಿಯಾದರೂ, ಅಂತ ಮನಸ್ಸಿನಲ್ಲಿತ್ತು. ಜೊತೆಗೆ ಆತ ನಿಲ್ಲೆಂದು ಹೇಳುತ್ತಿದ್ದ. ಆದರೂ ನನ್ನ ಮನಸ್ಸೇನೋ ನಿಲ್ಲಬೇಡ, ಹೊರಟುಬಿಡು, ಹೊರಟುಬಿಡು-ಅಂತ ಹೇಳುತ್ತಾ ಇತ್ತು.

ಏನು ಮಾಡೋಕೂ ತೋಚಲಿಲ್ಲ. ಒದ್ದೆ ಮುದ್ದೆಯಾದ ಭಾರವಾದ ಬಟ್ಟೆ ಮೈಗೆ ಅಂಟಿಕೊಂಡಿತ್ತು; ಚಳಿಗೆ ಹಲ್ಲು ಮಾತನಾಡುತ್ತಾ ಇದ್ದವು.

ಇದ್ದಕ್ಕಿದ್ದ ಹಾಗೆ ಆ ಮನುಷ್ಯ ಎಲ್ಲಿಂದಲೋ ಬಂದು ಮಾತಾಡಿಸಿದ ಅಂತ, ಎಂದೂ ಹೆದರಿಕೊಳ್ಳದೆ ಇರುವವನು ಹೆದರಿಕೊಳ್ಳಲೇ!

'ಹೋಗಲಿ. ನಡೆಯಪ್ಪ, ನಿನ್ನ ಮನೆಯಲ್ಲೂ ಒಂದು ರಾತ್ರೆ ವಾಸ ನಡೆದುಹೋಗಲಿ'

ಮರುಮಾತಿಲ್ಲದ ಆ ಮನುಷ್ಯನು ರಸ್ತೆ ಬಿಟ್ಟು ಬಂಡೆಗಳ ಮಧ್ಯೆ ನುಗ್ಗಿದ. ಹಿಂದೆ ನಾನು. ಕಾಲುದಾರಿ; ಅದೂ ಸರಿಯಾಗಿಲ್ಲ. ನನಗೂ ನನ್ನ ಸೈಕಲಿಗೂ ಜಾಗ ಆಗುವಷ್ಟು ಕೂಡ ಅಗಲವಿಲ್ಲ. ಆ ಕತ್ತಲೆಯಲ್ಲಿ ಕೀಚಕ ದಂಡಯಾತ್ರೆಗೆ ಹೊರಟಹಾಗಿತ್ತು.

ಮಧ್ಯೆ ನರಿಯ ಕೂಗು ಬೇರೆ!

ಸ್ವಲ್ಪ ದೂರ ಹೋದ ಮೇಲೆ ಕಣ್ಣು ಕತ್ತಲೆಯಲ್ಲಿ ಒಂದು ಸಣ್ಣ ಮನೆ ಕಾಣಿಸಿತು. ಮನೆ ಮುಂದೆ ಚಪ್ಪರ. ಅಲ್ಲಿ ಹೋಗಿ ನಿಂತುಕೊಂಡೆ.

ಆ ವ್ಯಕ್ತಿ ಬಾಗಿಲು ತೆಗೆದು ಒಳಕ್ಕೆ ಹೋಯಿತು. ದೀಪ ಹಚ್ಚಲು ಬೆಂಕಿಪೆಟ್ಟಿಗೆ ತಡಕುತ್ತಾ ಇತ್ತು. ಪುನಃ ಒಂದು ಮಿಂಚು ಹೊಡೆದು ಆ

ಮನೆಯಾಚೆ ನೋಡುತ್ತಾ ಇದ್ದ.

ಪುನಃ ನಾನು ಆ ವ್ಯಕ್ತಿಯನ್ನು ಬೇರೆ ಉಡುಪು ಕೊಡೆಂತ ಕೇಳ ಬೇಕು; ಅಷ್ಟರಲ್ಲಿ ಆತ ನನ್ನ ಕಡೆ ತಿರುಗಿ ಮಾತನಾಡಲು ಪ್ರಾರಂಭಿಸಿದ. ನನ್ನ ಕಡೆ ತಿರುಗಿದ್ದರೂ ದೃಷ್ಟಿ ಬೇರತ್ತ ಇತ್ತು. ಮಾತೂ ಸ್ವಗತ.

'ನಾನು ನಾಳೆ ಬರ್ತೀನೆ ಅಂತ ನನ್ನ ಹೆಂಡತಿ ತಿಳಿದುಕೊಂಡಿದ್ದಳು; ಅಂತಿರುತ್ತ ನನ್ನನ್ನು ಈಗಲೇ ಕಂಡರೆ ಅವಳಿಗೆ ಬಲು ಆಶ್ಚರ್ಯ ಆಗ್ತದೆ ಅಲ್ವೆ!

'ಅವಳೊಬ್ಬಳೇ ಇರಬೇಕಲ್ಲ ಅಂತ ನಾನು ಮಧುಗಿರಿಯಿಂದ ಒಬ್ಬನೇ ಈ ಅವೇಳೆಯಲ್ಲಿ ನಡೆದುಕೊಂಡು ಬಂದಿದ್ದೇನೆ; ಅದರಿಂದ ಅವಳು ಒಂಟಿ ಯಾಗಿರೋದು ತಪ್ಪೋದಿಲ್ಲ'.

ಆತನ ತೀಕ್ಷ್ಣ ದೃಷ್ಟಿ ನನ್ನ ಕಡೆ ಬಿತ್ತು. ಅದರ ಬೇಗೆಗೆ ದಹಿಸಲ್ಪಡು ತ್ತಿದ್ದ ನನ್ನಿಂದ ಮಾತೇ ಬರಲಿಲ್ಲ

ಆತನ ದೃಷ್ಟಿ ಪುನಃ ಮೊದಲಿನಂತೆ ನಡುಮನೆಯಾಚೆ ಇತ್ತು. ಹೋ ಯಿತು.

ಮನೆಯ ಹೊರಗಡೆ ಮಳೆಯ ಜೋರು ಕ್ಷಣಕ್ಷಣಕ್ಕೂ ಹೆಚ್ಚುತಿತ್ತು. ಜೊತೆಗೆ ಕಣ್ಣು ಕುರುಡು ಮಾಡುವ ಮಿಂಚು; ಕಿವಿ ಕಿವುಡಾಗುವಂತೆ ಅಬ್ಬರಿಸುವ ಗುಡುಗಿನ ಆರ್ಭಟ! ಆದರೂ ನನ್ನ ಗಮನ ಆ ಕಡೆ ಓಡದೆ ಈ ವ್ಯಕ್ತಿಯ ಮೇಲೆಯೇ ಇತ್ತು. ಇವನನ್ನೇ ನೋಡುತ್ತಾ ಇದ್ದ ನನಗೆ, ಆ ನಡುಮನೆ ಬಾಗಿಲ ಬಳಿ, ಯಾವಾಗ ಅವನ ಹೆಂಡತಿ ಬಂದು ನಿಂತಳೆಂದು ಹೇಳಲು ನನಗೆ ಸಾಧ್ಯವಾಗಲಿಲ್ಲ! ಆಕೆಯ ನಡಿಗೆಯ ಶಬ್ದ ನನಗೆ ಕೇಳಿಸಲೇ ಇಲ್ಲ!

ಆಕೆ ನನ್ನ ಕಡೆ ಸಹ ತಿರುಗಿ ನೋಡಲಿಲ್ಲ. ಕಳ್ಳತನ ಮಾಡಿ ಸಿಕ್ಕಿ ಹಾಕಿಕೊಂಡವರು ನಮ್ಮ ಕಡೆ ಹೇಗೆ ನೋಡುತ್ತಾರೋ ಹಾಗೆ, ಆಕೆ ತನ್ನ ಗಂಡನ ಕಡೆ ನೋಡುತ್ತಿದ್ದಳು. ಆಕೆಗೆ ಇನ್ನೂ ಪ್ರಾಯ; ಆತನಿಗಿಂತ ವಯಸ್ಸಿನಲ್ಲಿ ಬಹಳ ಚಿಕ್ಕವಳು. ಅವಳು ನೋಡಲು ಒಂದು ತರಹ ವಿಲ ಕ್ಷಣವಾಗಿಯೇ ಇದ್ದಳು. ಕೈಯ್ಯಲ್ಲಿ ಸೆರಗು ಹೊಸಕುತ್ತಾ ಆತನ ಕಡೆಗೆ ನೋಡುತ್ತಾ ಮಾತನಾಡಿದಳು.

'ನೀನು ಈಗಲೇ ಮನೆಗೆ ಬರ್ತೀಯ ಅಂತ ನಾನು ತಿಳಕೊಂಡಿರಲಿಲ್ಲ.

ವಾಪಾಸ್ ಬರೋಕೆ ಗಾಡಿಗೀಡಿ ಏನಾರಾ ಸಿಕ್ಕಿತಾ? ಏನು ತೊಂದರೆ ಆಗಲಿಲ್ವಾ?'

'ಏನೂ ಇಲ್ಲ........' ಅವನ ಕಣ್ಣು ಬೆಂಕಿಯನ್ನು ಉಗುಳುತ್ತಿದ್ದಂತೆ ನನಗೆ ತೋರುತಿತ್ತು.

'ನಿನ್ನ ಬಿಟ್ಟು ಹೇಗಿರೋದು ಅಂತ ಬಂದುಬಿಟ್ಟೆ'

ಆಕೆ ಇನ್ನೆರಡು ಹೆಜ್ಜೆಗಳನಿಟ್ಟು ಒಳಗೆ ಬಂದಳು.

'ಲಾಟಾನಿನಲ್ಲ ಎಣ್ಣೆ ಇಲ್ಲ; ಹಾಕುವಷ್ಟು ವಿರಾಮವಿರಲಿಲ್ಲವೇನೋ ಪಾಪ!'

'ಎಣ್ಣೆ ತಂದು ಹಾಕ್ತೇನೆ', ಎಂತ ಆಕೆ ಬಾಗಿಲ ಕಡೆ ತಿರುಗಿದಳು.

ಆಕೆ ಒಂದು ಹೆಜ್ಜೆ ಮುಂದಕ್ಕೆ ಹೋಗುವುದರೊಳಗಾಗಿ ಆತ ಆವಳ ಕೈ ಹಿಡಿದ. ಆತ ಮುಟ್ಟಿದ್ದಕ್ಕೆ ಆವಳು ಕೊಸರಿಕೊಂಡಳು.

'ಎಣ್ಣೆಯೂ ಬೇಡ, ದೀಪವೂ ಬೇಡ. ಕತ್ತಲೆಯಲ್ಲೇ ಇರೋಣ, ಮೌನವಾಗಿ ಕಾಯೋಣ.'

'ಯಾಕೆ ಹೀಗೆ ಮಾತಾಡ್ತೀಯಾ, ಯಾರಿಗೋಸ್ಕರ ಕಾಯಬೇಕು?'

ಅದಕ್ಕೆ ಆತ ಉತ್ತರ ಏನೂಕೊಡಲಿಲ್ಲ. ಉತ್ತರಹೇಳದೆ ಆಕೆಯನ್ನು ಇನ್ನೂ ಸ್ವಲ್ಪ ತನ್ನ ಬಳಿಗೆ ಎಳೆದುಕೊಂಡ.

ಅವರಿಬ್ಬರೂ ಇದ್ದಕ್ಕಿದ್ದ ಹಾಗೆ, ನನ್ನ ಮರತೇ ಬಿಟ್ಟ ಹಾಗೆ, ನನಗೆ ತೋರಿತು. ಏನು ತಮಾಷೆ ಜನ, ತಮಾಷೆ ಮನೆ-ಎಂದುಕೊಂಡೆ.

ಹೋಗಿ ದೀಪಾನಾರಾ ಅಂಬಿಸ್ತೀನಿ; ಮುಂಬತ್ತಿ ಕರಗಿ ಹೋಗ್ತಾ ಇದೆ.

'ನಿನ್ನನೋಡೋಕೆ ಈ ಬೆಳಕಿಗಿಂತ ಬೆಳಕು ಬೇಕೆ? ಸಾಕು ಸಾಕು, ಇದೇ'.

ನಡುಮನೆ ಆಚೆ ರಪ್ ಎಂತ ಬಾಗಿಲು ಹಾಕಿದ ಶಬ್ದ. ಏನು ಶಬ್ದ ಅದು?

'ಏನೂ ಇಲ್ಲ, ಗಾಳಿ ಇರಬೇಕು. ನಾವಲ್ಲದೆ ಬೇರೆ ಯಾರಾರಾ ಇದ್ದಾರೆಯೋ ಮನೇಲಿ; ಕಿಟಕಿಯಾದರೂ ಹಾಕಿ ಬರ್ತೇನೆ. ಈ ಗಾಳಿ ಮಳೆಯಿಂದ ಹೊಟ್ಟೇಲಿ ನಡುಕ ಬರ್‍ತಾ ಇದೆ ನಂಗೆ; ಹೆದರಿಕೆ ಬೇರೆ'.

'ನಿಂಗೆ ಹೆದರಿಕೆಯಾದಾತು ಅಂತಲೇ ನಾನು ಬಂದಿದ್ದು' ನಗ್ತಾ

ನಗ್ತಾ ಆತ ಮಾತನಾಡ್ತಿದ್ದರೂ ಅದು ವ್ಯಂಗ್ಯವಾಗಿತ್ತು. ಆಕೆ ಕಡೆಯೇ ದುರುಗುಟ್ಟಿಕೊಂಡು ನೋಡುತ್ತ ಇದ್ದ.

'ನಾಳೆವರೆಗೂ ನಾನು ಮನೆಗೆ ಹಿಂತಿರುಗಿ ಬರ್ತೀನೆ ಅಂತ ಅಂದು ಕೊಂಡಿರಲಿಲ್ಲ. ಅಲ್ಲದೆ ನೀನು ರಾತ್ರಿಯೇ ಬಂದರೆ ನಿಂಗೆ ಸಂತೋಷ ಆಗ ಬಹುದು ಅಂತ ಅಂದುಕೊಂಡೆ. ಏನು ಚಿನ್ನಾ?'

'ಅಲ್ಲವೆ, ನಂಗ್ಯಾಕೋ ಚಳಿ ಆಗ್ತಾ ಇದೆ. ಶಾಲನ್ನಾದರೂ ತಕೊಂಡು ಬರ್ತೀನೆ, ಹೊದ್ದುಕೊಳ್ಳೋಕೆ.'

ಅವನಿಂದ ಅವಳು ಕೊಸರಿಕೊಂಡು ಹೋಗಬೇಕು; ಆದರೆ ಅವನು ಬಿಡಬೇಕಲ್ಲ! ಇದ್ದಕ್ಕಿದ್ದ ಹಾಗೆ ಅವಳ ಮುಖದ ಮೇಲೆ ಅದೊಂದು ತರಹ ಭಯ ತೋರಿತು. ಬಾಗಿಲು ಕಡೆ ನೋಡ್ತಾ ಅವಳು ಕೂಗಿಕೊಳ್ಳ ಬೇಕು, ಅಷ್ಟರಲ್ಲಿ ಅವನು ಅವಳ ಬಾಯಿಮುಚ್ಚಿ—ಅವಳನ್ನು ಹತ್ತಿರ ಎಳೆದುಕೊಂಡು ರೋಷದಿಂದ ಬುಸುಗುಟ್ಟಿದ.

'ಒಬ್ಬಳೇ, ನೀನೊಬ್ಬಳೇ ಅಲ್ವೆ, ಚಿನ್ನ-ಇರೋದು! ನನ್ನ ಚಿನ್ನ!! ಆಹಾ, ನನ್ನರನ್ನ!!! ನೀನೊಬ್ಬಳೇ ಯಾಕೆ ಇರಬೇಕು ಅಂತ ಅಲ್ಲವೆ ನಾನು ಬಂದಿದ್ದು!'

ಎಲ್ಲೋ ಒಂದರೆ ಕ್ಷಣ ಮಾತ್ರ ಆಕೆ ಒದ್ದಾಡಿದಳು ಅಷ್ಟೇ. ಅರ್ಧ ಎತ್ತಿಕೊಂಡು, ಅರ್ಧ ಎಳಕೊಂಡು, ನನ್ನ ಹತ್ತಿರ ಇದ್ದ ಬಾಗಿಲಿಗೆ ಎಳ ಕೊಂಡು ಬಂದ. ಆತನ ಮೈ ನನ್ನ ಮೈಗೆ ಸೋಕಿತು. ನನ್ನ ಮೈಯಲ್ಲಿ ವಿದ್ಯುತ್ಪ್ರವಾಹ ಹರಿದ ಹಾಗಾಯಿತು. ಮುಂದಕ್ಕೆ ಒಂದು ಹೆಜ್ಜೆ ಇಡೋಕೆ ನನ್ನ ಕೈಲಾಗಲಿಲ್ಲ. ಕಾಲು ಭೂಮಿಗೇ ಅಂಟಿಕೊಂಡು ಹೋದ ಹಾಗೆ ಆಗಿಹೋಗಿತ್ತು! ಮುಂದೆ ಏನಾಗುತ್ತೆ ಅಂತ ನನ್ನ ಬುದ್ಧಿಗೆ ಓಡಿತು. ಆದರೆ ಅಲ್ಲಿ ನಿಂತುಕೊಂಡು, ಬಾಯಿಬಿಟ್ಟುಕೊಂಡು, ರೆಪ್ಪೆ ಹಾಕದೆ, ನೋಡ್ತಾ ನಿಂತುಕೊಂಡಿದ್ದೇ ಹೊರತು ಮತ್ತೇನೂ ನನ್ನ ಕೈಲಿ ಮಾಡಲಿಕ್ಕಾಗಲಿಲ್ಲ!

ಅವನು ಅವಳನ್ನು ಬಾಗಿಲ ಹಿಂದೆ ಮರೆಯಾಗೋ ಹಾಗೆ ನೂಕಿ ತಾನೂ ಮರೆಯಾಗಿ ನಿಂತುಕೊಂಡ!

ಮುಂಬತ್ತಿ ಉರಿದುರಿದು ಸಣ್ಣಗಾಗುತ್ತ ಇತ್ತು!

ಹಾಗೆಯೇ ಆಚೆ ಕಡೆ ಕೊಠಡಿಯಿಂದ ಚಡಾವಿನ ನಡಿಗೆ ಶಬ್ದ ಕೇಳಿ ಬರುತ್ತಿತ್ತು!

ಎರಡು ಸಲ ಕೂಗಿಕೊಳ್ಳಬೇಕೆಂತ ಪ್ರಯತ್ನಪಟ್ಟೆ. ಆದರೆ ಧ್ವನಿ ಗಂಟಲಲ್ಲೇ ಉಡುಗಿ ಹೋಯಿತು! ಕನಸಿನಲ್ಲಿ ಘಟ್ಟಿಯಾಗಿ ಕೂಗಿಕೊಂಡಂತೆ, ಆದರೂ ಧ್ವನಿ ಕೇಳಿಸೋದಿಲ್ಲವಲ್ಲ, ಹಾಗೆ.

ಚಡಾವು ಶಬ್ದ ಹತ್ತಿರಹತ್ತಿರಕ್ಕೆ ಬರುತ್ತಾ ಇತ್ತು; ಆವಿನ ಗಂಜರ ಗೋಳಾನೂ ದಾಟಿಕೊಂಡು, ಆ ಇಲ್ಲಣಗಳನ್ನೆಲ್ಲ ತೂರಿಕೊಂಡು ಬಂತು–ಇನ್ನೊಂದು ಕ್ಷಣದಲ್ಲಿ ಒಬ್ಬ ಪ್ರಾಯದವನು ಬಾಗಿಲ ಬಳಿ ಬಂದು ನಿಂತ!

'ಚಿನ್ನ, ನನ್ನ ಚಿನ್ನ! ಎಲ್ಲಿದೀಯ?'

ಕೊಟಡಿಗೆ ಬಂದು ಆತ ಸುತ್ತಲೂ ನೋಡುತ್ತಾ ಇದ್ದ. ಆತನ ಮುಖದ ಮೇಲೆ ಒಂದು ಲಹರಿ ಆಡ್ತಾ ಇತ್ತು. ಆದರೂ ಅವನಿಗೂ ನಾನು ಕಣ್ಣಿಗೆ ಬೀಳಲೇ ಇಲ್ಲ!

ಬಾಗಿಲ ಮರೆಯಲ್ಲಿದ್ದವನು ತಟ್ ಎಂತ ಕೈಹಾಕಿ ಅವನ ಕುತ್ತಿಗೆ ಹಿಡಕೊಂಡ. ಹುಡುಗನ ಮುಖದ ಮೇಲಿದ್ದ ನಗೆ ಎಲ್ಲಿ ಹೋಯಿತೋ! ಮುಖವನ್ನೂ ಗಂಟುಹಾಕಿಕೊಂಡು ಆತನ ಕಡೆ ತಿರುಗಿದ.

ವಯಸ್ಕ ಹೇಳಿದ, 'ಈರಪ್ಪಾ, ಇಲ್ಲಿದ್ದಾಳೆ, ನಿನ್ನ ಚಿನ್ನ! ಏನಾಗ ಬೇಕು, ನಿನಗೆ ಅವಳಿಂದ!'

'ಓ! ಏನು! ಇದ್ದಕ್ಕಿದ್ದ ಹಾಗೇ ವಾಪಾಸು ಬಂದು ಬಿಟ್ಟದ್ದೀಯಲ್ಲ; ಹೆಂಡತಿ ಏನು ಮಾಡ್ತಾ ಇರ್ತಾಳೋ ಎಂತ ಹೊಂಚು ನೋಡೋಕೆ ಬಂದೆಯೇನೋ! ಯಾವಾಗಲೂ ಇಂಥ ಹಲ್ಕ ಕೆಲಸಾನೇ ನೀನು ಮಾಡೋದು!'

ಹುಡುಗನ ಧೈರ್ಯ ನೋಡಿ, 'ಭಲಾಪ್ಪಾ, ಇವನೇ ಗಂಡು' ಅಂದುಕೊಂಡೆ. ಹುಡುಗ ಇದ್ದದ್ದು ಅವನ ಮನೇಲಿ; ಬಂದಿದ್ದದ್ದು ಅವನ ಹೆಂಡತಿಗಾಗಿ; ಆಡೋದು ಅಂತಹ ಮಾತು!

'ನನ್ನ ಮನೇಲಿ ನನ್ನ ಹೆಂಡತಿ ಒಬ್ಬಳೇ ಇರಬೇಕಾದರೆ, ನಿನಗೇನು ಕೆಲಸ, ಈರಪ್ಪ, ಇಲ್ಲಿ!'

ಮಿಂಚಿನ ಹಾಗೆ ಹೊಳೀತು, ನನ್ನ ಮನಸ್ಸಿಗೆ—ಶುರುವಾಗುತ್ತೆ ನಾಟಕ ಇನ್ನು ಅಂತ! ಆದರೆ! ನನ್ನ ಕಾಲು ಕಿತ್ತರೂ ನಾನಿದ್ದ ಜಾಗದಿಂದ ಅಲ್ಲಾಡಿಸೋಕೆ ಆಗಲಿಲ್ಲ!

'ಹೆಂಡತಿಯಂತೆ, ಹೆಂಡತಿ! ಮೋಸಮಾಡಿ ಅವಳಿಗೆ ಲಗ್ನ ಆದ್ದೋನಲ್ಲವೆ ನೀನು! ನಿನ್ನ ಲಗ್ನವಾಗಬೇಕೆಂದು ಕಾದಿದ್ದಳಾ ಅವಳು! ನಿನ್ನ

ಮೇಲೆ ಅವಳಿಗೇನಾರಾ ವಿಶ್ವಾಸ ಇತ್ತೆ! ಅವಳು ನನ್ನ ಮದುವೆ ಮಾಡಿಕೊ ಬೇಕು ಅಂತ ಇದ್ದರೆ, ಅವಳಪ್ಪ ಅಮ್ಮನಿಗೆ ಬುದ್ಧಿ ಕೆಡಿಸಿ, ಮೋಸಪಡಿಸಿ, ಲಗ್ನವಾದೋನಲ್ಲವೆ, ನೀನು!'

'ಮೋಸಮಾಡಿದೆನೋ; ಬಿಟ್ಟೆನೋ. ಅವಳನ್ನ ಅವರಪ್ಪ ಅಮ್ಮ ನನಗೆ ಲಗ್ನಮಾಡಿ ಕೊಡಲಿಲ್ವ? ನನ್ನ ಹೆಂಡತಿ ಆಗಲಿಲ್ವ ಅವಳು? ನನಗೆ ಪುರಾಣ ಊದ್ತಾ ಇರೋ ನೀನು ಈಗ ಮಾಡ್ತಾ ಇರೋ ಕೆಲಸ ಏನು! ನನ್ನ ಮನೇಲಿ, ನಾನಿಲ್ಲದ ವೇಳೆ, ನನ್ನ ಹೆಂಡತಿ ಒಬ್ಬಳೇ ಇರುವಾಗ, ನೀನೇನು ಮಾಡ್ತಾ ಇದ್ದೀಯು, ಇದು ನಿಂಗೆ ನ್ಯಾಯವೋ?'

'ಇಂಥಾ ಬಿರುಗಾಳೀಲಿ, ಮಳೇಲಿ, ನಾವೇನು ಆಚೆ ಪ್ರಾಣ ಬಿಡ ಬೇಕು, ಅಂತಿದ್ಯಾ ನೀನು'

ದೊಡ್ಡವನಿಗೆ ಕೋಪ ಕ್ಷಣಕ್ಷಣಕ್ಕೂ ಉಕ್ಕುತ್ತಿತ್ತು. ಆದರೂ ಕಷ್ಟ ಪಟ್ಟು ತಡೆದು, 'ಇಲ್ಲ ಈರಣ್ಣ, ನೀ ಮಾಡೋದು ತಪ್ಪು ಕೆಲಸ; ಜೊತೆಗೆ ಸುಳ್ಳೂ ಹೇಳಬಾರದು. ನೀನು ಮಳೆಗೆ ಮರೆಮಾಡಿಕೋ ಬೇಕು ಅಂತ ಅಲ್ಲ ಇಲ್ಲಿ ಬಂದದ್ದು. ನಿನಗೆ ಇದು ದಾರಿ ಅಲ್ಲ; ಗಾಳಿಮಳೆ ಅಲ್ಲ, ನಿನ್ನ ಇಲ್ಲಿ ಕರೆತಂದದ್ದು ನನ್ನ ಹೆಂಡ್ತಿ. ನಾನು ಮನೇಲಿ ಇಲ್ಲ ಅಂತ ನೀನು ಕಂಡುಕೊಂಡು ಇಲ್ಲಿಗೆ ಬಂದಿದ್ದೀಯು; ನಾನು ನಾಳೆ ವರೆಗೂ ಬರೋದಿಲ್ಲ ಅಂತ ತಿಳಿದು ರಾತ್ರೀನೂ ಇಲ್ಲೇ ಕಳೆಯೋಣ ಅಂತ ನಿಂತಿದ್ದೀಯು. ನೀನೂ ನಿನ್ನ ಈ ಸೂಳೆ ಇಬ್ಬರೂ ರಾತ್ರಿ ಮೋಜು ಮಾಡೋಣ ಅಂತ ಅಂದಾಜು ಹಾಕಿದ್ದೀರಲ್ಲವೆ, ಪಾಪ! ನಾನು ಅಡ್ಡ ಬಂದುಬಿಟ್ಟೆ, ಅಲ್ಲವೆ!'

ಆತ ಸ್ವಲ್ಪ ಹೊತ್ತು ಸುಮ್ಮನೆ ನಿಂತಿದ್ದ; ಎಲ್ಲ ತಿಳಿದುಹೋಗಿದೆ; ಇನ್ನು ಹೆಚ್ಚು ಮಾತನಾಡಿದರೆ ಸುಖವಿಲ್ಲ ಅಂತ ಹುಡುಗಿ ತಿಳಿದುಕೊಂಡು ಗಡಗಡ ನಡುಗುತ್ತಾ ನಿಂತಿದ್ದಳು, ಭಯದಿಂದ.

ನಾನು ನಿಂತಲ್ಲೇ ನಿಂತಿದ್ದೆ. ಗಂಟಲಿನಲ್ಲಿ ಸ್ವರವಿಲ್ಲ, ಕೈಕಾಲು ಆಡಿ ಸುವುದಕ್ಕೆ ಆಗುತ್ತಿರಲಿಲ್ಲ; ಕಂಭದ ಹಾಗೆ ನಿಂತಿದ್ದೆ. ನಾನೂ ಒಬ್ಬ ಅಲ್ಲಿ ಇದ್ದೇನೆ ಅಂತ ಆ ಮೂವರಲ್ಲಿ ಒಬ್ಬರೂ ನನ್ನನ್ನು ಗಮನಿಸಲೇ ಇಲ್ಲ.

ಇದ್ದಕ್ಕಿದ್ದ ಹಾಗೆ, ಆ ದೊಡ್ಡವನು ಹುಚ್ಚರ ಹಾಗೆ ನಗುವುದಕ್ಕೆ ಪ್ರಾರಂಭಿಸಿದ. ಆತನ ನಗು ಅವನ ಮನೆ ಸೇರಿ, ಸುತ್ತಮುತ್ತ ಬೆಟ್ಟಗುಡ್ಡ ಗಳಲ್ಲಿ ಮರುಧ್ವನಿ ಪಡೆಯಿತು. ಹುಡುಗಿ ಹೆದರಿಕೆಗೆ ಮುಖ ಮುಚ್ಚಿ

ಕೊಂಡಳು. ಹುಡುಗ ಧೈರ್ಯವಾಗಿ ಮಾತನಾಡಿದ್ದರೂ ಅವನೂ ಹೆದರಿದ್ದ. ಅವನ ನಗು ಅಷ್ಟು ಕರ್ಕಶವಾಗಿದ್ದು ಭಯಹುಟ್ಟಿಸಿತ್ತು.

ಈಗೇನಾದರೂ ಹೆಚ್ಚು ಕಮ್ಮಿ ನಡೆಯಬಹುದು ಅಂತ ನಾನು ಭಾವಿಸಿ, 'ಚೆನ್ನಪ್ಪ, ಸುಮ್ಮನೆ ಹೊಡೆದಾಟದಿಂದ ಸುಖ ಇಲ್ಲ ಸ್ವಲ್ಪ ತಾಳ್ಮೆ ಇರೋದು ಒಳ್ಳೆಯದು' ಎಂತ ಅಂದೆ.

ಮನಸ್ಸಿನಲ್ಲೇ ಅಂದುಕೊಂಡೆನೋ, ಅಥವ ಗಟ್ಟಿಯಾಗಿ ಅಂದೆನೋ-ಈಗ ಕೇಳಿದರೆ ಹೇಳಲು ಅನುಮಾನ!

ನನ್ನ ಕಡೆ ಗಮನಿಸುವವರು ಯಾರು!

ಅವನು ಏನು ಮಾಡುತ್ತಾನೆ ಎಂತ ನಾನು ಊಹಿಸುವುದಕ್ಕೆ ಮೊದಲೇ ಆ ದೊಡ್ಡವನು ಇನ್ನೊಬ್ಬನ ಕುತ್ತಿಗೆ ಹಿಡಿದು, 'ಅವಳ್ನ ನಾನು ಬಿಟ್ಟುಬಿಟ್ಟರೆ ಸಾಕು, ಎಂಜಲು ಪಿಟ್ಟಿಗೆ ಕಾದಿರೋ ನಾಯಿ ಎತ್ತಿಕೊಂಡು ಹೋದ ಹಾಗೆ ಹೋಗೋಣ ಅಂತ ಇದ್ದಿಯೇನೋ! ಪಾಪ, ನಾನೇ ಅವಳ್ನ ಬಿಡೋದು! ತಡಿ, ಏನು ಮಾಡ್ತೇನೆ ಅಂತ ತೋರಿಸ್ತೇನೆ.......'

ಅವನ ಮಾತು ಮುಂದೆ ಸಾಗದಂತೆ ಆ ಹುಡುಗ ತನ್ನ ಮುಷ್ಟಿಯಿಂದ ಅವನ ಮುಖದ ಮೇಲೆ ವಿರಾಮವಿಲ್ಲದೇ ಅಪ್ಪಳಿಸುತ್ತಲೇ ಇದ್ದ! ಆದರೆ ಆ ಹುಚ್ಚನಿಗೆ ಆ ಏಟುಗಳು ಲಕ್ಷವೇ ಇರಲಿಲ್ಲ. ಅವನು ಹಿಡಿತ ಸ್ವಲ್ಪವೂ ಸಡಿಲುಮಾಡಲಿಲ್ಲ!

ಇದ್ದಕ್ಕಿದ್ದ ಹಾಗೆ ನನಗೆ ಹೊಳೀತು. ನನ್ನ ಕಣ್ಣೆದುರಿನಲ್ಲೇನೆ ಖೂನಿ ನಡೆದು ಹೋಗುತ್ತೆ, ಅಂತ!

ಏನಾದರೂ ಮಾಡಿ ಅವರನ್ನು ಬಿಡಿಸಬೇಕು ಅಂತ ನಾನು ಮನಸ್ಸಿನಲ್ಲಿ ಅಂದುಕೊಂಡಿದ್ದಷ್ಟೇ, ಒಂದು ಹೆಜ್ಜೆಯನ್ನೂ ಮುಂದಕ್ಕಿಡೋಕೆ ನನ್ನ ಕೈಲಿ ಆಗಲೇ ಇಲ್ಲ!

ನನಗಿಂತ ಆ ಹೆಂಗಸೇ ವಾಸಿಯಾದಳು. ಅವಳು ಮುಂದೆ ಬಂದು ತನ್ನ ಗಂಡನ ಎರಡೂ ಕಾಲು ಹಿಡಿದೆತ್ತಿ ಬಿಟ್ಟಳು.

ಆ ವಯಸ್ಕನಿಗೆ ಆ ಹುಡುಗನ ಕತ್ತು ಹಿಡಿದದ್ದು ಒಂದು ಆಧಾರ; ಕಾಲು ಎತ್ತಿ ಹಿಡಿದಿದ್ದ ಇವಳೇ ಇನ್ನೊಂದು ಆಧಾರ. ಅವನು ಒಂದು ಕೈ ಬಿಟ್ಟದ್ದೇ ಸೊಂಟಕ್ಕೆ ಕೈ ಹಾಕಿ ಚೂರಿ ತೆಗೆದ.......

ಶಕ್ತಿ ಕಡಿಮೆಯಾಗಿ ಆ ಹುಡುಗ ಅವನನ್ನು ಕಡೆಯ ಬಾರಿ ಜಗ್ಗಿದ.

ಇವಳೂ ಆತನ ಕಾಲು ಹಿಡಿದು ಜಗ್ಗಿದಳು. ಮೂವರೂ ನೆಲಕ್ಕೆ ಬಿದ್ದರು, ಹುಚ್ಚ ಮೇಲಕ್ಕೆದ್ದ. ಹುಡುಗ ಏಳಲಿಲ್ಲ. ಅವನ ಎದೆಯಲ್ಲಿ ನಾಟಿತ್ತು ಚೂರಿ.

ಚೆನ್ನಪ್ಪ ನಗುತ್ತಾ ನಿಂತ! ಅದೇ ನಗು!

ಆ ಹುಡುಗಿ ಆ ಹುಡುಗನ ತಲೆಯನ ತೊಡೆಯ ಮೇಲೆತ್ತಿ ಇಟ್ಟು ಕೊಂಡು ಕುಟ್ಟಿಕೊಳ್ಳೋಕೆ ಪ್ರಾರಂಭಿಸಿದಳು.

ನನ್ನ ಕಣ್ಣುಗಳು ಒಂದೇ ಕೆಲಸ ಮಾಡುತ್ತಾ ಇದ್ದುವು—ಆ ಹತ್ಯೆ ನೋಡುತ್ತಾ ನಿಂತಿದ್ದೆ. ಅದನ್ನು ತಪ್ಪಿಸಲು ನನಗೆ ಸಾಧ್ಯವಾಗಲೇ ಇಲ್ಲ!

ಆ ಹುಚ್ಚನು ಬಗ್ಗಿ, ಒಂದು ಕೈಯಲ್ಲಿ ಆ ಹುಡುಗನ ದೇಹ ಎಳೆದು ಹಾಕಿ, ಇನ್ನೊಂದು ಕೈಯಲ್ಲಿ ಅನಾಮತ್ತು ಆ ಹುಡುಗಿಯನ್ನ, ದೊಡ್ಡವರು ಎಳೆಯ ಮಕ್ಕಳನ್ನು ಎತ್ತಿಕೊಂಡು ಹೆಗಲಿಗೆ ಹಾಕಿಕೊಳ್ಳುವಂತೆ, ಹಾಕಿಕೊಂಡ. ಅವಳು ಒದ್ದರೂ ಬಿಡಲಿಲ್ಲ. ಕಚ್ಚಿದರೂ ಬಿಡಲಿಲ್ಲ.

ಮನೆ ಬಿಟ್ಟು ಆಚೆಗೆ ಹೊರಟೇ ಬಿಟ್ಟ! ಈಗಲಾದರೂ ನಾನು ಇನ್ನೊಂದು ಹತ್ಯವನ್ನಾದರೂ ತಪ್ಪಿಸಬಹುದೆಂತ ಅಂದುಕೊಂಡು, ನಾನೂ ಅವನ ಹಿಂದೆ ಅರಚುತ್ತಾ ಓಡಿದೆ! ನಾನು ಮನೆ ಬಿಟ್ಟು ಈಚೆಗೆ ಬರುವುದರೊಳಗಾಗಿ ಆತ ನನಗೆ ಸಂಧಿಸಿದ ಬೆಟ್ಟದ ಕಿಬ್ಬಿಯಲ್ಲಿದ್ದ! ನಾನು ಓಡಿದರೂ ಅವನ ನಡಿಗೆಯ ಸಮಕ್ಕೆ ಹೋಗಲಾಗಲಿಲ್ಲ! ನಾನು ಎಷ್ಟು ಕೂಗಿದರೂ ಅವನು ನಿಲ್ಲಲೇ ಇಲ್ಲ!

ಕೂಗಿ ಸುಖವಿಲ್ಲವೆಂದು ಓಡಿದೆ; ಅವನು ಹೊತ್ತುಕೊಂಡು ಹೋಗುತ್ತಿದ್ದ ಹುಡುಗಿಯ ಭಾರಕ್ಕಿಂತ ನನ್ನ ಒದ್ದೆಬಟ್ಟೆಗಳು ನನಗೆ ಭಾರವಾಗಿ ಕಂಡವು!

ನಾನಿನ್ನೂ ಅಷ್ಟು ದೂರದಲ್ಲಿರುವಾಗಲೇ ಅವನು ಅವಳನ್ನು ಹೊತ್ತು ಕೊಂಡು ದಿಬ್ಬ ಹತ್ತಿದ್ದ. ಅಲ್ಲಿ ಒಂದೇ ಒಂದು ಕ್ಷಣ ನಿಂತು, ಒಂದು ಕೂಗು ಹಾಕಿ ಹಾಕಿಬಿಟ್ಟ!

ಒಂದು ಕ್ಷಣ ನಿಶ್ಶಬ್ದ! ಆ ಮೇಲೆ ಏನೋ ನೀರಿಗೆ ಬಿದ್ದ ಹಾಗೆ ಶಬ್ದ; ಕಪ್ಪೆಗಳ 'ಒಟರ್, ಒಟರ್' ಧ್ವನಿ!

ನಾನು ಪೋಲೀಸಿನವನಾಗಿದ್ದು ಆ ಹತ್ಯಗಳನ್ನು ತಡೆಯಲು ಸಾಧ್ಯವಾಗಲಿಲ್ಲವಲ್ಲ ಎಂತ ಸಂಕಟಪಡುತ್ತಾ ರಸ್ತೆಯ ಕಡೆಗೆ ಕಾಲುಹಾಕಿದೆ.

ಆದರೆ ಪುನಃ ಅದೇನಾದರೂ ನನ್ನೆದುರಿಗೆ ನಡೆದಿದ್ದರೆ ಅದನ್ನು ತಪ್ಪಿಸಲು ಸಾಧ್ಯವಾಗುತ್ತಿರಲಿಲ್ಲ ಎಂತ ಹೇಳಬಲ್ಲೆ.

ನಾನು ಭೂಮಿ ಮೇಲೆ ಇದ್ದೇನೆಯೋ, ಭೂಮಿಯೇ ನನ್ನ ಮೇಲಿದೆಯೋ, ಅಥವ ಕನಸು ಕಾಣುತ್ತಿದ್ದೇನೆಯೋ ಅನ್ನುವ ಹಾಗಿತ್ತು ನನಗೆ.

ರಸ್ತೆಗೆ ಬಂದೆ.

ಮನೆ ಒಳಗೆ ಹೋಗಿ ಆ ಹುಡುಗ ಸತ್ತಿದ್ದಾನೆಯೋ ಇಲ್ಲವೇ, ನೋಡಬೇಕು, ಅಂತ ಆತ್ಮ ಹೇಳುತ್ತಾ ಇತ್ತು. ಆದರೆ ಅದ್ಯಾಕೋ ಪುನಃ ಒಬ್ಬನೇ ಆ ಮನೆಯೊಳಗೆ ಹೋಗಲು ಮನಸ್ಸು ಒಪ್ಪಲಿಲ್ಲ.

ಮನಸ್ಸಿನ ಭಾವನೆ ಏನು ಅಂತ ಹೇಳುವುದಕ್ಕೂ ಆಗುತ್ತಿರಲಿಲ್ಲ. ಹೆದರಿಕೆಯೇ? ಹೆದರಿಕೆ ಎಲ್ಲಿ ಬರಬೇಕು! ನನ್ನ ಅಷ್ಟು ದುಡಿಮೆಗೆ ಇಂತಹದನ್ನು ಎಷ್ಟು ನೋಡಿರಬಹುದು........

ಜನರ ಮುಖ ನೋಡೇನೆ ಅನ್ನಿಸಿತ್ತು. ಚಳಿಗೆ ಮೈನಡುಗುರಿಕೊಂಡು ಹಲ್ಲುಗಳು ಮಾತಾಡುತ್ತಿದ್ದುವು.

ಅಷ್ಟರಲ್ಲಿ ಗಾಡಿಗಳ ಶಬ್ದ ಕೇಳಿಸಿತು.

ಮಧುಗಿರಿ ಕಡೆಯಿಂದ ಮಡಕಸಿರಾಕ್ಕೆ ಹೋಗುವ ಗಾಡಿಗಳು.

ನಿಲ್ಲಿಸಿದೆ! ಮುಂದಿನ ಗಾಡಿಯಾತ ನನ್ನನ್ನು ನೋಡಿ 'ಯಾರು ಸ್ವಾಮಿ, ನೆನೆದು ಒದ್ದೆ ಮುದ್ದೆಯಾಗಿದ್ದೀರಿ! ಬನ್ನಿ, ಬನ್ನಿ ಗಾಡಿಯೊಳಗೆ ಪಂಚೆ ಕೊಡ್ತೀನಿ' ಅಂದ.

'ಬರ್ತೀನೆ, ಆದರೆ ನನಗೆ ಈ ತಕ್ಷಣ ಪೋಲೀಸಿನವರು ಬೇಕು! ಅವರಿಗೆ ವರ್ತಮಾನ ಕೊಡಬೇಕು!'

'ಪೋಲೀಸಿನವರು! ಯಾಕೆ ಸ್ವಾಮಿ!'

ಅಷ್ಟು ಹೊತ್ತಿಗೆ ಇನ್ನೂ ನಾಲ್ಕೈದು ಗಾಡಿಯವರು ಬಂದರು.

'ಇಲ್ಲಿ ಒಂದು ಖೂನಿ ನಡೆದುಹೋಯಿತು, ಈಗ. ಖೂನಿಮಾಡಿದವನು ತನ್ನ ಹೆಂಡತಿಯನ್ನು ತಬ್ಬಿಕೊಂಡು ಆ ಬಂಡೆಯಿಂದ ಭಾವಿಯೊಳಗೆ ನೆಗೆದುಬಿಟ್ಟ! ಖೂನಿಮಾಡಿದವನ ಹೆಸರು ಚಿನ್ನಪ್ಪ.'

ನಾನು ಹೇಳುತ್ತಿದ್ದ ಮಾತಿಗೆ ಅವರು ಆಶ್ಚರ್ಯಪಡೋದು ಬಿಟ್ಟು, ಭಯಪಟ್ಟರು!

ಅವರ ಪೈಕಿ ಒಬ್ಬ ಕೇಳಿದ, 'ಅವನ ಹೆಸರು ನೀವು ಏನು ಎಂತ

ಸ್ವಾಮಿ, ಹೇಳಿದ್ದು?'

'ಚೆನ್ನಪ್ಪ, ಎಂತ. ಕೊಲ್ಲಲ್ಪಟ್ಟವನ ಹೆಸರು ಈರಣ್ಣ ಅಂತ. ಮಿಡಿಗೇಶಿ ಡಾಕ್ಟರರಿಗೆ ಹೇಳಬೇಕು. ಆ ಚೂರಿ ಎದೆಗೇ ಚುಚ್ಚಿ ಪ್ರಾಣ ಹೋಗೇ ಬಿಟ್ಟಿದೆಯೋ, ಇನ್ನೂ ಏನಾದರೂ ಜೀವ ಉಳಿದಿವೆಯೋ, ನೋಡಬೇಕು.'

ಅವರು ಒಬ್ಬರನ್ನೊಬ್ಬರು ನೋಡುತ್ತಿದ್ದರೇ ಹೊರತು ಒಬ್ಬನೂ ಬಾಯಿಬಿಡಲಾರ, ಮುಂದಕ್ಕೆ ಬರಲಾರ! ಇವರು ಯಾಕೆ ಹೀಗಾಡ್ತಾರೆ, ಎನಿಸಿತು, ನನಗೆ!

ಅವರ ಪೈಕಿ ಒಬ್ಬ ಅಂದ; 'ನೀವು ತಕ್ಷಣ ಒಟ್ಟೆ ಬದಲಾಯಿಸದಿದ್ದರೆ ನಿಮಗೆ ಹೆಚ್ಚು ಕಮ್ಮಿ ಆದೀತು! ಈ ದುಪಟಿ ಕೊಡಲೇ? ಆ ಬಟ್ಟೆ ಬಿಚ್ಚಿ ಹಾಕಿ. ಗಾಡೀಲಿ ಕೂಡಿ. ಹೋಗೋಣ ಚಿನ್ನೇನಹಳ್ಳಿಗೆ

'ನಾನು ಈ ಜಾಗ ಬಿಟ್ಟು ಬರಲಾರೆ. ನೀವು ಬರೋಕೆ ಆಗದಿದ್ದರೆ ಮಿಡಿಗೇಶಿ ಡಾಕ್ಟರನ್ನೂ, ಪೋಲೀಸ್ ವೆಂಕಟರಾಯರನ್ನೂ ಕಳಿಸಿ.'

ಅವರಲ್ಲಿ ಒಬ್ಬ ಹೇಳಿದ ಅನುಮಾನಪಡುತ್ತಾ, 'ಇಂಥ ಒಂದು ರಾತ್ರಿಯೇ ಅದು ನಡೆದದ್ದು.'

'ಏನಯ್ಯ ನಡೆದದ್ದು' ಅಂತ ನಾನು ಸ್ವಲ್ಪ ಜೋರಾಗಿಯೇ ಕೇಳಿದೆ.

ಆತ ಒಡನೆಯೇ ಉತ್ತರ ಕೊಡಲಿಲ್ಲ. 'ನೀವ್ಯಾರು ಸ್ವಾಮಿ, ಈ ಪ್ರಾಂತ್ಯಕ್ಕೆ ಬಂದಿರೋದು ಇದೇ ಮೊದಲೋ' ಎಂದ.

ಎರಡು ಮಾತಲ್ಲಿ ಎಲ್ಲ ಹೇಳಿದೆ; ನೀರ್ಕಲ್ಲಿಗೆ ಹೋಗಿದ್ದುದು; ವೆಂಕಟರಾಯರಿಗೂ ನನಗೂ ನಡೆದ ಮಾತು; ಆ ಮೇಲೆ ಆದದ್ದು ಎಲ್ಲವನ್ನು

'ಅದೆಲ್ಲ ಸರಿ, ನಡೀರಿ, ಅಲ್ಲಿಗೆ ಹೋಗೋಣ. ಯಾರಾದರಿಬ್ಬರು ಮಿಡಗೇಶಿಗೆ ಹೋಗಿ; ಇಬ್ಬರು ನನ್ನ ಹಿಂದೆ ಬನ್ನಿ ಆ ಹುಡುಗ ಸಾಯದಿದ್ದರೆ ಬದುಕಿಕೊಳ್ಳಲಿ. ನಾನೂ ಇಂಥಾವು ಏಸೋ ನೋಡಿದ್ದೇನೆ. ಆದರೆ ಆ ಚೂರಿ ನನ್ನ ಕಣ್ಣೆದುರಿಗೇನೆ ಹಿಡಿಮಟ್ಟ ಅವನ ಎದೆಯೊಳಗೆ ಇಳಿದು ಹೋಯಿತು!'

'ನೀವು ತಪ್ಪಿಸೋಕೆ ಪ್ರಯತ್ನಪಡಲಿಲ್ಲವೆ?'

ಯಾರು ಯಾವಾಗ ನನಗೆ ಈ ಪ್ರಶ್ನೆ ಹಾಕಿಬಿಡ್ತಾರೋ ಎಂತ ಹೆದರುತ್ತ ಇದ್ದೆ. ಅದನ್ನೂ ಹಾಕಿಬಿಟ್ಟರು. ಅದಕ್ಕೆ ಏನು ಉತ್ತರ ಕೊಡಬೇಕು

ಅಂತ ನನಗೆ ಗೊತ್ತಿದ್ದರೆ ತಾನೆ!

'ನನಗೆ ನಿಲ್ಲಿಸೋಕೆ ಸಾಧ್ಯವಾಗಲಿಲ್ಲ.'

'ನಡೀರಪ್ಪ, ಹೋಗೋಣ. ತಡ ಮಾಡ್ತಾ ಇದ್ದೀರಲ್ಲ! ಮನೆ ತೋರಿಸ್ತೀನಿ.'

'ನೀವೇನೂ ನಮಗೆ ತೋರಿಸಬೇಕಾಗಿಲ್ಲ. ಮನೇನ ನಾವು ನೋಡಿದ್ದೇವೆ' ಎಂದ ಒಬ್ಬ.

'ನಡೀರಿ, ಸ್ವಾಮಿ, ಆದರೆ ಏನುಕಂಡರೂ ಗಾಬರಿಪಡಬೇಡಿ.'

ಮುಂದೆ ಮುಂದೆ ಹೋದೆವು. ಆ ಜನರ ಪೈಕಿ ಒಬ್ಬ ಅಂದ, 'ದೀಪ ಇದೆಯಲ್ಲ. ಅಲ್ಲಿ!'

ಹೌದು, ನಾನೇ ಮುಂಬತ್ತಿ ಹಚ್ಚಿದ್ದೆ. ಅದು ಉರಿಯುತ್ತಾ ಇದೆ ಇನ್ನೂ. ನೀವು ನಿತ್ಯ ಖೂನಿ ನೋಡೋಲ್ಲ, ಆದರೆ........'

ಬೇಗ ಬೇಗ ಹೋದೆವು.

ಎದೆ ಕಲ್ಲು ಮಾಡಿಕೊಂಡು ನಾನೂ ಮನೆಯೊಳಗೆ ಕಾಲಿಟ್ಟೆ.

ಹುಡುಗನ ದೇಹ ಇಲ್ಲ! ನನಗೆ ಜ್ಞಾನವೇ ಹೋದಹಾಗಾಯಿತು!

ಕಾಲು ಕುಸಿದು ಕೆಳಗೆ ಬೀಳುವುದೊಂದೇ ಬಾಕಿ! ಪಕ್ಕದಲ್ಲಿದ್ದವ ನನ್ನು ಹಿಡಿದುಕೊಂಡೆ.

ಮುಂಬತ್ತಿ ಇನ್ನೇನು ಆರುವುದರಲ್ಲಿತ್ತು. ಸಾಮಾನೆಲ್ಲ ನಾನು ಹೇಗೆ ನೋಡಿದ್ದೆನೋ ಹಾಗೆಯೇ ಇತ್ತು; ಆದರೆ ಹುಡುಗನ ದೇಹ ಇರಲಿಲ್ಲ. ಅದು ಅಲ್ಲಿ ಬಿದ್ದುದಕ್ಕೆ ಒಂದು ಗುರುತೂ ಇರಲಿಲ್ಲ!

'ನನಗೇನೋ ಅರ್ಥವಾಗ್ತಾ ಇಲ್ವಲ್ಲ! ಮನೆಯಲ್ಲಿ ಇನ್ಯಾರೂ ಇರ ಲಿಲ್ಲ! ನಾನು ಮನೆಬಿಟ್ಟಾಗ ಅವನ ಶರೀರ ಅಲ್ಲಿ ಬಿದ್ದಿತ್ತು!'

'ಹವುದು, ಸ್ವಾಮಿ. ಅವನ ತಲೆ ಆ ಮಂಚದ ಬಳಿ ಬಿದ್ದಿತ್ತು!',

'ನಿಂಗೆ ಹೇಗೆ ಗೊತ್ತು!'

ಆತ ನನಗೆ ಉತ್ತರ ಕೊಡಲಿಲ್ಲ. ಒಂದು ಪ್ರಶ್ನೆ ಹಾಕಿದ.

'ನೆಲದ ಮೇಲೆ ನಿಮಗೆ ಏನಾದರೂ ವಿಚಿತ್ರ ಕಾಣಬರುತ್ತದೆಯೆ?'

'ಊಂ, ಕಾಣಿಸುತ್ತೆ. ಬೇಕಾದಷ್ಟು ದೂಳಿದೆ.'

'ಹವುದು. ಈ ದೂಳಿನಲ್ಲಿ ಹೆಜ್ಜೆಯ ಗುರುತುಕಾಣಿಸಬೇಕಲ್ಲ; ನಿಮ್ಮ ಜೋಡಿನ ಗುರುತು ಕಾಣಿಸುತ್ತೆ. ಬೇರೆ ಯಾವ ಹೆಜ್ಜೆಯೂ ಇಲ್ಲವಲ್ಲ!'

ನನಗೆ ಬೀಳುವ ಹಾಗಾಯಿತು 'ಅಬ್ಬ! ಏನು, ನೀನು ಹೇಳೋದು?'

ಮಿಂಚು ಹೊಳೆದ ಹಾಗೆ ನನ್ನ ಮನಸ್ಸಿಗೆ ಹೊಳೆಯಿತು. 'ಏನಪ್ಪ, ನೀನು ಹೇಳೋದು!'

'ಚಿನ್ನಪ್ಪ ವೀರಣ್ಣನ್ನ ಕೊಂದು ತನ್ನ ಹೆಂಡತಿ ಸಮೇತ ಆ ದಿನ್ನೆ ಮೇಲಿಂದ ಬಾವಿಗೆ ಹಾರಿಕೊಂಡದ್ದು, ಇಂಥದೇ ಒಂದು ರಾತ್ರಿ ಈಗ್ಗೆ ಸುಮಾರು ವರ್ಷಗಳ ಕೆಳಗೆ.

'ಅವನದ್ದೊಂದೇ ಮನೆ ಇದ್ದದು. ಈ ಮನೆ ಈಗಲೂ ಖಾನೇಸು ಮಾರಿಯ ಲೆಖ್ಖದಲ್ಲಿ ವೀರ ಚನ್ನನಹಳ್ಳಿ ಎಂತ ಹೆಸರು ಪಡೆದಿದೆ; ಕಂದಾಯದ ಜಮೀನಿರೋದರಿಂದ. ಆದರೆ ಒಕ್ಕಲು ಇಲ್ಲ ಅಂದಿನ ನಾಟಕ ಇಂತಹ ಕೆಟ್ಟರಾತ್ರೆ ಆಗಾಗ್ಯೆ ಆಡಲ್ಪಡುತ್ತಂತೆ. ಅಕಸ್ಮಾತ್, ಇಂದು ನೀವು ಕಂಡಿರಿ'



# 8. ಈರದಿಮ್ಮಮ್ಮ

**ವಿ. ಸೂ**:- ಇವರಲ್ಲಿ ನಾಯಕ ಎಂದು ಉಪಯೋಗಿಸಿರುವ ಪದದ ಅರ್ಥ ವೀರ್ಯದಿಂದ ಜೀವಿಸುವವನು ಎಂತ. ಒಕ್ಕಲಿಗ ಅಥವ ಸಂಸಾರಿ ಎಂಬು ದರ ಅರ್ಥ ಕೃಷಿಯಿಂದ ಜೀವಿಸುವವನು ಎಂತ.

**ಇನ್ನು ಓದಿ,**

ತಾರಣ ನಾಮ ಸಂವತ್ಸರ ಆಶ್ವಯುಜ ಶುದ್ಧ ಮಹರ್ನವಮಿ ದಿನ ನಾನೂ ನಮ್ಮ ಅಣ್ಣನವರ ಭಾವ ಮೈದುನ ರಾಮು ಸಹ ಚಿಕ್ಕ ಬಳ್ಳಾಪುರದಿಂದ ಶ್ರೀ ರಂಗನಾಥ ಸ್ವಾಮಿ ದರ್ಶನಕ್ಕೆಂತ ರಂಗಸ್ಥಳಕ್ಕೆ ಹೊರಟೆವು. ಅಂದೂ ಅದಕ್ಕೆ ಹಿಂದಿನ ದಿನವೂ ಜಡಿಮಳೆ ಒಂದೇ ರೀತಿ ಸುರಿಯುತ್ತಿತ್ತಾದರೂ ನಾವು ಹೋಗಿಯೇ ತೀರಬೇಕೆಂತ ಮನಸ್ಸು ಮಾಡಿದ್ದರಿಂದ ಹನಕಲು ಇದ್ದರೂ ಹೊರಟೆವಾದರೂ ಊರು ದಾಟಿ ಬೈಯಣ್ಣನ ಮಂಟಪದ ಬಳಿ ಬರುವ ಹೊತ್ತಿಗೆ, ಮಳೆ ಧಾರಾಕಾರವಾಗಿ ಬೀಳಲು ಪ್ರಾರಂಭವಾದುದರಿಂದ, ವಿಧಿಯಿಲ್ಲದೆ ಮಳೆ ನಿಲ್ಲುವವರೆಗೆ ಮಂಟಪದಲ್ಲಿ ನಿಲ್ಲಬೇಕಾಯಿತು ನಮ್ಮಂತೆಯೇ ಆ ಮಂಟಪದ ಆಸರೆಯನ್ನು ಹಿಡಿದವರು ಇತರರೂ ಇದ್ದರು. ಅದರಲ್ಲಿ ಚಿಕ್ಕ ಬಳ್ಳಾಪುರದಿಂದ ಸಾಮಾನು ಹೊತ್ತು ತರುತ್ತಿದ್ದ ತಿಪ್ಪೇನ ಹಳ್ಳಿಯ ಒಕ್ಕಲಿಗರ ಲಕ್ಷ್ಮಕ್ಕ, ಬೋದಿಗಾನ ಹಳ್ಳಿಯ ನಾಯಕರ ರಾಮನಾಯಕ—ಇವರು ಮುಖ್ಯವಾದವರು. ಆದಿ ಕರ್ನಾಟಕರ ಇಬ್ಬರು ಹೆಣ್ಣು ಮಕ್ಕಳು, ಕುರಿಪಟ್ಟೆಯೊಡನಿದ್ದ ಒಬ್ಬ ಕುರುಬರಾತ, ಇನ್ನೂ ಕೆಲವರು ನಮ್ಮಂತೆ ಮಂಟಪದ ಆಸರೆಯನ್ನು ಹಿಡಿದಿದ್ದರಾದರೂ ಲಕ್ಷ್ಮಕ್ಕ ರಾಮಯ್ಯ ಇವರೇ ಈ ಕತೆಗೆ ಕಾರಣರಾದುದರಿಂದ ಅವರ ಹೆಸರನ್ನು ಮಾತ್ರ ಇಲ್ಲಿ ಹೇಳಿದ್ದೇನೆ.

ನಾಲ್ಕು ಜನ ಸೇರಿದ ಮೇಲೆ ಅದರಲ್ಲೂ ವಿರಾಮವಾಗಿ ಗಂಟೆಗಳ ಕಾಲ ಕುಳಿತಿರಬೇಕಾದ ಸಂದರ್ಭದಲ್ಲಿ ಮಾತು ಬರದೆ ಇರುತ್ತದೆಯೇ? ಮಾತಿಗೆ ಮಾತು ಬೆಳೆದು, ರಾಮಯ್ಯನಿಗೂ ಲಕ್ಷ್ಮಕ್ಕನಿಗೂ ಬಿರುಸಾದ ವಾಗ್ವಾದ ನಡೆಯಿತು. ಲಕ್ಷ್ಮಕ್ಕ ಮಾತಿನಲ್ಲಿ ಸೋತಳು. ಕೊನೆಗೆ ಕೋಪದಿಂದ'ಎಷ್ಟಾದರೂ ನೀವು ದೊಡ್ಡ ಮನುಷ್ಯರು, ಅದಕ್ಕೇನಪ್ಪ, ಮೊದಲು ಪೂಜೆ ನಿಮಗೆ, ಕಡೆ ಪೂಜೆ ನಮಗೆ. ನಿಮ್ಮ ಜನ ನಮ್ಮೂರಲ್ಲಿ ಬದುಕುತ್ತಾ

ಇರೋದೂ ಒಂದು ಸಾಕ್ಷಿ,' ಎಂದಳು.

'ಇದು ನಿವ್ಮ್ಮೋರು ಹೇಳೋ ಕತೆ. ನವ್ಮ್ಮೋರು ಹೇಳೋ ಕತೆ ಇಲ್ಲವೇ ಇಲ್ಲವೊ?' ಎಂದ ರಾಮನಾಯಕ.

ಜಗಳ ಎತ್ತಲೋ ಹೋಯಿತು. ಮಾತಿನ ಸರಣಿಯಿಂದ ಅವರು ಬೇರೆ ಪ್ರಪಂಚದ ಮಾತಾಡುತ್ತಿದ್ದಾರೆ ಎಂದುಕೊಂಡೆ.

ಲಕ್ಷ್ಮಕ್ಕ ಹೇಳಿದಳು.'ಅದು ಸರಿ ಕಣಣ್ಣಾ, ಈಗ ನಡೀತಾ ಇರೋವ ರಲ್ಲಿ ಏನಾದರೂ ಅಸತ್ಯ ಉಂಟೋ ನೀನೇ ನೋಡಿಕೋ, ನಮ್ಮ ಕತೆ ನಿಜವೊ? ನಿಮ್ಮ ಕತೆ ನಿಜವೊ.'

'ನಿಮ್ಮ ಕತೆಲಿ ನಿಜ ಇರಬೇಕಾದರೆ ಈರದಿಮ್ಮಮ್ಮನ ವರ ಸುಳ್ಳಾಗ ಬೇಕಲ್ಲ, ಸುಳ್ಳಾದ್ದು ನೀನು ಕೇಳಿದ್ದರೆ ಹೇಳು'.

ಇವರಿವರಿಗೆ ಪುನಃ ಮಾತು ಬರದಂತೆ ತಪ್ಪಿಸಬೇಕೆಂತ ನಾನು ಮಧ್ಯೆ ತಲೆ ಹಾಕಿದೆ. 'ಈ ಸೋಮಿಗಳು ಈರದಿಮ್ಮಮ್ಮನ ಕತೆ ಕೇಳಿಲ್ಲ. ಕಣಿವೆ ಈರದಿಮ್ಮಮ್ಮ ದೇವರ ಪಟ್ಟಕ್ಕೆ ಏರಿದ ಹೆಣ್ಣು. ಈ ಕಡೆಯೆಲ್ಲ ಆಕೆ ಸತ್ಯ ಬಹಳ ನಡೆಯುತ್ತೆ—ಎಂತಾರೆ; ಹಣ್ಣುಕಾಯಿ ಮಾಡಸ್ತಾರೆ. ಆಕೆ ಹೆಸರು ಹೇಳಿ ಹರಕೆ ಹೊತ್ತವರನ್ನು ಆಕೆ ಕೈಬಿಟ್ಟಿಲ್ಲ ಅಂತಾರೆ. ನೂರಾರು ವರ್ಷವಾದರೂ ಆಕೆ ಪ್ರಭಾವ ಕಡಿಮೆಯಾಗಿಲ್ಲ, ಅಂತಾರೆ. ಆಕೆ ವಿಚಾರ ನಂಗೂ ಸರಿಯಾಗಿ ಗೊತ್ತಿಲ್ಲ. ಯಾರಾದರೂ ಸ್ವಲ್ಪ ಹೇಳಿ ಎಂದೆ

ನೀನೇ ಹೇಳು ಎಂದಳು ಲಕ್ಷ್ಮಕ್ಕ.

ನೀನೇ ಹೇಳು ಎಂದ ರಾಮಯ್ಯ.

* * * * *

ಚಿಕ್ಕ ಬಳ್ಳಾಪುರದಿಂದ ಗೋರೀಬಿದನೂರಿಗೆ ಹೋಗುವ ರಸ್ತೆ ನರ ಸಿಂಹ ದೇವರ ಬೆಟ್ಟದ ಕಣಿವೆಯೊಂದರಲ್ಲಿ ಹಾದುಹೋಗುತ್ತೆ. ಈ ಕಣಿ ವೆಗೆ ಈರದಿಮ್ಮಮ್ಮನ ಕಣಿವೆ ಎಂದು ಹೆಸರಿಟ್ಟಿದ್ದಾರೆ. ಈಗಿನ ರಾಜ ಮಾರ್ಗ ಮತ್ತು ಅದಕ್ಕೂ ಹಿಂದಿನ ಗಾಡಿ ಜಾಡು ಬೀಳುವುದಕ್ಕೆ ಮೊದ ಲಿಂದ ಆ ದೇವಸ್ಥಾನ ಅಲ್ಲಿದೆ. ಬಹುಶಃ ೪೦೦-೫೦೦ ವರ್ಷಗಳಿಂದ ಅಲ್ಲಿರ ಬಹುದು.

ಮಾಗಡಿ ಕೆಂಪೇ ಗೌಡ ಬೆಂಗಳೂರು ಕಟ್ಟುವುದಕ್ಕಿಂತಲೂ ಆವರೆ

ನಾಡ ಪ್ರಭುಗಳು ಅವರ ರಾಜ್ಯ ಕಟ್ಟುವುದಕ್ಕಿಂತಲೂ ಚಿಕ್ಕಬಳ್ಳಾಪುರದ ಪಾಳೆಯಗಾರರು ಚಿಕ್ಕ ಬಳ್ಳಾಪುರದ ಕೋಟೆ ಕಟ್ಟುವುದಕ್ಕೂ ಮೊದಲು ಹೊಸಕೋಟೆ ಬಳಿ ಹಾಲ್ಸೇಕೆರರು ಒಂದು ಸಣ್ಣ ಪಾಳೆಯಪಟ್ಟು ಕಟ್ಟಿ, ಅಲ್ಲಿ ರಾಜ್ಯವಾಳುತ್ತಿದ್ದರು. ಅದಕ್ಕೆ ಸೇರಿದ್ದ ಒಬ್ಬ ಮಂಡಲಾಧಿಪನಾಯಕ ರಾತ. ಆ ಪಾಳೆಯಪಟ್ಟಿನ ಒಂದು ಮುಖ್ಯ ಗ್ರಾಮ... ಹಳ್ಳಿ, ಆ ಹಳ್ಳಿಯ ಗೌಡನ ಮಗಳೇ ಈರದಿಮ್ಮಮ್ಮ, ಜಾತಿಯಲ್ಲಿ ಒಕ್ಕಲಿಗರು. ಗೌಡ ಭಾರಿ ಸಂಸಾರಿ; ಮೂರು ಜನ ತಮ್ಮಂದಿರು. ತನ್ನ ಏಳು ಗಂಡುಮಕ್ಕಳು, ತನ್ನ ತಮ್ಮಂದಿರ ಮಕ್ಕಳು, ಅವರ ಮಕ್ಕಳು, ಪರಿವಾರ ಎಲ್ಲ ಸೇರಿ ಬಹಳ ಜನ. ಈರದಿಮ್ಮಮ್ಮ ಕೊನೆಯ ಮಗು. ಸುಮಾರು ಹದಿನಾರು ವರ್ಷ ವಯ ಸ್ಸಿರಬಹುದು. ಸ್ಫುರದ್ರೂಪಿ. ತಲೆ ತುಂಬ ಕೂದಲು.

ಒಂದು ದಿನ ಸಂಜೆ ಮಂಡಲಾಧಿಪ ಊರ ಚಾವಡಿಯ ಬಳಿ ಕುದು ರೆಯ ಮೇಲೆ ಕುಳಿತು ಗ್ರಾಮದ ಯೋಗಕ್ಷೇಮ ವಿಚಾರಿಸುತ್ತಿದ್ದ ಕಾಲಕ್ಕೆ ಸರಿಯಾಗಿ, ಪಡುವಣ ಕಡೆಯಿಂದ ಇತ್ತೊಂದು ಅತ್ತೊಂದು, ಹಗ್ಗವಿಲ್ಲದ ಎರಡು ಹೋರಿ ಕರುಗಳನ್ನು ತನ್ನ ಕೇಶರಾಶಿಯಿಂದಲೇ ಹಿಡಿದು ತರು ತ್ತಿದ್ದ ಈರದಿಮ್ಮಮ್ಮನನ್ನು ನೋಡಿದ. ಪಡುವಣ ಕೆಂಪು ಛಾಯೆಯ ಹಿನ್ನಲೆಯಿಂದ ಇಮ್ಮಡಿಯಾದ ಚೆಂದುಳ್ಳ ಯುವತಿಯನ್ನು ನೋಡಿ ನಾಯಕನಿಗೆ ಮನಸ್ಸು ಕಲಕಿತು. ಗೌಡನನ್ನು ವಿಚಾರಿಸಿ ಅವನ ಮಗ ಳೆಂದು ತಿಳಿದೊಡನೆಯೇ ಆಕೆಯನ್ನು ತನಗೆ ಕಾಣಿಕೆಯಾಗಿ ಒಪ್ಪಿಸ ಬೇಕೆಂದು ಹೇಳಿದ. ಹೇಳಿದ ರೀತಿ ವಿನಯವಾಗಿದ್ದರೂ ಆಜ್ಞೆಯೇ ಆಗಿತ್ತು.

ಗೌಡ ವ್ಯವಹಾರವನ್ನರಿತವನು, ಇಲ್ಲವೆಂದು ಹೇಳಲು ಸಾಧ್ಯವಿಲ್ಲ. ಹೇಳಿದರೆ ನಾಯಕನಿಗೆ ತನ್ನನ್ನು ಶಿಕ್ಷಿಸಿ ಆಕೆಯನ್ನು ಬಲಾತ್ಕಾರದಿಂದ ಎಳೆದುಕೊಂಡು ಹೋಗುವ ಶಕ್ತಿಯಿದೆಯೆಂದು ಅರಿತಿದ್ದ. ಕೊಡಲು, ತೆಗೆದು ಉಂಡು ಉಡುವ ಜನವಲ್ಲ. ಮೇಲಾಗಿ ವರಸಾಮ್ಯವಿಲ್ಲ. ಒಂದು ಕ್ಷಣ ಆಲೋಚಿಸಿ 'ಧಣಿ ಚಿತ್ತಕ್ಕೆ ಅಡ್ಡಿಯಿಲ್ಲ. ಮನೆಯವರನ್ನು ಕೇಳಿ ಕನ್ಯೆಯನ್ನು ಸಾಲಂಕೃತವಾಗಿ ದಾನಮಾಡುತ್ತೇನೆ,' ಎಂದ.

ನಾಯಕ ಹದಿನೈದು ದಿನಗಳ ಅವಕಾಶ ಕೊಟ್ಟು ಹೊರಟು ಹೋದ.

ಗೌಡ ರಾತ್ರಿ ಈ ವಿಚಾರವನ್ನು ಮನೆಯಲ್ಲಿ ಚರ್ಚೆಮಾಡಿದ. ನಾಯ ಕನ ಸೀಮೆಯನ್ನಾದರೂ ಬಿಟ್ಟು ಹೊರಟುಹೋಗಬಹುದೇ ಹೊರತು

ಹೆಣ್ಣನ್ನು ಕೊಡಲಾಗದು ಎಂತ ಎಲ್ಲರ ಒಮ್ಮತದ ಅಭಿಪ್ರಾಯ ಹೊರ ಬಿತ್ತು. ಆದರೆ ಅಷ್ಟು ದೊಡ್ಡ ಸಂಸಾರಿ ಭೂಮಿ ಕಾಣಿ ಕಾಳುಕಡಿ, ದನ ಕುರಿ ಬಿಟ್ಟು, ಬೇರೆ ವಲಸೆಹೋಗಲು ಸಾಧ್ಯವೆ! ಹೋದರೂ ಹೆಚ್ಚು ದೂರ ಹೋಗದಿದ್ದರೆ ನಾಯಕನು ಕೈಬೀಸಿ ಆತುಕೊಳ್ಳಲಾರನೆಂದು ಹೇಳುವುದಾದರೂ ಹೇಗೆ?

ಎಲ್ಲಿಗೆ ಹೋಗಬೇಕು? ಅರ್ಕಾವತಿ ಮತ್ತು ಕ್ಷೀರನದಿಗಳ ಎಲ್ಲೆ ದಾಟಿದರೆ ನಿರಾಲೋಚನೆಯಿಂದ ಇರಬಹುದು.

ಇಲ್ಲದಿದ್ದರೆ!

ತನ್ನ ಹಿರಿಯರ ಚರ್ಚೆಯನ್ನು ಕೇಳುತ್ತ ಕುಳಿತಿದ್ದ ಈರದಿಮ್ಮವ್ವ ಹೇಳಿದಳು—'ನಿಮಗೆ ನನ್ನಿಂದಲೇ ಅಲ್ಲವೆ ತೊಂದರೆ. ನನ್ನನ್ನು ಅವನೊಡನೆ ಕಳಿಸಿ. ನನ್ನ ಪ್ರಾಣ ಹೋದರೂ ಸರಿಯೆ, ಮಾನ ಕಾಪಾಡಿಕೊಳ್ಳುತ್ತೇನೆ.'

ಗೌಡ ಹೇಳಿದ. 'ಇದು ಮಹತ್ತರವಾದ ವಿಷಯ, ಮಗು. ಹುಡುಗಿ ನೋಡುವುದಕ್ಕೆ ಚೆಂದಾಗಿದಾಳೆ ಎಂತ ಇಂದು ಗೌಡರ ಮಗಳನ್ನ ಕೇಳಿದ. ನಾಳೆ ಬಡವರ ಮಗುವನ್ನು ಎಳೆದುಕೊಂಡೇ ಹೋಗಬಹುದು. ಮತ್ತೊಂದು ದಿನ ಕಂಡವರ ಹೆಂಡತಿ ಕಣ್ಣಿಗೆ ಚೆನ್ನಾಗಿಕಂಡು ಬಂದರೆ,ಆಕೆಯನ್ನೂ ಸೆಳೆದುಕೊಂಡು ಬಲಾತ್ಕಾರಪಡಿಸಬಹುದಲ್ಲ! ಜನರನ್ನು ಆಳುವವನು ತಂದೆಯಂತಿರಬೇಕೇ ಹೊರತುಅರಿಷಡ್ವರ್ಗಗಳ ಆಳಾಗಿರಬಾರದು.ಅಲ್ಲಿಗೆ ದೇಶಕ್ಷೇಮವೇನಾಗಬೇಕು!

ಅಂತಹ ಸಂದರ್ಭ ಬಂದರೆ ನಾವು ನಾಯಕರ ತೂಕಕ್ಕೆ ಬಾರದೇ ಹೋದರೂ ಅಷ್ಟೇನೂ ಕೈಲಾಗದ ಹೇಡಿಗಳಲ್ಲ. ಭಾರಿ ಸಂಸಾರಿಯಾದ್ದರಿಂದ ನನ್ನ ಮತ್ತು ನಮಗೆ ಬೇಕಾದವರ ಹಿತವನ್ನೂ ನೋಡಬೇಕಾಗಿದೆ. ಭಾರಿ ಯುದ್ಧ ಒದಗುವ ಸಂಭವ ಬರಬಹುದು. ನಿನ್ನನ್ನು ಕಳಿಸಿಕೊಡುವ ಸ್ಥಿತಿ ಬರುವ ಕಾಲಕ್ಕೆ ಯಾವುದೂ ನೋಡುವುದಿಲ್ಲ.

ಸೂರ್ಯ ಮುಳುಗಿ ಒಂದೆರಡು ಗಂಟೆ ಹೊತ್ತಾಗಿತ್ತು. ನಿರ್ಮಲವಾದ ಆಕಾಶದಲ್ಲಿ ನಕ್ಷತ್ರಕೋಟಿಗಳು ಮಿನುಗುತ್ತಿದ್ದುವು.ಎಲ್ಲವೂ ನಿಶ್ಶಬ್ದವಾಗಿತ್ತು. ಗಾಳಿ ಸಹ ಅಲುಗಾಡದೆ ನಿಂತಂತಿತ್ತು. ಆಗ ಇದ್ದಕ್ಕಿದ್ದ ಹಾಗೆಯೇ ಬಿರುಗಾಳಿ ಬೀಸಿ,ಆಕಾಶವು ಮೇಘಾಚ್ಛಾದಿತವಾಗಿ ಗುಡುಗಿನ

ಅಬ್ಬರ ಅಲ್ಲೊಂದು ಇಲ್ಲೊಂದರಂತೆ ಕೇಳಲಾರಂಭಿಸಿತು.

ಗೌಡಜ್ಜ ಆಕಾಶವನ್ನೇ ನೋಡುತ್ತ ಗಟ್ಟಿಯಾಗಿ ಯೋಚಿಸಿದ-

'ಮುಂಗಾರು ಪ್ರಾರಂಭವಾಯಿತು. ಉಂ, ಇದೇ ಕಾಲದಲ್ಲಿ ನಾವು ಜಾಗ್ರತೆ ಮಾಡಿ ಅರ್ಕಾವತಿ ಮತ್ತು ಕ್ಷೀರ ನದಿಗಳನ್ನು ನಮ್ಮ ಮತ್ತು ಮಂಡಲಾಧಿಪನ ಮಧ್ಯೆ ಬರುವಂತೆ ಮಾಡಿದರೆ, ಆ ಮೇಲೆ ಉತ್ತರಪ್ರಾಂತ್ಯ ಎತ್ತಲಾದರೂ ಹೋಗಿ ನೆಲೆಸಬಹುದು. ಮಳೆಗಾಲವಾಗುವುದರಿಂದ ಅವರು ನಮ್ಮನ್ನು ಬೆನ್ನಟ್ಟಿ ಬರುವುದು ಕಷ್ಟವಾಗುವುದು'.

'ಒಂದೇ ನಲ, ಸಾಮಾನು, ಸರಂಜಾಮು, ದನಕರು, ಇವುಗಳನ್ನು ಎತ್ತಿಬಿಟ್ಟರೆ ಮಂಡಲಾಧಿಪನಿಗೆ ಅನುಮಾನ ಬಂದು ತಡೆ ಹಾಕಿದರೆ! ಅದಕ್ಕೋಸ್ಕರ ಒಳ್ಳೆ ಮಳೆ ಹೊತ್ತಿಗೆ ಮುಹೂರ್ತ ಏರ್ಪಾಡುಮಾಡಿ ಮದುವೆ ಓಡಾಟದಲ್ಲಿ ಧಾರೆ ಎಂತ ಇತರರು ಭಾವಿಸಿಕೊಳ್ಳುವ ಹಾಗೆ ಮಾಡಿ ಭಾವಣಿ ಕೀಳಬೇಕು. ನಾವು ವಲಸೆ ಹೋಗುತ್ತಿದ್ದೇವೆ ಎಂತ ಮಂಡಲಾಧಿಪನಿಗೆ ತಿಳಿಯುವ ವೇಳೆಗೆ, ನಾವು ಎರಡು ಮೂರು ಪಯಣವಾದರೂ ಮಾಡಿರಬೇಕು. ಅವರು ನಮ್ಮನ್ನು ಬೆನ್ನಟ್ಟಿ ಬರುವ ವೇಳೆಗೆ ನದಿಯಲ್ಲಿ ತುಂಬ ಪ್ರವಾಹ ಬಂದು, ಅದು ನಮಗೂ ಅವರಿಗೂ ಮಧ್ಯೆ ಬರಬೇಕು. ನಾವು ಪಾರಾಗಬೇಕು, ಅವರು ಹಿಂದುಳಿಯಬೇಕು. ಹೊಳೆ ಇಳಿಯುವ ವೇಳಗೆ ನಾವು ಅವರ ಗಡಿನಾಡಿನಿಂದ ದೂರವಾಗಿರಬೇಕು' ಎಂದ.

ಗೌಡಜ್ಜ-ಇನ್ನು ಹದಿನೈದು ದಿನದೊಳಗೆ ಮದುವೆಮಾಡಿಕೊಡುವುದಕ್ಕೆ ಮುಹೂರ್ತಗಳಿಲ್ಲವೆಂದೂ ಯುಗಾದಿಯಾದ ಮೇಲೆ ಮದುವೆ ಮಾಡಿಕೊಡುವುದಾಗಿಯೂ ಮಂಡಲಾಧಿಪನಿಗೆ ಹೇಳಿ ಕಳಿಸಿದ. ಭರಣಿ ಮಳೆಯ ಪ್ರಾರಂಭದ ವೇಳೆಗೆ ಚಪ್ಪರದ ಮುಹೂರ್ತವನ್ನಿಟ್ಟು ಆಳನ್ನು ಅಟ್ಟಿದ.

ಇನ್ನೇನು, ಮದುವೆ ನಾಳೆ ಇಲ್ಲ. ನಾಡದ್ದು ಎನ್ನುವ ರಾತ್ರೆ ಗೌಡಜ್ಜ ಸಮಸ್ತ ಪರಿವಾರದೊಡನೆ ತನ್ನ ಯಾವದ್ವಿಶಿಷ್ಟ ಚರ ಆಸ್ತಿಯ ಸಮೇತ ತೆಕ್ಕಿತ್ತು ಹೊರಟುಬಿಟ್ಟ.

ಅರ್ಕಾವತಿಯನ್ನು ದಾಟಿದುದಾಯಿತು. ಭರಣಿಯ ಮಳೆಯಲ್ಲಿ ಮೊದಲನೆಯ ಪಾದದಲ್ಲಿ ಬಲವಾದ ಮಳೆ ಬಂತು. ಮಂಡಲಾಧಿಪನನ್ನು ದೂರ ಮಾಡಿದೆವು, ಅರ್ಕಾವತಿ ತಮಗೆ ದಯತೋರಿದಳೆಂದು ಗೌಡಜ್ಜ

ಮನಸ್ಸು ಧೈರ್ಯಮಾಡಿಕೊಂಡು, ಸಂಜೆಯವೇಳೆಗೆ ಕ್ಷೀರ ನದಿಯ ದಡ ದಲ್ಲಿ ಬಿಡಾರ ಬಿಡಲು ಏರ್ಪಾಡುಮಾಡಿ ಆಕಾಶದ ಕಡೆ ತಲೆ ಎತ್ತಿ ನೋಡು ತ್ತಾನೆ! ಕೆಂಪಗೆ ದೂಳು ಏಳುತ್ತಿದೆ! ಮರ ಹತ್ತಿ ದೂಳು ಎದ್ದಿದ್ದ ದಿಕ್ಕಿನಲ್ಲಿ ನೋಡಿದರೆ ಸೈನಿಕರ ಶಸ್ತ್ರಾಸ್ತ್ರಗಳು ಬಿಸಿಲಿನಲ್ಲಿ ಹೊಳೆಯುತ್ತಿವೆ!

ಗೌಡಜ್ಜ ಗಾಬರಿಗೊಂಡು ಬಿಡಾರವನ್ನು ಕೀಳುವುದರೊಳಗೆ ಕ್ಷೀರ ನದಿಯಲ್ಲಿ ಹುಚ್ಚು ಹುಚ್ಚಾಗಿ ಪ್ರವಾಹ ಬಂದು, ದಾಟಲಸಾಧ್ಯವಾಗಿ ಬಿಟ್ಟಿತು. ಗೌಡಜ್ಜನಿಗೆ ಎದೆಯೇ ಒಡೆದುಹೋಯಿತು! ಮಂಡಲಾಧಿಪನ ಕೈಗೆ ಸಿಕ್ಕಿದರೆ! ಅವನ ಕೋಪಾಗ್ನಿಯಲ್ಲಿ, ಗೌಡಜ್ಜ ಪರಿವಾರ ಸಮೇತ ವಾಗಿ ಸುಟ್ಟು ಬೂದಿಯಾಗುವುದಿಲ್ಲವೆ!

ಯುದ್ಧಮಾಡಬಹುದು; ಆದರೂ ಅವನ ಸೈನ್ಯ ಬಲಕ್ಕೂ ತನ್ನವರ ಬಲಕ್ಕೂ ಅಜಗಜಾಂತರ!

ಈರದಿಮ್ಮಮ್ಮ ಕ್ಷೀರ ನದಿಯ ಬಳಿ ಹೋಗಿ ಅದನ್ನು ಪೂಜಿಸಿ, ತನ್ನ ಕಿವಿಯ ಓಲೆಗಳೆರಡನ್ನೂ ತೆಗೆದು ನದಿಯ ದಡದ ಮೇಲಿಟ್ಟು, ತಾನು ಹುಟ್ಟಿದಂದಿನಿಂದ ಅದುವರೆಗೂ ತನ್ನ ತಾಯಿತಂದೆಗಳನ್ನು ದೇವರೆಂಬ ಭಾವನೆಯಿಂದ ತಾನು ಕಂಡಿದ್ದುದು ಸತ್ಯವೇ ಆದರೆ, ಕ್ಷೀರನದಿಯು ತಮಗೆ ದಾರಿಕೊಟ್ಟು ತಮ್ಮ ಶತ್ರುಗಳನ್ನು ತಡೆದು, ತಾವು ಹೋದ ದಾರಿ ಅವರಿಗೆ ಗೊತ್ತಾಗದಂತೆ ಮಾಡಬೇಕೆಂತಲೂ, ಅಥವಾ ಅದು ಅಸತ್ಯವಾದರೆ ತನಗಾಗಿ ಊರುಬಿಟ್ಟು ಬಂದಿರುವ ತಮ್ಮವರಿಗೆ ತೊಂದರೆ ತಪ್ಪಲು ತನ್ನನ್ನು ತಾನು ಬಲಿಕೊಡಲು ಸಿದ್ಧಳಾಗಿರುವುದಾಗಿಯೂ ನುಡಿದು ನದಿ ಯೊಳಗೆ ಕಾಲಿಟ್ಟಳು.

ಒಂದು ಕ್ಷಣಕ್ಕೆ ಹಿಂದೆ ಹುಚ್ಚು ಹುಚ್ಚಾಗಿ ಹರಿಯುತ್ತಿದ್ದ ಹೊಳೆಯ ಪ್ರವಾಹ ಇದ್ದಕ್ಕಿದ್ದಂತೆಯೇ ಕಮ್ಮಿಯಾಗಿ, ಅವರು ದಾಟುವುದಕ್ಕೆ ಸಾಧ್ಯ ವಾಯಿತು. ಅವರು ಪರಿವಾರ ಸಮೇತ ಹೊಳೆ ದಾಟುವುದೇ ತಡ, ಪುನಃ ಪ್ರವಾಹವು ಮೊದಲಿಗಿಂತ ಹೆಚ್ಚಾಗಿ, ಹುಚ್ಚು ಹುಚ್ಚಾಗಿ ದಾಟಲಸಾಧ್ಯವಾ ಗುವಷ್ಟು ಬಂದುಬಿಟ್ಟಿತು.

ಒಂದೆರಡು ಪಯಣಗಳಲ್ಲಿ ಗೌಡಜ್ಜ ಪರಿವಾರದ ಸಮೇತ ನಂದಿ ಸಂಸ್ಥಾನಕ್ಕೆ ಬಂದ. ನಂದಿಯನಾಯಕ ಗೌಡಜ್ಜನಿಗೆ ಆಶ್ರಯಕೊಡಲು ಹೆದರಿದ. ಹಾಗೆಯೇ ಚಿಕ್ಕಬಳ್ಳಾಪುರದ ನಾಯಕನೂ ಹೆದರಿದ.

ಚಿಕ್ಕಬಳ್ಳಾಪುರದ ಸರಹದ್ದನ್ನೂದಾಟಿ ಈಗಿನ ತಿಪ್ಪೇಪಲ್ಲಿಯ ಬಳಿಗೆ ಬಂದರು. ಅಷ್ಟು ವೇಳೆಗೆ ಬಿಸಿಲು ನೆತ್ತಿಗೆ ಬಂದಿತ್ತು. ಜನ, ದನ ಎಲ್ಲ ದಣಿದಿದ್ದುವು. ಗುಡ್ಡದ ತಪ್ಪಲು. ವಿಸ್ತಾರವಾದ ಮಟ್ಟಸ ಪ್ರದೇಶ. ಅದರ ಹಿಂದೆ ಭಾರಿ ಕಾಡು. ಮುಗಿಲನ್ನು ಮುಟ್ಟಲು ಒಂದರೊಡನೊಂದು ಪೈ ಪೋಟಿಯಿಂದ ಮೇಲೆ ಹೋಗುತ್ತಿವೆಯೋ ಎಂಬಂತೆ ಬೆಳೆದಿದ್ದ ವಿವಿಧ ಗಿಡಮರಗಳು. ದನ ನೆಳಲಿಗೆ ಆಸೆಪಟ್ಟು ನಿಂತುಬಿಟ್ಟವು. ಕುರಿ ಮೇಕೆ ಬಾಯಾಡಲು ಗಿಡಕ್ಕೆ ಬಿದ್ದುವು.

ಗೌಡಜ್ಜ ಅಲ್ಲೇ ನಿಂತ. ತನ್ನವರೊಡನೆ ಸಮಾಲೋಚನೆ ನಡೆಸಿದ. 'ನಾವು ತಳವೂರಿ ಊರುಕಟ್ಟುವುದಕ್ಕೆ ಈ ಸ್ಥಳ ಚೆನ್ನಾಗಿದೆ. ಇದಕ್ಕೆ ನೀವೇನೆನ್ನುತ್ತೀರಿ' ಎಂದ.

ಈರದಿಮ್ಮಮ್ಮ, 'ಸ್ಥಳವೇನೋ ಚೆನ್ನಾಗಿದೆ. ಯಾರೂ ಇಲ್ಲ. ಪಾಳ್ಯ ಕಟ್ಟಿಲ್ಲ. ಆದ್ದರಿಂದ ಯಾರ ಹದ್ದು, ಬಸ್ತೂ ಈ ಕಡೆ ಬೆಳೆದಿಲ್ಲ ಅಂತ ಕಾಣುತ್ತೆ. ಆದರೆ ನೀರು' ಎಂದಳು.

ಜನ ಸುತ್ತ ಹುಡುಕಿಕೊಂಡು ಹೋಗಿ ನೋಡಿದರು. ಒಂದೆರಡು ಮೈಲಿ ಸುತ್ತಳತೆಯಲ್ಲಿ ನೀರೇ ಇಲ್ಲ. ಈರದಿಮ್ಮಮ್ಮನೂ ಅಲ್ಲಲ್ಲಿ ಸುತ್ತಾಡಿ, ಈಗ ಆಕೆಯ ಹೆಸರಿನಲ್ಲಿ ಬಾವಿ ಇರುವ ಜಾಗದಲ್ಲಿ, ಅಗಿಯಿರೆಂತ ತನ್ನ ಜನಕ್ಕೆ ಹೇಳಿದಳು. ಮೊಣಕಾಲುದ್ದ ಅಗೆಯುವುದರೊಳಗಾಗಿ ನೀರು ಕಂಡು, ಸೊಂಟದುದ್ದ ಸಹ ಅಗೆಯಲು ಸಾಧ್ಯವಾಗದೆ, ನೀರು ಉಕ್ಕಿ ಹರಿಯಲಾರಂಭಿಸಿತು.

ಸಂಸಾರಿಗೆ ಬೇಕಾದುದೇನು? ನೀರು, ನೆಳಲು, ಸ್ಥಳ. ಅವೆಲ್ಲ ಇಲ್ಲಿ ಯಥೇಚ್ಛವಾಗಿತ್ತು. ಇದಕ್ಕಿಂತ ಉತ್ತಮವಾದ ಪ್ರದೇಶ ಹುಡುಕಿಕೊಂಡು ಹೋಗಬೇಕೆಂತ ಗೌಡಜ್ಜನಿಗೆ ಅನಿಸಲಿಲ್ಲ. ಅಲ್ಲಿ ನಿಂತ. ಊರು ಕಟ್ಟಿಯಾಯಿತು. ಆತನ ಹೆಸರನ್ನೇ ಆ ಊರಿಗಿಟ್ಟರು.

ಅಲ್ಲಿಗೆ ಬಂದು ಸುಮಾರು ಒಂದು ವರ್ಷ ಆಗಿತ್ತು. ಅಷ್ಟು ಹೊತ್ತಿಗೆ ಗೌಡಜ್ಜ ಚೆನ್ನಾಗಿಯೇ ಕುದುರಿಕೊಂಡಿದ್ದ.

ಒಂದು ದಿನ ಮಧ್ಯಾಹ್ನ ಊಟದ ಹೊತ್ತು ಈರದಿಮ್ಮಮ್ಮ ಹೊಲದಲ್ಲಿ ಕೆಲಸ ಮಾಡುತ್ತಿದ್ದ ತಮ್ಮವರಿಗೆ ಬುತ್ತಿ ಎತ್ತಿಕೊಂಡು ಹೋಗಿ ಅವರನ್ನೆಲ್ಲಾ ಕೂಡಿಸಿ ಊಟಕ್ಕಿಟ್ಟಳು. ಅವರು ಊಟಕ್ಕೆ ತುತ್ತು ಎತ್ತುವ

ವೇಳೆಗೆ ಅವರ ಮುಂದೆ ಒಬ್ಬಾತ ನಿಂತ.

ಆತ ಪ್ರಾಯದ ಆಳು. ಸುಮಾರು ೨೦-೨೨ ವರ್ಷ ವಯಸ್ಸಿರ ಬಹುದು. ಎಣ್ಣೆಗೆಂಪು ಬಣ್ಣ. ಬಲವಾದ ಮೈಕಟ್ಟು; ಎತ್ತರವಾದ ನಿಲುವು. ಬಿಳಿ ಅರಿವೆ ಧರಿಸಿಕೊಂಡಿದ್ದ; ಕಾಲಿಗೆ ಗಿರ್ಕಿ ಚಡಾವು. ತಲೆಗೆ ಕೆಂಪುಬಣ್ಣದ ರೇಶ್ಮೆವಸ್ತ್ರ ಸುತ್ತಿದ್ದ.

ಆದರೆ ಊಟಮಾಡಿ ಎರಡು ದಿನವಾಗಿದ್ದಂತೆ ಕಂಡು ಬರುತ್ತಿತ್ತು. ಅವನ ಮುಖದಿಂದ.

'ನನಗೇನಾದರೂ ಒಸಿ ಹಿಟ್ಟು ಸಿಕ್ತದಾ, ಹೊಟ್ಟೆ ಬಹಳ ಹಸಿದೈತೆ' ಎಂದ.

ಈರದಿಮ್ಮಮ್ಮನ ದೊಡ್ಡಣ್ಣ 'ನೀವು ಯಾವ ಜನ, ಅಣ್ಣ,' ಎಂದ

ಈರದಿಮ್ಮಮ್ಮ ಅಂದಳು: 'ಊಟದ ಹೊತ್ತಿಗೆ ಬಂದಿದ್ದಾನೆ, ಹೊಟ್ಟೆ ಹಸಿದವ. ಉಣುವ ಆತ ಜಾತಿ ಕೇಳದಿದ್ದ ಮೇಲೆ, ಇಕ್ಕುವ ನಮಗ್ಯಾಕಣ್ಣ' ಮೊದಲು ಊಟ ಮಾಡಲಿ, ಈಗ ಯಾವ ಬಣ ಅಂತ ಕೇಳಿ ಅವರಿಗೇನು ಹೆಣ್ಣು ಕೊಡಬೇಕಾಗಿದೆಯೇ ಆ ಮೇಲೆ ಹೊಟ್ಟೆ ಹಸಕೊಂಡೇ ಮುಂದಕ್ಕ ಹೋಗಬೇಕಾದೀತು'.

ಆವನ ಕಡೆ ತಿರುಗಿ, 'ಏಳಣ್ಣ, ಭಾವೀಲಿ ಕೈಕಾಲು ತೊಳಕೊಂಡು ಬಾ' ಎಂದಳು.

ಎಷ್ಟು ದಿವಸವಾಗಿತ್ತೋ ಊಟಮಾಡಿ, ಎನ್ನುವ ಹಾಗೆ ಆತ ಊಟ ಮಾಡಿದ.

ಊಟ ಆದ ಮೇಲೆ ವಿಚಾರಿಸಿದಲ್ಲಿ-ಆತನ ಹೆಸರು ವೀರನಾಯಕ ನೆಂತಲೂ ದಾರಿ ನಾಯಕನ ಪಾಳ್ಯದವನೆಂತಲೂ ಮನೆಯಲ್ಲಿ ಏನೋ ಮನಸ್ತಾಪ ಬಂದು ಪುನಃ ಅತ್ತ ತಿರುಗಕೂಡದೆಂತ ಮನಸ್ಸುಮಾಡಿ ಇತ್ತ ಬಂದಿದ್ದನೆಂತಲೂ, ಶಾಂತಿಯ ಕಾಲದಲ್ಲಿ ಬೇಸಾಯಮಾಡಲಿಕ್ಕೂ ಜಂಗಿನ ಕಾಲದಲ್ಲಿ ಯುದ್ಧಮಾಡಲಿಕ್ಕೂ ಸಿದ್ಧನಾಗಿರುವವನೆಂತಲೂ, ಅವರು ಆಶ್ರಯಕೊಟ್ಟಲ್ಲಿ ಅಲ್ಲಿಯೇ ಉಳಿಯುವುದಾಗಿಯೂ ತಿಳಿಯಬಂತು

ಈರದಿಮ್ಮಮ್ಮನ ಅಣ್ಣಂದಿರು ಯಾರೂ ಏನೂ ಹೇಳಲಿಲ್ಲ. ಈರ ದಿಮ್ಮಮ್ಮ ಮಾತ್ರ 'ಈತ ಮನೆ ಬಿಟ್ಟು ಬಂದಿದಾನೆ, ನಮ್ಮಿಂದ ಅಷ್ಟೇನೂ ದೂರ ಸ್ಥಳದವನೂ ಅಲ್ಲ. ಇಷ್ಟ ಬಂದಷ್ಟುದಿನ ನಮ್ಮಲ್ಲಿರಲಿ. ಹೋಗ

ಬೇಕೆನಿಸಿದ ಕಾಲಕ್ಕೆ ಮನ ಬಂದತ್ತ ಹೋಗಲಿ,' ಎಂದಳು.

ಈರದಿಮ್ಮಮ್ಮನ ದೊಡ್ಡಣ್ಣ ಹೇಳಿದ; ಈತನ ಜನ ನಮ್ಮಲ್ಲಿ ಯಾರೂ ಇಲ್ಲ. ಈತನಿಗೆ ಹೆಚ್ಚುಕಡಿಮೆಯಾದರೆ ಯಾರು ನೋಡಿಕೊಳ್ಳು ತ್ತಾರೆ? ಅಷ್ಟೇ ಅಲ್ಲ. ಬಾಳೆಯ ತೋಟದಲ್ಲಿ ಗೊಬ್ಬಳಿ ಗಿಡ ನಾಟಿದ ಹಾಗೆ, ಅನ್ಯ ಜನವನ್ನು ತಂದು ನಮ್ಮಲ್ಲಿಟ್ಟು ಕೊಂಡು ಬೆಳೆಸಿದರೆ, ಬಾಳೆ ಗಿಡ ಕ್ಕಿಂತ ಮೀರಿ ಬೆಳೆದು ಗಿಡದ ಕೆಳಗೆ ನೆರಳಿದೆ ಅಂತ ಭ್ರಮಿಸಿ ಹೋದರೆ, ನೆರಳಿಗೆ ಬದಲು ಕಾಲೊಳಗೆ ಮುಳ್ಳು ಮುರಿದಂತೆ ಆದರೆ ಕಷ್ಟವಾಗುತ್ತೆ ಈತನು ನಮ್ಮಲ್ಲಿ ಬೇಡ. ಪ್ರಪಂಚ ವಿಸ್ತಾರವಾಗಿದೆ. ಅದರಲ್ಲಿ ನಮ್ಮಂತಹ ವರೆಷ್ಟು ಮಂದಿಯೊ'– ಎಂದ.

'ಮನೆಬಿಟ್ಟು ಬಂದಿದಾನೆ, ಇರಲಿ. ಇದ್ದರೇನಂತೆ' ಎಂತ ಈರದಿಮ್ಮ ಮ್ಮನ ಮತ.

ಕೊನೆಗೆ ಆತ ತಿಪ್ಪೇನ ಹಳ್ಳಿಯಲ್ಲಿ ಇರುವುದೆಂತ ಗೊತ್ತಾಯಿತು.

ವೀರನಾಯಕ ಸೋಮಾರಿಯಲ್ಲ ದೇಹಧಾರ್ಢ್ಯವಿದ್ದ ಯುವಕ ನಾಗಿದ್ದುದರಿಂದ ಕೆಲಸಮಾಡುವುದರಲ್ಲಿ ಯಾರಿಗೂ ಹಿಂದೆ ಬೀಳುತ್ತಿರ ಲಿಲ್ಲ ಮನೆಯವರಿಗಿಂತ ಹೆಚ್ಚು ಶ್ರದ್ಧೆ ವಹಿಸಿ ಕೆಲಸಮಾಡುತ್ತಿದ್ದ.

ಆದರೆ ಅವನ ಮನಸ್ಸಿನಲ್ಲಿ ಏನು ಭಾವನೆ ಬಂದಿತ್ತೋ ಹೇಳುವವ ರಾರು?

ಚೈತ್ರಮಾಸ; ಹೊಲಗದ್ದೆಗಳಲ್ಲಿ ಕೆಲಸ ಅಷ್ಟೇನೂ ಹೆಚ್ಚಾಗಿರ ಲಿಲ್ಲ. ಈರದಿಮ್ಮಮ್ಮ ದನ ಹೊಡೆದುಕೊಂಡು ಕಾಡಿಗೆ ಹೋಗಿದ್ದಳು. ಒಳ್ಳೆ ಮಧ್ಯಾಹ್ನದ ಹೊತ್ತು. ದನ ಹೊಟ್ಟೆ ತುಂಬ ಮೇದು, ನೆರಳಲ್ಲಿ ಮಲಗಿ ಮೆಲುಕಾಡುತ್ತಿದ್ದುವು. ಈರದಿಮ್ಮಮ್ಮನ ಹಿಂದೆ ಬಂದಿದ್ದ ಹುಡುಗ ರೆಲ್ಲ ಕುರಿಮೇಕೆಗಳ ಹಿಂದಿದ್ದರು. ಈರದಿಮ್ಮಮ್ಮ ಒಂದು ಮರದ ಕೆಳಗೆ ಕುಳಿತು ಅಡಿಕೆಲೆ ಹಾಕಿಕೊಳ್ಳುತ್ತಿದ್ದಳು.

ಆ ವೇಳೆಗೆ ವೀರನಾಯಕ ಬಂದ. ನನಗೂ ಸ್ವಲ್ಪ ಅಡಿಕೆಲೆ ಕೊಡು ಎಂದ. ಈರದಿಮ್ಮಮ್ಮ ಕೊಟ್ಟಳು. ಆತ ಕೈ ಹಿಡಕೊಂಡ; 'ನಿನ್ನ ಕಂಡು ಭ್ರಮಿಸಿದೇನೆ. ನಿನಗಾಗಿ ಇಲ್ಲಿ ನಿಂತೆ. ನನ್ನ ಕೈಬಿಡಬೇಡ,' ಎಂದ.

'ವೀರಣ್ಣ, ನೀನು ಮಾಡ್ತಿರೋ ಕೆಲಸ ನ್ಯಾಯವೇ–ನೀನೇ ಆಲೋ ಚನೆಮಾಡು; ನೀನು ಮನೆ ಇಲ್ಲ ಅಂದಿ; ನಮ್ಮ ತಂದೆ ನಿನಗೆ ಮನೆ ಇಲ್ಲ

ವಲ್ಲಪ್ಪ ಎಂಬ ಭಾವನೆ ಬರದ ಹಾಗೆ ನೋಡುತ್ತಿದಾನೆ. ಅಲ್ಲಿಗೆ ನಾನು ಸಿಂಗೇನಾಗಬೇಕು? ನೀನು ನನ್ನ ಕಂಡು ಭ್ರಮಿಸಿರಬಹುದು. ಆದರ ಸ್ವಜಾತಿ ಅಲ್ಲ, ನಾನು ನಿನ್ನ ಅಣ್ಣ ಅಂತ ತಿಳಕೊಂಡಿದೀನಲ್ಲ; ಅಣ್ಣನ್ನ ಮಾಮ ಎಂತ ಹೇಗೆ ಕರೆಯೋದು. ಯಾಕೋ ನಮ್ಮಣ್ಣ ಹೇಳಿದ ಹಾಗೆ ಜಾತಿ ಅಲ್ಲದ ಜಾತಿಯಾದ್ದರಿಂದ, ಗೊಬ್ಬಳೀ ಗಿಡದಂತೆ ಬೆಳೆದೆಯಲ್ಲ, ನ್ಯಾಯವೇ,' ಎಂದಳು.

ಆದರೆ ವೀರನಾಯಕನಿಗೆ ಈರದಿಮ್ಮಮ್ಮನ ಹಂಬಲ ಹುಚ್ಚಿನಂತೆ ಹಿಡಿದಿತ್ತು. ಜೊತೆಗೆ ಯೌವನ. ಕಾಡಿನಲ್ಲಿ ಒಬ್ಬಳೇ ಕೈಗೆ ಸಿಕ್ಕಿದಾಳೆ. ಹೆಂಗಸು, ಕೈಲಾಗದವಳು. ಸಮಯ ಬಿಡಬಾರದೆಂತ ಬಲವಂತವಾಗಿ ಅಂಗಸಂಗಮಾಡಬೇಕೆಂತ ಬಯಸಿದ. ಈರದಿಮ್ಮಮ್ಮ ಅವಕಾಶಕೊಡ ಲಿಲ್ಲ. ಉಯಿಲಿಟ್ಟಳು. ಒಂದು ಕ್ಷಣದೊಳಗೆ ಹುಡುಗರೆಲ್ಲ ಓಡಿ ಬಂದರು; 'ಏನಕ್ಕ' ಎಂದರು. ವೀರನಾಯಕನ ತಪ್ಪನ್ನು ಅವರಿಗೆ ತಿಳಿಸಿ ಅವನ ತಲೆ ತೆಗೆಸೋಕೆ ಆಕೆಗೆ ಇಷ್ಟ ಬರಲಿಲ್ಲ ಅವನು ತನ್ನ ತಪ್ಪು ತಿಳಿದುಕೊಂಡು ತಿದ್ದಿಕೊಳ್ಳಲು ಒಂದು ಅವಕಾಶವನ್ನು ಕೊಡಬೇಕೆನಿಸಿತು—ಅವಳಿಗೆ. ಅವಳ ಸಹಾಯವಿಲ್ಲದಿದ್ದರೆ ಅವನು ಅಲ್ಲಿ ಇರಲು ಅವಕಾಶವೇ ಸಿಗುತ್ತಿ ರಲಿಲ್ಲ. ಹಸಿದು ಸಾಯುತ್ತಿದ್ದವನಿಗೆ ಅನ್ನ ಇಟ್ಟು, ಜೀವ ಕೊಟ್ಟು ಅದನ್ನು ತನ್ನ ಕೈಯಿಂದ ಕಸಿದುಕೊಳ್ಳಲು ಅವಳ ಮನ ಹಿಂಜರಿಯಿತು.

'ಹುಲಿ ಬಂತು ಕೂಗಿಕೊಂಡೆ. ವೀರನಾಯಕ ಬಂದ, ಹುಲಿ ಓಡಿ ಹೋಯಿತು, ಎಂತ ಹೇಳಿಬಿಟ್ಟಳು; ಮತ್ತು ವೀರನಾಯಕನ ಕಡೆ ತಿರುಗಿ, 'ಇನ್ನು ಮೇಲೆ ಇಂಥ ಕೆಲಸಮಾಡಿದರೆ ನಿನ್ನ ಗತಿ ಮುಗಿದಂತೆಯೇ' ಎಂಬ ಅರ್ಥ ಬರುವ ನೋಟವನ್ನು ಬೀರಿದಳು.

ಕಾಮಾಂಧನಾದ ಅವನಿಗೆ ಇದರಿಂದ ಪ್ರಜ್ಞೆ ಬಂದೀತೇ! ಅವನ ಮೇಲೆ ದಯೆತೋರಿಸಿದ್ದು ಹಾವಿಗೆ ಹಾಲೆರೆದಂತೆಯೇ ಆಯಿತು. ನನ್ನ ಮೇಲೆ ಆಕೆಗೆ ಮನಸ್ಸು ಇರಬಹುದು. ಅದಕ್ಕೆ ಆಕೆ ಯಾರಿಗೂ ಹೇಳ ದಿದ್ದುದು ಅಂತ ಕಾಣುತ್ತೆ. ಇನ್ನೂ ಸ್ವಲ್ಪ ನಾಚಿಕೆಯೋ, ಯಾರಾದರೂ ಕಂಡಾರು ಎಂಬ ಭಯವೋ ಇದೆ. ಇಂದಿಲ್ಲದಿದ್ದರೆ ನಾಳೆ ಆಕೆ ನನ್ನವಳಾ ಗುತ್ತಾಳೆ-ಎಂತ ಅವನು ಭ್ರಮಿಸಿದ!

ಇದಾದ ಹದಿನೈದು ದಿವಸ ಎಂದಮೇಲೆ, ಒಂದು ಸಲ ಈರದಿಮ್ಮಮ್ಮ

ಹೊರಗಾಗಿ ಒಬ್ಬಳೇ ಇದ್ದಾಗ ಒಳ್ಳೆ ಸರಿ ರಾತ್ರಿಯಲ್ಲ ವೀರನಾಯಕ ಆಕೆ ಮಲಗಿದ್ದಲ್ಲಿಗೆ ನುಗ್ಗಿ, ಮಲಗಿದ್ದವಳನ್ನು ಹಿಡಿದುಕೊಳ್ಳಲು ಹೋದ ಈರದಿಮ್ಮಮ್ಮನಿಗೆ ಎಚ್ಚರವಾಗಿ ಪುನಃ ಕೂಗಿಕೊಂಡಳು ಆಕೆಯ ಅಣ್ಣ ತಮ್ಮಂದಿರೆಲ್ಲ ಓಡಿ ಬಂದು ಏನಾಯಿತು, ಎಂತ ಕೇಳಿದರು. ಆಗಲೂ ಆಕೆ ಅವನನ್ನು ಬಿಟ್ಟುಕೊಡಲಿಲ್ಲ. ಏನೋ ಕೆಟ್ಟ ಕನಸಾಯಿತೆಂದಳು.

ಅಲ್ಲಿಂದಾಚೆಗೆ ಆಕೆ ಎಲ್ಲಿಗೂ ಒಬ್ಬಳೇ ಹೋಗುತ್ತಿರಲಿಲ್ಲ. ಸಾಧ್ಯವಾದಷ್ಟು ವೀರನಾಯಕನ ಕಣ್ಣಿಗೆ ಬೀಳದಂತೆ ಕಾಲ ಹಾಕುತ್ತಿದ್ದಳು.

ಇದು ಬಹಳ ದಿನ ನಡೆಯಬೇಕಾಗಲಿಲ್ಲ. ಮಧುಗಿರಿಯ ಪಾಳೆಯಗಾರರ ಕಡೆಯವರು ಕನ್ಯಾನ್ವೇಶಣಕ್ಕಾಗಿ ಅತ್ತ ಬಂದರು. ಜೋಡಿ ಈದು, ಜಾತಕ ಎಲ್ಲ ಸರಿಹೋಗಿ ಹೆಣ್ಣು ತೆಗೆದುಕೊಳ್ಳಲು ಅವರೂ ಒಪ್ಪಿದರು. ಕೊಡಲು ಇವರೂ ಒಪ್ಪಿದರು.

ಶುಭಮುಹೂರ್ತದಲ್ಲಿ ಲಗ್ನವೂ ನೆರವೇರಿತು. ಹೆಣ್ಣು ಮಗಳನ್ನು ಬಹಳ ವಿಜೃಂಭಣೆಯಿಂದ ಅತ್ತೆಯ ಮನೆಗೆ ಸಾಗಗೊಳಿಸುವ ಏರ್ಪಾಡೂ ಆಯಿತು.

ಈರದಿಮ್ಮಮ್ಮ ಮರುಗಳಿಗೆಗೆ ಗಂಡನ ಮನೆಗೆ ಹೋಗಿದ್ದವಳು ತೌರು ಮನೆಗೆ ಬಂದು ಕೆಲವು ದಿವಸವಿದ್ದಳು. ಆಕೆಯನ್ನು ಊರಿಗೆ ಕರೆದುಕೊಂಡು ಹೋಗಲು ಸ್ವತಃ ಗಂಡನೇ ಬಂದ. ಅವರ ಹಿಂದೆ ಬೆನ್ನುಗಾವಲು ಯಾರು ಹೋಗಬೇಕೆಂಬ ಪ್ರಶ್ನೆ ಬಂದಾಗ ವೀರನಾಯಕ ತಾನು ಹೋಗುವುದಾಗಿ ಹೇಳಿದ. ಅಣ್ಣತಮ್ಮಂದಿರು ಅಷ್ಟು ಜನ ಇರುವಾಗ ಸ್ವಜನವಲ್ಲದ ಮತ್ತು ಪರಿವಾರದವನು ಮಾತ್ರ ಎಂದೆನಿಸಿಕೊಂಡ ಆತನು ಹೋಗುವುದು ಚೆನ್ನಾಗಿ ಕಾಣುವುದಿಲ್ಲವೆಂತ ಗೌಡಜ್ಜ ಮತ್ತು ಇತರರು ಹೇಳಿದರು. ಆದರೆ ವಿನಾಶಕಾಲಕ್ಕೋ ಎಂಬಂತೆ ಅಳಿಯ 'ಆತನೂ ಮನೆಯವನಂತೆಯೇ ಅಲ್ಲವೆ, ಬಂದರೆ ಬರಲಿ. ನಮ್ಮಲ್ಲೂ ಎರಡು ದಿನ ಇದ್ದು ಬರಲಿ. ಆತನು ಮನೆ ಬಿಟ್ಟು ಬಂದಿದ್ದೇನೆ ಎಂತ ಹೇಳ್ತಾನೆ ಅವನ ಮದುವೆ ನೀವೇ ಮಾಡಿಸಬೇಕಾಗುತ್ತಲ್ಲವೆ, ನಮ್ಮ ಕಡೆ ಇವರ ಜನ ಪೂರಾ ಇದ್ದಾರೆ. ಯೋಗ್ಯವಾದ ಕಡೆಯಿಂದ ಒಂದು ಹೆಣ್ಣು ತಂದು ಲಗ್ನ ಮಾಡುವ ಪ್ರಯತ್ನ ಮಾಡೋಣ' ಎಂದ.

ಅಂತೂ ವೀರನಾಯಕನೇ ಅವರ ಸಂಗಡ ಹೊರಟ ಮುಂದೆ

ಗಾಡಿ, ಅವರ ಕೆಳಗೆ ಈರದಿಮ್ಮಮ್ಮ ಸಾಕಿದ್ದ ನಾಯಿ 'ತಮ್ಮ' ಬೀಳ್ಕೊಡಲು ಹಿಂದೆ ಬಂದಿದ್ದ ದೊಡ್ಡವರಿಂದ ಅಪ್ಪಣೆ ತೆಗೆದು ಕೊಳ್ಳಲೋಸುಗ ನವದಂಪತಿಗಳು ಇನ್ನೂ ಗಾಡಿ ಹತ್ತಿರಲಿಲ್ಲ. ಗಾಡಿ ಮುಂದೆ ಮುಂದೆ ಹೋಗುತ್ತಿತ್ತು. ನವದಂಪತಿಗಳು ಸಂತೋಷವಾಗಿ ತಮ್ಮ ತಮ್ಮಲ್ಲೀ ನಕ್ಕು ನಲಿಯುತ್ತ ನಿಧಾನವಾಗಿ ನಡೆಯುತ್ತಿದ್ದರು. ಅವರ ಏಕಾಂತಕ್ಕೆ ಭಂಗ ತರುವ ಇಷ್ಟ ತನಗಿಲ್ಲವೆಂಬ ಭಾವನೆ ತೋರಿಸುವ ಹಾಗೂ ಅದರ ಅವರ ನೈಗಾವಾಗಲೀ ತನ್ನ ಕರ್ತವ್ಯವೆಂದು ಅಂತಿರುವವನಂತೆಯೂ ಸುಮಾರು ೫೦ ಗಜಗಳಷ್ಟು ದೂರ ಮುಂದೆ ಮುಂದೆ ಹೋಗಿ ಅವರು ತನ್ನನ್ನು ದಾಟಿ ೫೦ ಗಜ ಹೋಗುವ ವರೆಗೂ ಕುಳಿತಿದ್ದು ಆಮೇಲೆ ಬೇಗ ಬೇಗ ಅವರನ್ನು ದಾಟಿ ಹೋಗುತ್ತಿದ್ದ.

ದಂಪತಿಗಳು ನಡೆಯುತ್ತಿದ್ದುದನ್ನು ಕಂಡ 'ತಮ್ಮ' ಗಾಡಿಯ ನೆರಳನ್ನು ಬಿಟ್ಟು ತನ್ನ ಒಡತಿಯೊಡನೆಯೇ ಹೋಗ್ತಾ ಇತ್ತು.

ಇವರು ಕಣಿವೆಯ ಇಳಿಜಾರಾದ ಇಕ್ಕಟ್ಟಾದ ಹಾದಿಯನ್ನು ನಡೆದು ಹೆಚ್ಚುಕಮ್ಮಿ ಈಗ ಈರದಿಮ್ಮಮ್ಮನ ದೇವಸ್ಥಾನ ಇರುವವರೆಗೆ ಬಂದರು. ಅಲ್ಲಿಂದ ಒಂದು ಹತ್ತು ಹೆಜ್ಜೆ ಮುಂದಕ್ಕೆ ಹೋದರೆ ಪಾಳ್ಯಕ್ಕೆ ಬೆಟ್ಟಗುಡ್ಡಗಳಲ್ಲಿ ಒಂದು ಹಾದಿ ಹೋಗುತ್ತದೆ. ಅಲ್ಲಿಗೆ ಬರುವ ವೇಳೆಗೆ ವೀರನಾಯಕ ಹಿಂದಿನಿಂದ ಬಂದವನು ಕತ್ತಿಯನ್ನು ಹಿರಿದು, ಒಂದೇ ಏಟಿಗೆ ಈರದಿಮ್ಮಮ್ಮನ ಗಂಡನ ಕತ್ತನ್ನು ಕಡಿದುಬಿಟ್ಟ ಮತ್ತು ಒಳ್ಳೆಯ ಮಾತಿನಲ್ಲಿ ತನ್ನಿಷ್ಟ ಬಂದಂತೆ ನಡೆದರೆ ತಾನು ಆಕೆಯನ್ನೂ ತಮ್ಮೂರಿಗೆ ಕರೆದುಕೊಂಡುಹೋಗಿ ಚೆನ್ನಾಗಿ ನೋಡಿಕೊಳ್ಳುವುದಾಗಿಯೂ ಇಲ್ಲದಿದ್ದರೆ ಆಕೆಯೊಡನೆ ಬಲತ್ಕಾರದಿಂದ ಕೂಡಿ ಆಕೆಯ ಸತೀತ್ವವನ್ನು ಅಪಹಾರಮಾಡಿ ಆ ಕತೆಯನ್ನು ಆಕೆ ಯಾರಿಗೂ ಹೇಳದಿರುವಂತೆ ಮಾಡಲು ಆಕೆಯನ್ನು ಕಡಿದು ತಾನು ದೇಶಾಂತರ ಹೋಗುವುದಾಗಿ ಹೆದರಿಸಿದ.

ವೀರನಾಯಕ ಇಷ್ಟು ಹೇಳುತ್ತಿರುವ ವರೆಗೂ, ತಮ್ಮ ಸುಮ್ಮನಿರಲಿಲ್ಲ ಮೃತನ ರಕ್ತದಲ್ಲಿ ಹೊರಳಾಡಿ ಮೈಯೆಲ್ಲ ರಕ್ತಮಾಡಿಕೊಂಡು ಊರಿನ ಕಡೆ ಓಡಲಾರಂಭಿಸಿತು.

ವೀರನಾಯಕ ಇದನ್ನು ಗಮನಿಸಿ ಅದನ್ನು ಅಟ್ಟಿಸಿಕೊಂಡು ಹೋಗಿ ಕತ್ತಿ ಬೀಸಿದ. ಅದರ ಬಾಲ ಮಾತ್ರ ಕತ್ತರಿಸಿ ಬಿತ್ತು. ಅಡೀನೊ ಊರು

ಕಡೆಗೆ ಓಡಿಯೇ ಬಿಟ್ಟಿತ್ತು.

ವೀರನಾಯಕನ ಮಾತುಗಳನ್ನು ಕೇಳಿದ ಈರದಿಮ್ಮಮ್ಮನಿಗೆ, ಏನು ಹೇಳುವುದಕ್ಕೂ ತೋಚಲಿಲ್ಲ. ಆದರೆ ಏನಾದರೂ ಮಾಡಿ ತನ್ನ ಸತೀತ್ವ ವನ್ನು ಉಳಿಸಿಕೊಳ್ಳಬೇಕೆಂದು ದೃಢಮಾಡಿಕೊಂಡಿದ್ದಳು. ಮತ್ತು ಏನು ಮಾಡಬೇಕಂತ ಆಲೋಚನೆ ಮಾಡುವುದಕ್ಕೆ ವೀರನಾಯಕ ನಾಯನ್ನು ಅಟ್ಟಿಸಿಕೊಂಡು ಹೋಗಿ ಹಿಂತಿರುಗಿ ಬರುವಷ್ಟು ಕಾಲ ವಿರಾಮ ಸಿಕ್ಕಿತ್ತು.

ವೀರನಾಯಕ ಬರುತ್ತಿದ್ದವನು ಗಡುಸಾಗಿಯೇ, 'ಉಂ, ಏನೆನ್ನು ತ್ತೀಯ!' ಎಂದ.

ಈರದಿಮ್ಮಮ್ಮ ಒಂದು ಪುಸಿನಗೆ ನಕ್ಕು 'ನಾಯಕ, ನನ್ನ ಜೀವ ಉಳಿ ಯಬೇಕಾದರೆ ನೀನು ಹೇಳಿದ ಹಾಗೆ ಕೇಳಬೇಕು. ನಾನು ನಿನ್ನ ಹಿಂದೆ ಬಂದಮೇಲೆ ನಮ್ಮಿಬ್ಬರ ಜೀವ ಉಳಿಯಬೇಕಾದರೆ ಈ ಹೆಣಸುಟ್ಟು ಗುರು ತಿಲ್ಲದ ಹಾಗೆ ಮಾಡಬೇಕು. ನಾವು ಹೆಚ್ಚು ದೂರ ಹೋಗಬಾರದು ತಯಾರುಮಾಡು, ಚಿತೆಯನ್ನು' ಎಂದಳು.

ಅವಳು ತನ್ನವಳಾಗಲು—ಒಪ್ಪಿದಳಲ್ಲ ಎನ್ನುವ ಸಂತೋಷದ ಮುಂದ ಅದರ ಪೂರ್ವಾಪರಗಳನ್ನು ವಿಮರ್ಶಿಸುವಷ್ಟು ಬುದ್ಧಿಯಾದರೂ ಎಲ್ಲಿ ಬರಬೇಕು, ಆ ವಿವೇಕ ಶೂನ್ಯನಿಗೆ!

ಹತ್ತು ಜನ ಮಾಡಲು ಸಾಧ್ಯವಿಲ್ಲದಷ್ಟು ಬೇಗನೆ ವೀರನಾಯಕ ಒಂದು ಚಿತೆ ಸಿದ್ಧಮಾಡಿದ.

'ಹೆಣ ಚಿತೆಮೇಲಿಡೋಣ, ನೀನುಬಲವಾದವನು, ಭುಜ ಹಿಡಿದೆತ್ತು. ನಾನು ಹೆಣ್ಣು ಹೆಂಗಸು, ಇವನು ನನ್ನ ಗಂಡನಾಗಿದ್ದವನು. ಅವನ ಕಾಲು ನಾನು ಒಂದು ಸಲ ಹಿಡಿದರೆ ನನಗೇನೂ ಪಾಪ ಬರೋದಿಲ್ಲ; ಇನ್ನೂ ಗಂಡ ಸತ್ತ ಮರುಗಳಿಗೆಗೇ ಪರಪುರುಷನಾಗಿದ್ದ ನಿನ್ನ ಹಿಂದೆ ಹೋಗುವು ದರಿಂದ ಬರುವ ಪಾಪದಲ್ಲಿ ಸ್ವಲ್ಪವಾದರೂ ಹೋಗಲಿ. ಅದಲ್ಲದೆ ರಕ್ತ ಸುರಿಯುತ್ತಿರುವುದು ನೋಡಿದರೆ ನನಗೆ ತಲೆ ತಿರುಗಿದ ಹಾಗಾಗುತ್ತೆ' ಎಂದಳು.

ಆಕೆಯ ಮನಸ್ಸಿನಲ್ಲಿರುವುದು ಆ ಕ್ಷುದ್ರನಿಗೆ ಹೇಗೆ ಗೊತ್ತಾಗಬೇಕು! ಹೆಣವನ್ನು ಎತ್ತುವುದಕ್ಕೆ ಅವನು ಬಗ್ಗಿದನೋ ಇಲ್ಲವೋ, ಅವನ ಸೊಂಟ ದಲ್ಲಿದ್ದ ಕತ್ತಿಯನ್ನು ರೆಪ್ಪೆ ಹೊಡೆಯುವುದರೊಳಗಾಗಿ ಸೆಳೆದು, ಒಂದೇ,

ಏಟಿಗೆ ನಾಯಕನ ಕುತ್ತಿಗೆಯನ್ನು ಕತ್ತರಿಸಿಯೇ ಬಿಟ್ಟಳು! ಆ ಶಿರ ಅವಳ ಕಾಲ ಮೇಲೆ ಬಿತ್ತು. ಹಲ್ಲು ಕಚ್ಚಿ ಅವನು ಹೆಣ ಎತ್ತುತ್ತ ಇದ್ದನೋ ಏನೋ, ಬೀಳುವ ರಭಸಕ್ಕೆ ಆಕೆ ಬಲಗಾಲಿನ ಹೆಬ್ಬೆಟ್ಟನ್ನು ಬಲವಾಗಿ ಕಚ್ಚಿಕೊಂಡು ಬಿಟ್ಟಿತು. ಎಷ್ಟು ಝಾಡಿಸಿದರೂ ಬಿಡಲೇ ಇಲ್ಲ

ಒಂದು ಕ್ಷಣದೊಳಗಾಗಿ, ತಮ್ಮ ಹೋಗಿ ಆಕೆಯವರನ್ನೆಲ್ಲಾ ಕರೆದು ಕೊಂಡು ಬಂದಿತು.

ಇತ್ತ ಈ ಗಾಡಿಯಲ್ಲಿದ್ದವರು ಸ್ವಲ್ಪಹೊತ್ತು ಕಾದು, ಇವರು ಬಾರದು ದನ್ನು ಕಂಡು ಹಿಂತಿರುಗಿ ಬಂದು ನೋಡುತ್ತಾರೆ!

'ಈ ಘೋರ ಕಾಣಿಸುತ್ತಾ ಇದೆ!'

ಗೋಳಾಡುವವರೆಲ್ಲ ಗೋಳಾಡಿದ್ದಾಯಿತು

ಈರದಿಮ್ಮಮ್ಮ ಹೇಳಿದಳು, 'ಚಿತೆ ಸಿದ್ಧವಾಗಿದ. ನನ್ನ ಪತಿಯ ದೇಹವನ್ನು ಅದರ ಮೇಲಿಡಿ. ನಾನೂ ಅವನ ಹಿಂದೆ ಹೋಗುತ್ತೇನೆ!'

ಯಾರು ಎಷ್ಟು ತಡೆದರೂ ಆಕೆ ತನ್ನ ಮನಸ್ಸು ಬದಲಾಯಿಸಲಿಲ್ಲ. ನನ್ನ ಗಂಡನ ಜೊತೆಯಲ್ಲಿದ್ದ ಎರಡು ದಿನ ನಾನು ಬೇಕಾದ ಸುಖ ಅನು ಭವಿಸಿದೆ. ಅವನಿಗೋಸ್ಕರ ಮೀಸಲಾಗಿದ್ದ, ಚರ್ಮ ಮುಚ್ಚಿರುವ ಮಾಂಸ ಮೂಳೆಗಳ ದೇಹ ಅವನ ಹಿಂದೆಯೇ ಹೋಗಲಿ ಎಂದಾದರೂ ಒಂದು ದಿನ ಬಿದ್ದು ಹೋಗುವುದು ಅಲ್ಲವೆ?, ಈ ದೇಹ, ಎಂದಳು

ಆಕೆಯ ಮಾತಿಗೆ ಎಲ್ಲರೂ ಒಪ್ಪಲೇ ಬೇಕಾಯಿತು

ಚಿತೆ ಅಣಿಯಾಯಿತು. ಆದರೂ ಆ ರುಂಡ ಕಚ್ಚಿದ್ದದ್ದು ಬಿಟ್ಟಿರ ಲಿಲ್ಲ; ಆಗ ಆಕೆ ನಾನು ಹುಟ್ಟಿದಂದಿನಿಂದ ಸತ್ಯವನ್ನು ಹೇಳಿದ್ದರೆ, ಮದುವೆ ಯಾಗುವ ವರೆಗೆ ತಂದೆತಾಯಿಗಳೇ ದೇವರೆಂತಲೂ, ಮದುವೆಯಾದ ಮೇಲೆ ಗಂಡನೇ ದೇವರೆಂತಲೂ ಭಾವಿಸಿದ್ದುದು ನಿಜವಾದರೆ, ನಾನು ಹೋದ ಮೇಲೂ ನನ್ನ ಹೆಸರು ಈ ಪ್ರಾಂತ್ಯದಲ್ಲಿ ನಿಲ್ಲಲಿ. ಎಂತಹ ವೀರ ಕ್ಷಾಮ ಬಂದರೂ ನಮ್ಮೂರಿನಲ್ಲಿ ನಮ್ಮ ಬಾವಿಯ ನೀರು ಕಮ್ಮಿಯಾಗದಿ ರಲಿ. ನನ್ನ ಹೆಸರು ಹೇಳಿ ಹರಕೆ ಹೊತ್ತವರಿಗೆ ಅವರ ಇಷ್ಟಾರ್ಥಗಳು ನೆರವೇರಲಿ. ಉಂಡ ಮನೆಗೆ ಎರಡು ಬಗೆದ, ತಾನು ಸತ್ತರೂ ನನ್ನನ್ನೂ ಬಿಡಲು ಇಚ್ಛೆ ಇಲ್ಲದಿರುವ, ಈ ಭಂಡನ ವಂಶ ನಮ್ಮೂರಲ್ಲಿ ಬೆಳೆಯದಿ ರಲಿ. ನನ್ನ ಹೆಸರು ಹೇಳಿ ಯಾರಾದರೂ ಗುಡಿ ಕಟ್ಟಿದರೆ ಈ ಭಂಡನಿಗೆ

ವನಗಿಂತ ಮೊದಲು ಪೂಜೆಯಾಗಲಿ–' ಎಂತ ವರ ಕೊಟ್ಟಳು.

ಕಾಲ ಹೆಬ್ಬೆಟ್ಟ ಕಚ್ಚಿದ್ದ ಆ ಹಲ್ಲುಗಳು ಆಕೆಯ ಹೆಬ್ಬೆಟ್ಟ ಬಿಟ್ಟವು. ಹೆಣವನ್ನು ಚಿತೆಯ ಮುಂದಿಟ್ಟು ಬೆಂಕಿ ಒಟ್ಟಿದ ಮೇಲೆ, ಈರದಿಮ್ಮಮ್ಮ ಹಿರಿಯರಿಗೆಲ್ಲ ನಮಸ್ಕಾರಮಾಡಿ ತನ್ನ ದೊಡ್ಡಣ್ಣನ ಮಾತು ಸರಿಯೆಂತ ನುಡಿದು, ಚಿತೆ ಹತ್ತಿಯೇ ಬಿಟ್ಟಳು. ಒಂದರೆ ಕ್ಷಣ. ಬ್ರಹ್ಮರಂಧ್ರ ಬಿರಿದು ಆಕೆಯ ಆತ್ಮ, ಆತನಲ್ಲಿ ಅಂತರ್ಧಾನವಾಯಿತು.

ವೀರನಾಯಕನನ್ನು ಒಂದು ಕಡೆ ಮಣ್ಣು ಮಾಡಿ ಅವರೆಲ್ಲ ಅಳುತ್ತಾ ಊರಿಗೆ ಹೊರಡಲು ನೋಡುತ್ತಾರೆ! ತಮ್ಮನೂ ಪ್ರಾಣ ಬಿಟ್ಟಿದ್ದಾನೆ.

ಈರದಿಮ್ಮಮ್ಮನಿಗೆ ಒಟ್ಟಿದ್ದ ಚಿತೆಯ ಬಳಿಯೇ ತಮ್ಮನನ್ನೂ ಮಣ್ಣು ಮಾಡಿದರು

ಇದು ನಡೆದು ಬಹಳ ದಿವಸವಾಯಿತು. ಸುಮಾರು ೫-೬ ಶತಮಾನಗಳಿರಬಹುದು. ಆ ಕಣಿವೆಗೆ ಇಂದಿಗೂ ಈರದಿಮ್ಮಮ್ಮನ ಕಣಿವೆಯೆಂದೇ ಹೆಸರು.

ಆಕೆಯನ್ನು ದಹನ ಮಾಡಿದ ಸ್ಥಳದಲ್ಲಿ ಒಂದು ಗುಡಿ ಎದ್ದಿದೆ. ಆ ಗುಡಿಯಲ್ಲಿ ಹಗಲು ರಾತ್ರಿ ಪೂಜೆಗೆಂತ ಒಬ್ಬಾತ ಸಿದ್ಧವಾಗಿರುತ್ತಾನೆ. ಎದುರಿಗೆ ಸದಾ ಉರಿಯುತ್ತಿರುವ ಅಗ್ನಿಕುಂಡ.

ಸುತ್ತು ಮುತ್ತು ಹಳ್ಳಿಯವರು, ಹರಕೆಮಾಡಿಕೊಂಡಿದ್ದವರು, ಹರಕೆ ತೀರಿಸಲು ಬಂದು, ಪೂಜೆ ಮಾಡಿಕೊಂಡು ಹೋಗುತ್ತಾರೆ. ಆಕೆಗೆ ಹರಿಸಿಕೊಂಡ ಪ್ರಾರ್ಥನೆ ಇದುವರೆಗೂ ನೆರವೇರದೆ ಹೋಗಿರುವಂತೆ ಯಾರಿಂದಲೂ ಕೇಳಿಲ್ಲ.

ಆಕೆಯ ಪೂಜೆಗೆಂದು ಬಂದವರು ಆಕೆಯ ಗುಡಿಗೆ ಹತ್ತುವ ಹಾದಿಯಲ್ಲಿರುವ, ವೀರನಾಯಕನೆಂದು ಕರೆಯಲ್ಪಡುವ, ಒಂದು ಕಲ್ಲಿನಮೇಲೆ, ತಿಳಿದೋ ತಿಳಿಯದೆಯೋ ತಮ್ಮ ಬಾಯಲ್ಲಿರುವ ತಂಬುಲವನ್ನು ಉಗಿದು ಬಾಯಿ ಮುಕ್ಕಳಿಸಿ ಆ ನೀರನ್ನೂ ಅಲ್ಲುಗಿದು, ಆ ರೀತಿ ವೀರನಾಯಕನಿಗೆ ಮೊದಲಿನ ಪೂಜೆ ಸಲ್ಲಿಸಿ, ಆ ಮೇಲೆ ಈರದಿಮ್ಮಮ್ಮನಿಗೆ ಪೂಜೆ ಸಲ್ಲಿಸುತ್ತಾರೆ.

'ನಾನು ಮೊನ್ನೆ ಆಕಡೆ ಹೋಗಿದ್ದೆ. ಅಲ್ಲಿ ಅಂಥಕಲ್ಲು ಯಾವುದೂ ಇಲ್ಲವಲ್ಲಮ್ಮ' ಎಂದೆ.

'ಈಗಿನ ಪೂಜಾರಿ ಸ್ವಲ್ಪ ತಿಳಿದವರು. ಪಂಗಡಗಳಿಗೆ ದ್ವೇಷ ಬೆಳೆಯ ಬಾರದೆಂದು ಆ ಕಲ್ಲು ತೆಗೆದು ಬಿಟ್ಟಿದ್ದಾನೆ ಆದರೆ ಈ ಕತೆ ಕೇಳಿದವರೆಲ್ಲ ಅವನ ನಡತೆಗೆ ಥೂ ಎನ್ನುತ್ತಾರೆ. ಅದೇ ಅವನಿಗೆ ಸಿಗುವ ಅಗ್ರಪೂಜೆ

ಏನಾಗಲಿ, 'ತಿಪ್ಪೇಪಲ್ಲಿ ಗ್ರಾಮದ ಎಲ್ಲೆಕಟ್ಟಿನಲ್ಲಿ ನಾಯಕರಿಗೆ ಈಗಲೂ ಏಳಿಗೆಯಿಲ್ಲ' ಎಂತ ಆಕೆ ಕತೆ ಮುಗಿಸಿದಳು.

ಅಷ್ಟು ಹೊತ್ತಿಗೆ ಮಳೆಯೂ ನಿಂತಿತು. ನಾವು ದೇವಸ್ಥಾನಕ್ಕೆ ಹೊರಟೆವು.

ಕತೆ ಏನಾದರೂ ಇರಲಿ. ಆ ಕಣಿವೆಗೆ ಈಗಲೂ ಈರದಿನ್ನಮ್ಮನ ಕಣಿವೆ ಎಂತ ಹೆಸರು. ಅಲ್ಲಿ ಆಕೆಯ ಹೆಸರಿನ ಗುಡಿ ಇದೆ. ಮೇಲೆ ಹೇಳಿದಂತೆ ಪೂಜೆಯೂ ನಡೆಯುತ್ತಿದೆ.



## 9. ನನ್ನ ಮದುವೆ

ಈ ಕತೆಗೆ ಇಟ್ಟಿರುವ ಹೆಸರನ್ನು ಓದಿದೊಡನೆಯೇ ಅಥವ ಕೇಳಿದೊಡನೆಯೇ 'ಇದೇನಪ್ಪ' - ಶ್ರೀನಿವಾಸರ 'ರಂಗಪ್ಪನ ಮದುವೆ'ಯಂಥ ಕತೆಗಳು ಹೊರಬೀಳುತ್ತಿವೆ. ಅವರ ಕತೆಗಳನ್ನು ಓದಿದವರಲ್ಲಿ ಅದೇ ಒಬ್ಬರು ಅವರದನ್ನು ಮಾದರಿಯಾಗಿಟ್ಟುಕೊಂಡು ಬರೆದಿದ್ದಾರೆ-ಎಂತ ಅಲಕ್ಷ್ಯ ಮಾಡಬೇಡಿ. ಈ ಕತೆಯನ್ನು ಈ ರೂಪಕ್ಕೆ ಮಾರ್ಪಡಿಸಿದವನು ನಾನಾದರೂ ಬರೆದವನು ನಾನಲ್ಲ. ಇದು ಕತೆಯು ಹಾಗೆ ಆಗಬೇಕೆಂದು ಅವನು ಬರೆಯಲೂ ಇಲ್ಲ. ಇದನ್ನು ಬರೆದವನು ರಾಜು. ಇದನ್ನು ತನ್ನ ಪಂಚಾಂಗದಲ್ಲಿ ಬರೆದುಕೊಂಡಿದ್ದ; ತಾರೀಖುವಾರಾಗಿ. ಅವನು ಇದನ್ನು ಇತರರು ಓದಲಿ ಎಂತ ಖಂಡಿತ ಬರೆದಿರಲಿಲ್ಲ. ಹಸ್ತಪುಸ್ತಕ*ದಲ್ಲಿ ಬರೆದುಕೊಳ್ಳುವ ಪದ್ಧತಿ ಇದ್ದುದರಿಂದ ಬರೆದಿದ್ದನೇ ಹೊರತು, ತನ್ನ ಜ್ಞಾಪಕಕ್ಕೋಸ್ಕರ ಎಂತ ಕೂಡ ನಾನು ಧೈರ್ಯವಾಗಿ ಹೇಳಲಾರೆ. ಅವನಿಗೆ ಸಂಜನಗೂಡಿನಿಂದ ಬೆಂಗಳೂರಿಗೆ ವರ್ಗವಾದಾಗ ನಾನು ಅವನ ಮನೆಗೆ ಹೋಗಿದ್ದೆ. ಅವನು ಪ್ರಯಾಣಕ್ಕೆ ಸಾಮಾನು ಕಟ್ಟುತ್ತಿದ್ದ. ನಾನೂ ಸಹಾಯ ಮಾಡಿದೆ (ಅಂತ ನಟಿಸಿದೆ.) ಅವನ ಕಡತಗಳನ್ನು ಪಿಂಗಡಿಸುತ್ತಿದ್ದಾಗ ಈ ಕತೆಯ ಮೂಲ, ಅವನ ಪಂಚಾಂಗ-ನನ್ನ ಕೈಗೆ ಸಿಕ್ಕಿತು. ಯಾಕಯ್ಯಾ, ಇದನ್ನಿಟ್ಟಿದೀಯ, ಇಷ್ಟು ಹಳೆಯದು 19.... ನೇ ವರ್ಷದ್ದು, ಎಂದೆ. 'ನನ್ನ ಮದುವೆಯಾದ ವರ್ಷದ್ದು, ನಾಜೂಕಾಗಿಡಪ್ಪ, ಎಲ್ಲಾದರೂ ಗೈರ್ ಪಿಲೆಯಾದೀತು' ಎಂದ. ಹಾಗಾದರೆ ಅದರಲ್ಲಿ ಏನೋ ಸ್ವಾರಸ್ಯವಿರಬೇಕೆಂತ ಎತ್ತಿ ಹಾಕಿದೆ. ಅದರಲ್ಲಿ ಏನೇನೋ ಬರೆದಿದ್ದ. ಅದರ ಜೊತೆಗೆ ಅವನ ಮದುವೆ ವಿಚಾರವೂ ಇತ್ತು. ಅದು ನನ್ನ ಮನಸ್ಸಿಗೆ ಸ್ವಾರಸ್ಯವಾಗಿ ಕಂಡು ಬಂದುದರಿಂದ ಅದನ್ನು, ಈ ರೂಪಕ್ಕೆ ತಂದಿರುತ್ತೇನೆ.

ಇದು ನನ್ನ ಮದುವೆ ವಿಷಯವಾಗಿ ಅಲ್ಲದಿದ್ದರೂ ಅವನ ಭಾಷ

*ಅವನು ಸ್ಕೌಟಾಗಿದ್ದುದರಿಂದ ಪ್ರತಿದಿನ ಒಂದು ಒಳ್ಳೆ ಕೆಲಸ ಮಾಡಿ (One good turn a day) ರಾತ್ರಿ ತಾನು ಮಲಗುವ ಮೊದಲು, ತಾನು ಉದಯ ಕಾಲದಿಂದ ಮಲಗುವ ವರೆಗೂ ಮಾಡಿದ ಕಾರ್ಯಗಳನ್ನೆಲ್ಲ ನೆನಪಿಗೆ ತಂದುಕೊಂಡು ಬರೆದಿಡುತ್ತಿದ್ದ.

ಯಲ್ಲಿರುವುದರಿಂದ ಈ ಹೆಸರಿಟ್ಟಿದ್ದೇನೆ. ಈ ಕತೆ ಬರೆದು ಹಸ್ತಪ್ರತಿ ಅವನಿಗೆ ತೋರಿಸಿದಾಗ ಅವನ ಕೈಲಿ ಆದ ಶಾಸ್ತಿ ಎಷ್ಟು ಎಂತ ಹೇಳೋಣ! ಅದರಲ್ಲೂ ಅವನ ಡೈರಿಯಿಂದ ಬಂದದ್ದು, ಅದು ನನ್ನ ಬಳಿಯಲ್ಲೇ ಇದೆ ಅಂತ ಅವನಿಗೆ ತಿಳಿದ ವೇಳೆಗೆ, ನನ್ನನ್ನು ಹೊಡೆಯುವುದಕ್ಕೇ ಬಂದುಬಿಟ್ಟ!

ಇದರಲ್ಲಿ ಸ್ವಾರಸ್ಯವೇನಾದರೂ ಕಂಡು ಬಂದರೆ ಆ ಕೀರ್ತಿ ಅವನಿಗೆ-ಸಲ್ಲಬೇಕು, ಇದಕ್ಕಾಗಿ ನಾನು ಬೈಸಿಕೊಂಡಿದ್ದರೂ ಚಿಂತೆಯಿಲ್ಲ ನಾಲ್ಕಾರು ಜನ ಓದುತ್ತಾರೆಂಬುವೇ ನನಗೆ ಸಮಾಧಾನ!

3-7-19....

ಜೂನಿಯರ್ ಬಿ. ಎ ಯಿಂದ ಸೀನಿಯರ್ ಬಿ ಎಗೆ ತೇರ್ಗಡೆಯಾದವರ ಪಟ್ಟಿ ಹಾಕಿತ್ತು. ಅದರಲ್ಲಿ ನನ್ನ ಹೆಸರೂ ಇತ್ತು. ನನಗೂ ತೇರ್ಗಡೆಯಾಗುತ್ತೆ, ನನ್ನ ಹೆಸರೂ ಅದರಲ್ಲಿರುತ್ತೆ, ಎಂತ ಧೈರ್ಯವಿದ್ದರೂ, ತಿಳಿದಿದ್ದರೂ, ಮನಸ್ಸಿನಲ್ಲಿ ಅದನ್ನು ನೋಡಿ ತಿಳಿದುಕೊಳ್ಳುವವರೆಗೂ ಕುತೂಹಲ (anxiety) ಪಟ್ಟಿಯಲ್ಲಿ ನನ್ನ ಹೆಸರನ್ನೂ ನೋಡಿದೆ ಸಂತೋಷವಾಯಿತು 'ಮಗು, ಪಾಸಾಗಲಿ--ಅಂತ ರಾಮದೇವರಿಗೆ ಹರಕೆಮಾಡಿಕೊಂಡಿದ್ದೇನಪ್ಪ. ಊರಿಗೆ ಹೋಗಿ ಪಾಸಾಗಿದ್ದಕ್ಕೆ ಕಾಗದ ಬರೆ. ನಿಧಾನ ಮಾಡಬೇಡ. ತಡಮಾಡಿದರೆ ಮನಸ್ಸು ಎಲ್ಲೆಲ್ಲೋ ಓಡುತ್ತಪ್ಪ. ಬಹಳ ಹೆಚ್ಚಾಗಿ ಈಜಬೇಡ. ಮೊನ್ನೆ ನಿನ್ನ ತಂದೆಯವರು ಶಾಯಿ ಬೇಕೆಂದು ನಿನ್ನ ಕೊಠಡಿಗೆ ಹೋಗಿ ಹುಡುಕುತ್ತಿದ್ದಾಗ್ಗೆ, ಅವರ ಕಣ್ಣಿಗೆ ಒಂದು ಹೊಸ ಪುಸ್ತಕ ಕಾಣಿಸಿತಂತೆ. ಅದನ್ನು ನೋಡಲು' ರಟ್ಟಿನ ಒಳಭಾಗದ ಮೇಲೆ 'ಈಜುವುದರಲ್ಲಿ ಮೊದಲಿಗನಾಗಿ ನಿಂತುದಕ್ಕೆ' ನಿನಗೆ ಬಂದ ಬಹುಮಾನವೆಂತ ಗೊತ್ತಾಯಿತಂತೆ. ಬಹಳ ಈಜಬೇಡಪ್ಪ; ನನ್ನ ಮಾತು ಕೇಳು,' ಎಂತ ಬೇಡಿಕೊಂಡಿದ್ದರು

ತಾಯಿಗಿಂತ ಹೆಚ್ಚಿನ ವಸ್ತು ಯಾವುದಿದೆ! ಮಕ್ಕಳಿಗಾಗಿ ಅವರು ಎಷ್ಟು ಪಾಡುಪಡುತ್ತಾರೆ!

ಪಾಸಾಗಿದೆ ಎಂತ ಊರಿಗೆ ಕಾಗದ ಹಾಕೋಣ ಅಂತ ವಿಳಾಸ ಬರೆಯುತ್ತಿದ್ದೆ; ಯಾರೋ ಹೊರಗೆ ಕೂಗಿದ ಹಾಗಾಯಿತು. ಹೊರಗೆ ಹೋಗಿ ನೋಡಿದೆ. ನನಗೆ ತಂತಿ ಬಂದಿತ್ತು ನೋಡಿದೆ. ಅಮ್ಮನಿಗೆ ಪ್ಲೂರಸಿ, ನೋಡಲಿಕ್ಕೆ ಬರುವುದು, ಎಂದಿತ್ತು.

ಊರಿಗೆ ಹೊರಟುಬಂದ.

4-7-19.

ಅಮ್ಮನನ್ನು ನೋಡಿದ; ನನಗೆ ಬಹಳ ಭಯವಾಯಿತು. ನಾನು ಹೋದಾಗ ಅಮ್ಮ ನಿದ್ದೆ ಮಾಡುತ್ತಿದ್ದಳು. ಕೊಂಚ ಹೊತ್ತಾದ ಮೇಲೆ ಎಚ್ಚೆತ್ತು, ಸುತ್ತಲೂ ದಿಟ್ಟಿಸಿ ನೋಡಿದಳು. ನನ್ನನ್ನು ಹುಡುಕುತ್ತಿದ್ದಾಳೆಂದು ಊಹಿಸಿ, ಬಳಿಗೆ ಹೋದೆ. ರಕ್ತವಿಲ್ಲದೆ, ಒಣಗಿ ಹೋದ ತುಟಿಗಳು ನಗುವನ್ನು ಸೂಚಿಸಿದುವು. ಕೈಯನ್ನೆತ್ತಿ ತಲೆಯನ್ನು ಸವರಿದಳು. ಮಾತುಗಳು ಹೊರಡಲಿಲ್ಲ. ಕಣ್ಣುಗಳಲ್ಲಿ ಏನನ್ನೋ ಕೇಳುವಂತೆ ಕಂಡಿತು. ನನಗೆ ಪಾಸಾಗಿದೆ ಎಂತ ಹೇಳಿದೆ. ಮುಖದ ಭಾವನೆಯಿಂದ ಅವಳು ಕೇಳಬೇಕೆಂದಿದ್ದ ಪ್ರಶ್ನೆ ಅದೇ ಎಂದೂ, ಅಮ್ಮನಿಗೆ ಸಂತೋಷವಾಯಿತೆಂದೂ, ಭಗವಂತನಿಗೆ ಧನ್ಯವಾದಗಳನ್ನು ಅರ್ಪಿಸಿದಳೆಂದೂ ತಿಳಿದುಕೊಂಡೆ.

ಸ್ವಲ್ಪ ಹೊತ್ತು ಕುಳಿತಿದ್ದೆ. ಅಷ್ಟು ಹೊತ್ತಿಗೆ ಹೊರಡುವ ವೇಳೆಯಾಯಿತು.

6-7-19.

ವೈದ್ಯರನ್ನು ಕಂಡಿದ್ದೆ. ಪ್ರಾಣಭಯವಿಲ್ಲವೆಂತ ತಿಳಿಸಿದರು. ದೇವರು ಅಮ್ಮನನ್ನು ಉಳಿಸಿ ನಮ್ಮನ್ನು ಕಾಪಾಡಬೇಕು. ಅಮ್ಮನು ಹೋದರೆ ನಾವು ತಬ್ಬಲಿಗಳು. 'ಅಯ್ಯೋ' ಅನುವವರಾರು! ಹತ್ತಿರ ಕರೆದು ಆದರಿಸುವವರಾರು! ಅವಸ್ಥಾತ್ರಯಗಳಲ್ಲೂ ನಮ್ಮ ಹಿತಚಿಂತನೆಯನ್ನು ಮಾಡುವವರಾರು!

ಅದಕ್ಕೆ ದೊಡ್ಡವರು, ತಾಯಿಲ್ಲದವರನ್ನು ತಬ್ಬಲಿಗಳೆನ್ನುವುದು!

9-7-19...

ಊರಿಂದ ಕಾಗದ ಬರಲಿಲ್ಲ. ಬಹಳ ಯೋಚನೆಯಾಗಿದೆ.

10-7-19..

ಅಮ್ಮನಿಗೆ ಸ್ವಲ್ಪ ವಾಸಿಯಂತೆ; ತಂದೆಯವರಿಗೆ ವರ್ಗವಂತೆ. ಅಮ್ಮನ ದೇಹಸ್ಥಿತಿ ಪೂರ್ತಿಯಾಗಿ ಉತ್ತಮವಾಗುವುದಕ್ಕೆ ಮೊದಲೇ ತೊಂದರೆ.

15-7-19....

ಅಮ್ಮ ಮನೆಗೆ ಬಂದಳಂತೆ. ಆದರೂ ಇನ್ನೂ ಬಹಳ ನಿಶ್ಶಕ್ತಿಯಂತೆ. ದೇವರು ದೊಡ್ಡವನು. ಅಮ್ಮನನ್ನು ಉಳಿಸಿ ಕೊಟ್ಟನಲ್ಲ! ಅಮ್ಮನನ್ನು ನೋಡಬೇಕೆನ್ನಿಸಿದೆ. ರಾತ್ರಿ ಹೋಗುತ್ತೇನೆ.

16-7-19....

ಅಮ್ಮನಿಗೆ ನಮಸ್ಕಾರ ಮಾಡಿದೆ. ತಲೆಯನ್ನು ಸವರುತ್ತಾ, ಎಲ್ಲಾದರೂ ತಣ್ಣಗೆ ಬದುಕಿರು', ಎಂದಳು. ತಲೆಯೆತ್ತಿ ನೋಡಿದೆ. ತನಗೆ ಗುಣಮಾಡುದಕ್ಕೆದೇವರಲ್ಲಿ ಕೃತಜ್ಞತೆಯನ್ನೂ, ನನ್ನನ್ನು ಕಂಡುದಕ್ಕೆ ಸಂತೋಷವನ್ನೂ ಮತ್ತು ನನ್ನಿಂದ ಇನ್ನೂ ದೂರ ಹೋಗಬೇಕಲ್ಲ ಎಂಬ ದುಃಖ ಅವಳ ಕಣ್ಣುಗಳು ಸೂಚಿಸಿದವು.

25-7-19....

ಈಜುವ ಮತ್ತು ದೋಣಿ ನಡೆಸುವ ಸಂಘಕ್ಕೆ ನನ್ನನ್ನು ಮುಖಂಡನಾಗಿ ಚುನಾಯಿಸಿದ್ದಾರೆ ನಚ್ಚುವು ಗರಡಿಗೆ ಬಾ ಎಂತ ಬಲವಂತಮಾಡುತ್ತಿದಾನೆ ಶಾಸ್ತ್ರಿಗಳು ಜಮ್ನಾಸ್ಟಿಕ್ಸ್‌ಗೆ ಬಾ ಎಂತ ಹಿಂಸೆಮಾಡುತ್ತಿದಾರೆ. ಯಾವುದರಿಂದಲೂ ನುಣುಚಿಕೊಳ್ಳುವ ಹಾಗಿಲ್ಲ ಎರಡೂ ಕಡೆ ಹೋದರೆ ತಂಟೆಯೇ ಇಲ್ಲ.

26-7-19....

ಎಸ್ ವಿ. ಕೆ. ಯವರನ್ನು ನೋಡಲು ಹೋಗಿದ್ದೆ. 'ಯಾಕೋ ಈ ವರ್ಷ ರೋವರ್ ಆಗಲಿಲ್ಲ' ಎಂದರು. ಡಿಗ್ರಿಪರೀಕ್ಷೆಗೂ ಏನು ಸಂಬಂಧ? ಎಂದರು. ಅವರು ದೊಡ್ಡವರು. ಅವರ ವಿಶ್ವಾಸವನ್ನು ಸಂಪಾದಿಸಬೇಕು.

ಈ ಸಾರಿ ಸ್ಪೋರ್ಟ್‌ನಲ್ಲಿ ಭಾಗವಹಿಸದೆ ಆಟದಲ್ಲಿ ಕಾಲ ಕಳೆಯದೆ ಚೆನ್ನಾಗಿ ಓದಿ ಹೆಸರು ಪಡೆಯಬೇಕು.

16-8-19....

ಮೂರ್ತಿ! ಮೂರ್ತಿ! ಆ ಹೆಸರು ಜ್ಞಾಪಕದಲ್ಲಿದೆ! ನಮ್ಮ ಸಂಘದಲ್ಲಿ ಒಂದು ದಿನವೂ ಅವನನ್ನು ನೋಡಿದಂತೆ ನೆನಪಿಲ್ಲ.....ಈಗ ಜ್ಞಾಪಕಕ್ಕೆ ಬಂತು. ಅವನು ಜಮ್ನಾಸ್ಟಿಕ್ಸ್ ಕ್ಲಬ್‌ಗೆ ಬರುತ್ತಾನೆ. ಇಷ್ಟು ಚೆನ್ನಾಗಿ ಈಜುತ್ತಾನೆ ಎಂತ ನನಗೆ ತಿಳಿದಿರಲಿಲ್ಲ; ಎಲ್ಲಿ ಕಲಿತನೋ ತಿಳಿಯದು. ಅವನು ಒಂದು ದಿವಸವಾದರೂ ಈಜಿದ್ದು ನಾನು ನೋಡಲೇ

ಇಲ್ಲ! ನಾನು ಶಕ್ತಿ ಮೀರಿ ಸಾಹಸಪಡದಿದ್ದರೆ, ನನ್ನನ್ನು ಸೋಲಿಸಿಯೇ ಬಿಡುತ್ತಿದ್ದ. ನನ್ನ ಸಮಾನವಿಲ್ಲ ಎಂಬುವ ಹೆಸರೇ ಹೋಗಿಬಿಡುತ್ತಿತ್ತು.

ಇಂದು ಕ್ಲಬ್ಬಿಗೆ ಹೋಗಿ ಸಾಧನೆ ಹೇಗೆ ಮಾಡುತ್ತಾನೋ ನೋಡ ಬೇಕು.

22 - 8 - 19....

ಮೂರ್ತಿಯನ್ನು ನಿನ್ನೆ ಕಂಡಿದ್ದೆ. ನನ್ನನ್ನು ನೋಡಿ ಅಭಿವಾದನ ಮಾಡಿದ. ಎಷ್ಟು ವಿನಯ! ಯೋಗ್ಯನ ಹಾಗೆ ನಡೆದುಕೊಳ್ಳುತ್ತಾನೆ. ಚೆನ್ನಾಗಿ ಸಾಧನೆ ಮಾಡುತ್ತಾನೆ. ಸ್ವಲ್ಪ ಮುಂಗೋಪಿ. ಅವರೂ ಅಲ್ಲಿ ಎಲ್ಲರ ವಿಶ್ವಾಸವನ್ನು ಸಂಪಾದಿಸಿದರೂ ಆತನಿಗೂ ಹೇಳಿಕೊಡುವಾತನಿಗೂ ಅಷ್ಟಕ್ಕಷ್ಟೇ. ಏಕೋ ತಿಳಿಯದು. ಕಸಬುದಾರರನ್ನು ಕಂಡರೆ ಕೆಲವರು ಪ್ರೀತಿಸುವರು. ಕೆಲವರು ದ್ವೇಷಿಸುವರು. ನಮಗೆ ಕಲಿಸಿಕೊಡುವವರು ಎರಡನೆಯ ಗುಂಪಿನಲ್ಲಿ ಬರತಕ್ಕವರು. ಮೂರ್ತಿಯ ಸರದಿ ಬಂದಾಗ್ಯೂ ಕೂಡ ಬೇರೆ ಇನ್ನೊಬ್ಬರನ್ನು ಬಾಯ್ಬಿಟ್ಟು ಕರೆಯುತ್ತಾರೆ! ಅದಕ್ಕೆ ಅವರಿಬ್ಬರಿಗೂ ಆಗವೇನು?

1 - 9 - 19....

ನಮ್ಮ ಕಾಲೇಜ್ ಡೇ ಪಂದ್ಯಗಳು ನಡೆಯುತ್ತಿವೆ. ನಾನು ಏನೋ ಅನ್ನುತ್ತಿದ್ದೆ, ಮೂರ್ತಿ ಕೀರ್ತಿಯೋ! ಎಲ್ಲ ಆಟಗಳಲ್ಲೂ ಬಂದು ಬಹುಮಾನ ತೆಗೆಯುತ್ತಿದ್ದಾನೆ!

5 - 9 - 19....

ಕೋಲಾರದ ರಾಮರಾಯರಂತೆ, ಗುಡಿಬಂಡೆಯಲ್ಲಿ ಫಾರೆಸ್ಟ್‌ರೇಂಜರ್ ಕೆಲಸದಲ್ಲಿದಾರಂತೆ; ಅವರಿಗೆ ಒಬ್ಬಳೇ ಮಗಳಂತೆ; ಆಸ್ತಿ ಇದೆಯಂತೆ. ಮದುವೆಮಾಡಿಕೊಳ್ಳುತ್ತೀಯ, ಎಂತ ಅಮ್ಮನೂ ಅಣ್ಣನೂ ಬೇರೆಬೇರೆ ಕಾಗದ ಬರೆದಿದ್ದಾರೆ!

ನನಗೇಕೆ ಇಷ್ಟು ಬೇಗ ಮದುವೆ!

ನಾನೇ ಇನ್ನೊಬ್ಬರ ಆಶ್ರಯದಲ್ಲಿರುವಾಗ!

ನಾನು ಸ್ವತಂತ್ರವಾಗಿ ಜೀವಿಸುವ ಚೈತನ್ಯ ಬಂದ ಮೇಲೆ ಇನ್ನೊಬ್ಬರನ್ನು ಪೋಷಿಸುವ ಶಕ್ತಿ ಬಂದ ಮೇಲಲ್ಲವೆ ಮದುವೆ! ನಾನೇ ಇನ್ನೊಬ್ಬರ ಕತ್ತಿನ ಮೇಲೆ ಬಿದ್ದಿರುವಾಗ ನನ್ನ ಬೆನ್ನಿಗೆ ಇನ್ನೊಬ್ಬರನ್ನು ಕಟ್ಟಿಕೊಳ್ಳಲೇ!

ಮಾವನ ಆಸ್ತಿಯನ್ನು ನೋಡಿ, ಹೆಂಡತಿಯಾಗುವವಳನ್ನು ಲಗ್ನವಾಗಬೇಕೆ! ಸ್ತ್ರೀಧನಕ್ಕೆ ಆಶೆಪಡಬೇಕೆ!

12-9-19....

ಮೊನ್ನೆ ನಡೆದ ಸ್ಪರ್ಧೆಯಲ್ಲಿ ಶಾಸ್ತ್ರಿಗಳು ಮೂರ್ತಿಗೆ ಕಮ್ಮಿ ಅಂಕಗಳನ್ನು ಕೊಟ್ಟರೂ, ಪುಟ್ಟನಂಜಪ್ಪನವರು ತಮ್ಮ ಯೋಗ್ಯತೆಗೆ ತಕ್ಕಂತೆ ಕೊಟ್ಟರು. ಶಾಸ್ತ್ರಿಗಳಿಗಾದರೂ ಹೊಟ್ಟೆಕಿಚ್ಚು; ಪುಟ್ಟನಂಜಪ್ಪನವರಿಗೇನು?ಅರಸುಗಳು ಮೂರ್ತಿಗೆ ಸರಿಯಾಗಿ ಅಂಕಗಳನ್ನುಕೊಟ್ಟಿರಬೇಕು. ಏನಾದರೇನು! ಬಟ್ಟೆಯಲ್ಲಿ ಮುಚ್ಚಿಟ್ಟ ಕೆಂಡ ತನ್ನ ಇರವನ್ನು ತೋರ್ಪಡಿಸಿದೆ!

ಮೂರ್ತಿಯೇ ಮೊದಲಿಗನಾದ!

14-9-19....

ಇಂದು ಮೂರ್ತಿ ನಮ್ಮ ಕೊಠಡಿಗೆ ಬಂದಿದ್ದ. ಸುಮ್ಮನೆ ಬಂದಿದ್ದೆ- ಎಂದು ಹೇಳಿದ. ಪ್ರಮೇಯವಿಲ್ಲದೆ ಬರುವವನಲ್ಲ. ಪರಿಚಯವನ್ನು ಹೆಚ್ಚು ಮಾಡಿಕೊಳ್ಳಲಿಕ್ಕೆ ಬಂದಿರಬಹುದು!

16-9-19....

ಇಂದು ನಮ್ಮ ನಮ್ಮಲ್ಲೇ 'ಫ್ರೆಂಡ್ಲಿ ಮ್ಯಾಚ್' ಆದಮೇಲೆ ಕ್ಲಬ್ಬಿನ ಪ್ರಿಮಿಸಸ್‌ನಲ್ಲಿ ಕಾಫಿ ಕುಡಿಯುತ್ತಾ ಇದ್ದಾಗ ಮೂರ್ತಿ, ವೆಂಕಟೇಶನ್ ರವರನ್ನು 'ಸಿಡ್ವಿಕಾ' ಬೇಕು, ಕೊಡಿ ಎಂದ. ಅವರು ಇಲ್ಲ, ಎಂದರು. ಮೂರ್ತಿ 'ನನ್ನಲ್ಲಿದೆ. ನಾನೇ ತಂದು ಕೊಡಲೋ, ನೀವೇ ಬರುತ್ತೀರೋ' ಎಂದ. 'ವಾಸ ಎಲ್ಲಿ' ಎಂದೆ? 'ಕೃಷ್ಣಮೂರ್ತಿಪುರಂ' ಎಂದ. ಕ್ಲಬ್ಬನ್ನು ಬಿಟ್ಟ ಮೇಲೆ ಅವನ ಜೊತೆಯಲ್ಲಿ ಅವನ ಮನೆಗೆ ಹೋದೆ. ಅವನಿಗೆ ಮಹಡಿಯ ಮೇಲೆ ಎರಡು ಕೊಠಡಿಗಳು. ಒಂದು ಓದುವ ಕೊಠಡಿ; ಒಂದು ಮಲಗುವ ಕೊಠಡಿ.

ಅಬ್ಬ! ಏನು ಪುಸ್ತಕಗಳನ್ನಿಟ್ಟಿದ್ದಾನೆ?

ಅವನ್ನೆಲ್ಲ ಓದುತ್ತಾನೋ?

ಓದುವ ಚಟವಿಲ್ಲದವನು, ಓದಹವನು ಅಂತಹ ಒಳ್ಳೆಯ ಆರಿಸಿದ ಪುಸ್ತಕಗಳನ್ನಿಡಲು ಸಾಧ್ಯವೆ!

20 - 9 - 19....

ಸಾಯಂಕಾಲ ವ್ಯಾಯಾಮ ಮುಗಿಸಿಕೊಂಡು ನಾನೂ ಮೂರ್ತಿ ಯೂ ನನ್ನ ರೂಮಿಗೆ ಬಂದೆವು. ಪುಸ್ತಕವನ್ನು ಹಿಂದಕ್ಕೆ ತೆಗೆದುಕೊಂಡು ಹೋಗಲು ಮೂರ್ತಿ ಬಂದಿದ್ದುದು. ಮಾತಿನ ಮೇಲೆ ಮಾತು ಬಂದು 'ನೀವು ದಸರಾಗೆ ಇಲ್ಲಿಯೇ ಇರುತ್ತೀರಾ!' ಎಂದ.

'ನಾನೇನೋ ಇರುತ್ತೇನೆ, ನೀವು' ಎಂದೆ. 'ನಾನೂ' ಎಂದ.

ಹಾಗಾದರೆ ತಾಪತ್ರಯವಿಲ್ಲ-ಎಂದೆ. ಯಾತಕ್ಕೆ ತಾಪತ್ರಯವೋ ನನಗೇ ಗೊತ್ತಿಲ್ಲ!

ಅಂತೂ ಮೂರ್ತಿಗೂ ನನಗೂ ಪರಿಚಯ ಮೈತ್ರಿಯಾಗಿ ಬೆಳೆಯುತ್ತಿದೆ!

26 - 9 - 19....

ಡೈರಿ ಬರೆಯಲು ವಿರಾಮವೂ ಇಲ್ಲ, ಸ್ಥಳವೂ ಇಲ್ಲ. ಯಾರಾದರೂ ಕಂಡರೆ ಹಾಸ್ಯಮಾಡಿಯಾರೆಂಬ ನಾಚಿಕೆ ಬೇರೆ!

ಎಲ್ಲರೂ ಈ ಟ್ರಿಪ್ಪಿನಲ್ಲಿ ಹೇಗೆ ನಡೆದುಕೊಳ್ಳುತ್ತಿದೇವೆ! ವಿದ್ಯಾಪೀಠವನ್ನು ಬಿಟ್ಟ ಮೇಲೆ ಜನಸಾಮಾನ್ಯರೊಡನೆ ಕಲೆತಾಗ ಇದೇ ರೀತಿ ಭಾವನೆಯನ್ನಿಟ್ಟುಕೊಳ್ಳಲು ಸಾಧ್ಯವಾದರೆ! ನಮ್ಮ ಪ್ರಯಾಣದ ಸುಖವನ್ನೂ ಸೌಕರ್ಯವನ್ನೂ ವರ್ಣಿಸಲಾರೆ. ರಾಮುವಿಗೂ ರಾಜುವಿಗೂ ಇಸ್ಪೀಟು ಆಡಲಿಕ್ಕೆ ಬಾರದು. ರಾಮುವು ಹಾಡುವುದಕ್ಕೂ (ಅವನು ಬಿಡಾರದ ಕೃಷ್ಣಪ್ಪನವರ ಖಾಸಾ ಶಿಷ್ಯ. ಇದು ಈ ಕತೆ ಜೋಡಿಸಿದ ನನ್ನ ಫುಟ್ ನೋಟ್) ರಾಜುವು ತಾಳಹಾಕುವುದಕ್ಕೂ ಸರಿಹೋಗುತ್ತಿತ್ತು. ನಾವೂ ನಮ್ಮ ಗುರುವೂ ಕೂಡಿ ಎಂಟು ಜನ ಇಸ್ಪೀಟಾಡಲಿಕ್ಕೂ ಸರಿಹೋಯಿತು.

ನಮ್ಮ ಗಾಡಿಯಲ್ಲಿ ಕೂಡಬೇಕೆಂದು ಆರಾರೋ ಬಂದರು. ಗಲಭೆ ಮಾಡಿ ಎಲ್ಲರನ್ನೂ ಓಡಿಸಿಬಿಟ್ಟೆವು. ಅದೇ ಒಂದು ಕತೆ!

ಆ ಹುಡುಗಾಟದ ಮಧ್ಯೆ ನಾವು ಒಬ್ಬರೇ ಇರುವಾಗ ನಮಗೆ ಯಾರಾದರೂ ಹಾಗೆ ಮಾಡಿದರೆ ಏನು ಗತಿ ಎಂತ ಹೊಳೆಯಲೇ ಇಲ್ಲ!

ಮನುಷ್ಯನ ಸ್ವಭಾವವೇ ಅಷ್ಟೇನೊ?

28 - 9 - 19....

ಬೆಂಗಳೂರಿನವರ ಮೇಲೂ ಉರಿಗದವರ ಮೇಲೂ ಪಂಥ ನಡೆ

ಯಿತು. ಇಬ್ಬರನ್ನೂ ಸೋಲಿಸಿದೆವು. ಮೂರ್ತಿಯಿಲ್ಲದಿದ್ದರೆ ಅದು ಸಾಧ್ಯವಾಗುತ್ತಿರಲಿಲ್ಲವೆಂತ ನನ್ನ ಭಾವನೆ. ಅವನಿಗೆ ಏನು ಪ್ರಸೆನ್ಸ್ ಆಫ್ ಮೈಂಡ್! ಇದುವರಿಗಾಗಲೇ ನಾವು ಎಷ್ಟು ಪರೀಕ್ಷೆಗಳಿಗೆ ಕೂತಿರಬಹುದು! ಅದೂ ಅದರಂತೆಯೇ ಅಲ್ಲವೆ! ನಮಗೆ ಅಷ್ಟು ತಿಳಿದುಕೊಂಡು ಕರ್ತವ್ಯಶೂನ್ಯರಾಗದೆ ಇರುವುದೇ ಕಷ್ಟವಲ್ಲ!

5 - 10 - 19....

ಅಬ್ಬ! ಈ ಸಾರೆ ದಸರಾ ಉತ್ಸವಗಳನ್ನು ನೋಡಲು ಏನು ಜನ! ನಾನೂ ಮೂರ್ತಿ ಇಬ್ಬರೂ ಸ್ಕೌಟುಗಳಾಗಿ ಸೇರಿ ಒಂದೇ ಬ್ಯಾಚಿನಲ್ಲಿ ಡ್ಯೂಟಿ ಮಾಡುತ್ತಿದೇವೆ. ಬೆಳಿಗ್ಗೆ ೫ಗಂಟೆಗೆ ಎದ್ದರೆ ರಾತ್ರಿ ಮಲಗಲು ೧೨ಗಂಟೆ. ಅದುವರೆಗೂ ಒಂದು ಕಡೆ ಎರಡು ನಿಮಿಷ ಸಹ ನಿಲ್ಲಲು ವಿರಾಮವಿಲ್ಲ!

ನಿಜವಾದ ಸ್ವಾರ್ಥತ್ಯಾಗದ ಪ್ರಜಾಸೇವೆಯನ್ನು ಮಾಡಬೇಕಾದರೆ ಸ್ಕೌಟು ಆಗಬೇಕು. ಸ್ಕೌಟು ಆಗುವುದರಿಂದಲೇ ಸೇವೆ ಮಾಡಿದಂತಾಗವುದಿಲ್ಲ. ಅದರ ತತ್ವವನ್ನು ಕಾಯಾ, ವಾಚಾ, ಮನಸಾ, ಅನುಸರಿಸಬೇಕು. ಹಾಗೆ ಮಾಡುವುದರಲ್ಲಿ ಎಸ್. ವಿ. ಕೆ. ಯವರು ಮುಖ್ಯರು. ಅವರೆಷ್ಟು ಶ್ರದ್ಧೆವಹಿಸಿ ಕೆಲಸ ಮಾಡುತ್ತಾರೆ! ಅದರಲ್ಲೂ ಅವರು ದಸರಾ ಕಾಲದಲ್ಲಿ ಪಡುವಕಷ್ಟ, ವಹಿಸುವಶ್ರದ್ಧೆ, ಸ್ತೋತ್ರಾರ್ಹ. ಮೂರ್ತಿಯೂ ಎಷ್ಟು ಶ್ರದ್ಧೆಯಿಂದ ಕೆಲಸ ಮಾಡುತ್ತಾನೆ! ಅವನು ಯಾವ ಕೆಲಸಮಾಡಿದರೂ ಅಷ್ಟೆ-ಅವನನ್ನು ಕಂಡರೆ ನನಗೆ ಸಂತೋಷವಾಗುತ್ತದೆ.

ನಾವಿಬ್ಬರೂ ಬಹಳ ಸ್ನೇಹಿತರಾಗಿಬಿಟ್ಟಿದ್ದೇವೆ. ಈ ಸ್ನೇಹ ಕಾಲೇಜ್ ದಿನಗಳೊಂದಿಗೆ ಮುಕ್ತಾಯವಾಗುತ್ತದೋ ಮುಂದುವರಿಯುತ್ತದೋ ನೋಡಬೇಕು!

16 - 10 - 19

ಬೆಟ್ಟದ ಮೇಲೆ ಚಾಮುಂಡಿಯ ರಥದ ದಿನ ಜನಗಳ ನೂಕುನುಗ್ಗಲು ಹೇಳಿತೀರದು! ತುಳಿಯಲ್ಪಟ್ಟು ಸತ್ತು ಹೋಗುತ್ತಿದ್ದ ಒಬ್ಬ ಹೆಂಗಸನ್ನು ನಾನು ಮೂರ್ತಿ ಮತ್ತು ಕಿಟ್ಟು ಉಳಿಸಿದೆವು. ಆ ಗಲಾಟೆಯಲ್ಲಿ ಮೂರ್ತಿಯ ಕಾಲನ್ನು ಯಾರೋ ತುಳಿದು ಬಿಟ್ಟಿದ್ದಾರೆ. ಪಾಪ! ಪೂರಾ ಪೆಟ್ಟು ಬಿದ್ದಿದೆ.

21 - 12 - 19....

ಮೂರ್ತಿಯ ಮನೆಗೆ ಹೋಗಿದ್ದೆ. ಕಾಲುಗಾಯ ಈಗ ಸಂಪೂರ್ಣವಾಗಿ ವಾಸಿಯಾಗಿದೆ. ಪಾಪ! ಬಹಳ ತೊಂದರೆಪಟ್ಟ. ಪರೋಪಕಾರ ಮಾಡಲು ಹೋದವನಿಗೆ ಬಹುಶಃ ಇದು ದೇವರು ಕೊಡುವ ಬಹುಮಾನವಿರಬಹುದು!

23 - 12 - 19....

ಮೂರ್ತಿ ಕೊಠಡಿಗೆ ಬಂದಿದ್ದ. ನಾನು ಕ್ರಿಸ್‌ಮಸ್ ರಜದಲ್ಲಿ ಅವರ ಊರಿಗೆ ಹೋಗಬೇಕಂತೆ (ಶಿವಮೊಗ್ಗ—ಇದನ್ನು ನಾನು ಹಾಕಿದೇನೆ) ಜೋಗ್, ಇಕ್ಕೇರಿ (?), ಕೆಳದಿ, ಮೊದಲಾದ ಸ್ಥಳಗಳಿಗೆ ಕರೆದುಕೊಂಡು ಹೋಗುತ್ತಾನಂತೆ. ದಸರಾಕ್ಕೆ ಊರಿಗೆ ಹೋಗದುದಕ್ಕೇ ಅಮ್ಮ ಬಹಳ ಆಕ್ಷೇಪಣೆ ಮಾಡಿದಳು! ಈ ಬಾರಿಯೂ ಹೋಗದಿದ್ದರೆ ಸುಮ್ಮನಿರುವಳೆ? ಆದರೆ ಮೂರ್ತಿಯ ಸಂಗಡ ಹೋಗೆಂದು ಏಕೋ ಅಂತರಾತ್ಮ ಬೋಧಿಸುತ್ತಿದೆ. ಒಂದೆರಡು ದಿನ ಊರಿಗೆ ಹೋಗಿ, ಅಲ್ಲಿಂದ, ಶಿವಮೊಗ್ಗೆಯಲ್ಲಿ ನನ್ನ ಸ್ನೇಹಿತನಿಗೆ ಮದುವೆಯೆಂದು ಸುಳ್ಳು ಹೇಳಿ, ಅಲ್ಲಿಗೆ ಹೋಗುತ್ತೇನೆ.

ಅಯ್ಯೋ! ಈ ಸಣ್ಣ ವಿಚಾರಕ್ಕೇ ಸುಳ್ಳು ಹೇಳಬೇಕೆ! ಅದರಲ್ಲೂ ಅಮ್ಮನಿಗೆ!

ನಿಜವನ್ನೇ ಹೇಳಿ ಒಪ್ಪಿಸುತ್ತೇನೆ

24 - 12 - 19 ...

ಶಿವಮೊಗ್ಗೆಗೆ ಹೋಗಲು ಬೆಂಗಳೂರು ಮೇಲೆ ಹೋಗಬೇಕಾದ ಪ್ರಮೇಯವಿಲ್ಲದಿದ್ದರೂ, ಮೂರ್ತಿಯು ನನ್ನ ಸಲಹೆಯಂತೆ ಬೆಂಗಳೂರಿನವರೆಗೂ ಬಂದಿದ್ದನು. ನಮ್ಮ ಮನೆಗೆ ಬಾ ಎಂತ ಎಷ್ಟು ಕರೆದರೂ 'ಈಗ ಬರುವುದಿಲ್ಲ, ಜೇಸಿಗೆಗೆ ಬರುತ್ತೇನೆ' ಎಂದ.

ಅವನು ನಮ್ಮ ಮನೆಗೆ ಬರುವುದಿಲ್ಲವೆಂದ ಮೇಲೆ ನಾನು ತಾನೆ ಈಗೇಕೆ ಅವರ ಮನೆಗೆ ಹೋಗಬೇಕು? ಬರುವುದಿಲ್ಲ-ಎಂತ ಬರೆದು ಹಾಕುತ್ತೇನೆ.

ಅದು ಸರಿಯೆ? ಬರುತ್ತೇನೆಂತ ಹೇಳಿ ಆ ಮೇಲೆ ಬರುವುದಕ್ಕಾಗುವುದಿಲ್ಲ, ಎಂತ ಕೊಟ್ಟ ಮಾತು ತಪ್ಪಬಹುದೆ? ಅವನು ಬರದಿದ್ದರೆ ನಾನು ಹೋಗಬಹುದೋ? ನನಗೆ ಹೋಗಬೇಕೆನಿಸಿತು. ಅವನಿಗೆ ಬರಬೇಕೆನಿಸ

ಲಿಲ್ಲವೇನೊ?

ಆದರೆ ಮೊದಲು ಬಾ ಎಂತ ಅವನಿಂದ ಆಹ್ವಾನ ಬಂತೆಂಬ ವಿಚಾರ ನಾನು ಮರೆತರೆ ನ್ಯಾಯವೆ? ಅವನು ಕರೆದ ಮೇಲೆ ತಾನೆ ನಾನು ಕರೆದದ್ದು!

ಏನೋ!........ಬಾ ಎಂತ ಕರೆದ; ಹೋಗಬೇಕೆನಿಸಿದೆ. ಹೋಗುತ್ತೇನೆ.

2 - 1 - 19. .

ಎಷ್ಟು ನಿಧಾನ ಈ ರೈಲು! ಈ ರೈಲು ಹೀಗೆ ಹೋಗುವುದು. ಅದನ್ನು ನಡೆಸುವ ಅಧಿಕಾರಿಗಳು ಅದನ್ನು ಸರಿಯಾಗಿ ಗಮನಿಸದಿರುವುದು ಹಾಳು ಸರ್ಕಾರದ 'ಇನ್‌ಎಫಿಷಿಯನ್‌ಸಿ' (Inefficiency) ತೋರಿಸುತ್ತದೆ! (1948ರಲ್ಲೂ ಉತ್ತಮಗೊಂಡಿಲ್ಲ!) ಮೂರ್ತಿ ಸ್ಟೇಷನಿಗೆ ಬಂದಿದ್ದ. ಅವನ ಹಿಂದೆ ಅವನ ದೊಡ್ಡ ತಮ್ಮಂದಿರಿಬ್ಬರೂ ಬಂದಿದ್ದರು. ನಾನು ರೈಲು ಇಳಿದೊಡನೆಯೇ ಅವರೆಲ್ಲ ನನ್ನ ಬಳಿಗೆ ಓಡುತ್ತಾ ಬಂದರು. ನಾನು ಬಂದುದಕ್ಕೆ ಮೂರ್ತಿ ಬಹಳ ಸಂತೋಷಪಟ್ಟ. ಮನೆಗೆ ಬಂದೆವು; ಅವರ ತಂದೆ ಇರಲಿಲ್ಲ. ತಾಯಿ ಬಾಗಿಲಲ್ಲಿ ನಿಂತಿದ್ದವರು ನಾನು ಇಳಿದ ಮೇಲೆ ಮನೆಯೊಳಗೆ ಹೋದರು. ಒಳಗೆ ಯಾರೋ ಹಾಡುತ್ತಿದ್ದರು. ಧ್ವನಿ ಇಂಪಾಗಿತ್ತು. ಆಕೆ ಮೂರ್ತಿಯ ತಂಗಿಯಂತೆ. ಹೆಸರು ಏನೋ ಹೇಳಿದರು. ಮರೆತು ಹೋಯಿತು. ಪಟ್ಟಾದ ಹಬ್ಬದ ಅಡಿಗೆಮಾಡಿದ್ದರು. ಯಾತಕ್ಕೋ ಗೊತ್ತಿಲ್ಲ. ನನಗೆ ಔತಣವೆ? ನಾನು ಯಾವ ಊರು ಅಳಿಯ!

ಹೊಟ್ಟೆಹಸಿದಿದ್ದುದಕ್ಕೂ ಲಕ್ಷಣವಾದ ಅಡಿಗೆಗೂ ಜೊತೆ ಹೊಂದಿಕೊಂಡಿತು.

3 - 1 - 19....

ಮಾಮೂಲಿನಂತೆ ಬೆಳಿಗ್ಗೆ ಬೇಗನೆ ಎದ್ದು ಬಂದೆ. ನೀರು ಮನೆಗೆ ಹೋದೆ. ಮೂರ್ತಿಯ ತಾಯಿ ಮುಖ ತೊಳೆದುಕೊಳ್ಳುತ್ತಿದ್ದರು. ಅವರನ್ನು ನೋಡಿ ನಾನು ಹಿಂತಿರುಗಲೆತ್ನಿಸಿದೆ. ಅದಕ್ಕೆ ಅವರು, ಪರವಾಗಿಲ್ಲ, ಬನ್ನಿ ಒಳಗೆ; ಹೊರಗೆ ಬಹಳ ಚಳಿ. ಒಲೆಮುಂದೆ ಕುಳಿತು ಕೊಳ್ಳಿ; ನೀವೂ ನಮ್ಮ ಮೂರ್ತಿಯಂತೆಯೆ-ನಮ್ಮ ಭಾವನೆ (ಆ ಭಾವನೆ ಅವರು ಇಂದೂ ಬದಲಾಯಿಸಿಲ್ಲ). ಇದೇನಪ್ಪ ಇವರ ಮನೆಯಲ್ಲಿ ಹೀಗೆ-ಎಂದು ಕೊಳ್ಳಬೇಡಿ-

(ಹೀಗೆ ಎಂದರೆ ಹೇಗೊ?) ಎಂದರು. 'ಪರವಾಗಿಲ್ಲಮ್ಮ' ಎಂತ ಹೇಳುತ್ತಾ ನಾನು ಒಲೆಯ ಮುಂದೆ ಹೋಗಿ ಕುಳಿತೆ.

ಅಷ್ಟರಲ್ಲಿ ಅವರ ಕೂಸು,8-9 ತಿಂಗಳ ಗಂಡು ಮಗು,ಕೂಗಹತ್ತಿತು. ಅಳುತ್ತಿದ್ದ ಆ ಮಗುವನ್ನು ಅವರ ದೊಡ್ಡ ಮಗಳು ಎತ್ತಿಕೊಂಡು ಬಂದಳು. ನಾನಿದ್ದುದನ್ನು ಕಂಡು ಆಕೆ ಹಿಂದೆ ಸರಿದಳು. ಮಗು ಬಹಳ ಮುದ್ದಾಗಿದ್ದು ನನಗೆ ಎತ್ತಿಕೊಳ್ಳಬೇಕೆನಿಸಿತು. (ಈಗವನು. ...ಹ್ಯಾಗೆ ಬೆಳೆದಿದಾನೆ) ಎಷ್ಟು ತಿಂಗಳು, ಏನು ಹೆಸರು, ಎಂತ ಸಹಜವಾದ ಪ್ರಶ್ನೆಗಳನ್ನು ಹಾಕಿದೆ. ಅವರು 'ಕಮಲೂ, ಬಾಮ್ಮ ಇಲ್ಲಿ. ಮಗು ಕರೆದುಕೊಂಡು ಬಾ,' ಎಂದರು. ಕಮಲು ಕೈಯಿಂದ ಮಗುವನ್ನು ನಾನೇ ಎತ್ತಿಕೊಂಡೆ.

ಆ ಮಗು ನನ್ನ ಹತ್ತಿರ ಬರಲು ಹಿಂದೇಟು ಹಾಕಲಿಲ್ಲ! ನಾನು ಮಗುವನ್ನು ಎತ್ತಿಕೊಂಡವನೇ ಅಲ್ಲ!

ಅಷ್ಟರಲ್ಲಿ ಮೂರ್ತಿಯೂ ಎದ್ದು ಬಂದು 'ಸಿದ್ದ ಚೆನ್ನಾಗಿ ಬಂತೇ? ಯಾಕೆ ನನ್ನನ್ನೆಬ್ಬಿಸಲೇ ಇಲ್ಲ' ಎಂದ. ಅವನ ತಮ್ಮ, ಅವನನ್ನು ನೋಡಿ ಅವನ ಬಳಿ ಇಳಿಯುಬಿಟ್ಟ.

ಸ್ನಾನಮಾಡಿದೆ. ಮೂರ್ತಿ ನಡು ಮನೆಗೆ ಕರೆದುಕೊಂಡು ಹೋಗಿ ಕೂಡಿಸಿಕೊಂಡ. ಅಷ್ಟರಲ್ಲಿಯೇ ಮನೆಯವರೆಲ್ಲ ಅಲ್ಲಿಯೇ ಬಂದು ಕುಳಿತರು. ಕಮಲೆ ಎಲ್ಲರಿಗೂ ತಿಂಡಿ ಕಾಫಿ ತಂದುಕೊಟ್ಟಳು. ಅವಳು ಓಡಾಡುವಾಗ ಕದ್ದು ಕದ್ದು ಚೆನ್ನಾಗಿ ನೋಡಿದೆ.

ಅವಳನ್ನು ನೋಡಿದಾಗಿನಿಂದ ಮನಸ್ಸು ಏನೋ ಒಂದು ತರಹ ಇದೆ. ಅವಳ ಮೇಲೆ ನನ್ನ ಮನಸ್ಸು ಹೋಗಿರಬಹುದೆ! ಅವಳು ನನಗೆ ಬೇಕೇ!!

ನನ್ನ ಕಾಲ ಮೇಲೆ ನಾನು ನಿಂತುಕೊಳ್ಳುವ ಯೋಗ್ಯತೆ ಬರುವವರೆಗೆ ಮದುವೆ ಮಾಡಿಕೊಳ್ಳುವುದಿಲ್ಲವೆಂತ ಪ್ರತಿಜ್ಞೆಮಾಡಿರುವ ನನಗೆ ಆಕೆಯ ಮೇಲೆ ಮನಸ್ಸು!

ಇಂದು ಮನಸ್ಸನ್ನು ಏಕೋ ಬಿಗಿಹಿಡಿಯಲು ಸಾಧ್ಯವಾಗಿಲ್ಲ. ಒಂದು ವಿಧವಾದ ಅಶಾಂತಿ.

ಕಾರಣ! ಎಲ್ಲವೂ ದೈವೇಚ್ಛೆಯೆ!

6-1-19....

ಎಲ್ಲೆಲ್ಲಿಗೆ ಹೋಗಿ ಬರಬೇಕೆಂದಿದ್ದೆವೋ ಅಲ್ಲೆಲ್ಲ ಹೋಗಿಯಾಯಿತು.

ಊರಿಗೆ ಹೊರಡುತ್ತೇನೆ.

9-1-19. .

ಅಮ್ಮನಿಂದ ಕಾಗದ ಬಂದಿದೆ. 'ಮದುವೆ ಮಾಡಿಕೊ, ಹೆಣ್ಣನ್ನು ನೋಡಿದ್ದೇನೆ' ಎಂದು.

ಮದುವೆ ಬೇಡವೆಂದು ಬರೆಯಲೇ? ಹಾಗಾದರೆ ನನ್ನ ಮನಸ್ಸು ಪದೇ ಪದೇ ಶಿವಮೊಗ್ಗೆಯತ್ತ ಏಕೆ ಹರಿಯ ಬೇಕು! ಕಮಲೆಯ ಮೇಲೆ ಮನಸ್ಸು ಹರಿಯುತ್ತಿದೆಯಲ್ಲ; ಮನಸ್ಸು ಆಕೆಯನ್ನು ಬಿಟ್ಟಿರಲಾರದಲ್ಲ! ಮದುವೆ ಬೇಡವಾದರೆ ಮನಸ್ಸಿನಲ್ಲಿ ಆಕೆಯ ಧ್ಯಾನವೇಕೆ! ಕಮಲೆಗೆ ಮದುವೆಯಾಗಿದೆಯೋ ಇಲ್ಲವೋ ನನಗೆ ಗೊತ್ತಿಲ್ಲ! ಮದುವೆಯಾಗಿದ್ದರೆ! ಆಗಿದ್ದರೆ ನನ್ನ ಬಾಳು ನಂದಿದಂತೆಯೆ! ಆಕೆ ಅನ್ಯ ಸ್ತ್ರೀಯಾಗಿದ್ದರೆ ಆಕೆಯನ್ನು ನಾನು ಧ್ಯಾನಿಸಬಹುದೆ! ದೇಹದ ವ್ಯಭಿಚಾರಕ್ಕಿಂತ ಮನಸ್ಸಿನ ವ್ಯಭಿಚಾರ ಕೆಟ್ಟದಲ್ಲವೇ!

ಬುದ್ಧಿ ಏಕೋ ಓಡದಿದೆಯಲ್ಲ!

ಅಮ್ಮನಿಗೆ ಏನು ಬರೆಯಲಿ, ಹೇಗೆ ಬರೆಯಲಿ!

ಮೂರ್ತಿಯ ತಾಯಿಯವರನ್ನಂತೂ ನೋಡಿದೆ. ಅವರ ತಂದೆ ಯಾರೆಂತ ಗೊತ್ತಿಲ್ಲ!

12-1-19....

ಶಾಲೆಗೆ ಹೋಗುತ್ತಿದ್ದರೂ ಪಾಠಗಳ ಮೇಲೆ ಮನಸ್ಸಿಲ್ಲ. ಮನಸ್ಸಿಗೆ ಏನೂ ಬೇಡವಾಗಿದೆ. ಹೀಗಾದರೆ ನನ್ನ ಗತಿ ಏನು? ಪರೀಕ್ಷೆಯಲ್ಲಿ ಪಾಸಾಗುವುದೆ! ನನ್ನ ಚಿತ್ತಚಾಂಚಲ್ಯಕ್ಕೆ ಏನು ಹೇಳಲಿ! ಸ್ವತಂತ್ರನಾಗಿ ನನ್ನ ಕೂಳನ್ನು ನಾನು ಸಂಪಾದಿಸಿಕೊಳ್ಳುವ ವರೆಗೆ ಮದುವೆಯಾಗಬಾರದೆಂದು ನಾನು ಮಾಡಿದ್ದ ನಿಶ್ಚಯ ಏನಾಯಿತು!

ಕಮಲೆಗೆ ಇನ್ನೂ ಮದುವೆಯಾಗಿಲ್ಲದಿದ್ದರೆ! ಮೂರ್ತಿಯನ್ನು ಕೇಳಲೇ!

ಕೇಳಿದರೆ! ಅವನು ಏನು ತಿಳಿದುಕೊಂಡಾನು! ಅಮ್ಮನು ನೋಡಿ

ರುವ ಹೆಣ್ಣು ಕಮಲೆಯೋ ಆಗಿದ್ದರೆ!

ನಾನು ಅದ್ಭುತದೀಪವಿದ್ದ ಅಲ್ಲಾವುದ್ದೀನನಾದರೆ! ಅಷ್ಟಲ್ಲವೆ ಗೀತೆಯಲ್ಲಿ

ಅಸಂಶಯಂ ಮಹಾಬಾಹೋ
ಮನೋ ದುರ್ನಿಗ್ರಹಂ ಚಲಂ ।
ಅಭ್ಯಾಸೇನತು ಕೌಂತೇಯ ।
ವೈರಾಗ್ಯೇಣ ಚ ಗೃಹ್ಯತೇ (೬, ೩೫)

ಎಂತ ಹೇಳಿವೆಯೆ!

ಅಭ್ಯಾಸೇನತು ಕೌಂತೇಯ. ಉಂ ವೈರಾಗ್ಯೇಣ ಚ. ....ಹಿಂದೆ ಮಾಡಿದವರು ಮನುಷ್ಯರಲ್ಲವೆ?

ನಾನು ಮನುಷ್ಯನಲ್ಲವೆ?

ಕಾಮ ಏಷ ಕ್ರೋಧ ಏಷ
ರಜೋಗುಣ ಸಮುದ್ಭವಃ
ಮಹಾಶನೋ ಮಹಾಪಾಪ್ಮಾ
ವಿದ್ಧ್ಯೇನಮಿಹ ವೈರಿಣಮ್ (೩, ೩೭)

ಇಂದಿನಿಂದ ಮನಸ್ಸನ್ನು ಅದು ಹೋದತ್ತ ಬಿಡುವುದಿಲ್ಲ.

14 - 1 - 19....

ಮದುವೆ ಗೊತ್ತುಮಾಡಲೇ? ಹುಡುಗಿಯನ್ನು ನಾನು ನೋಡಿದ್ದೇನೆ. ನಮಗೆ ಸಮರ್ಪಕವಾಗಿದೆ. ಹುಡುಗಿಯ ತಂದೆ ನನ್ನ ಬಾಲ್ಯ ಸ್ನೇಹಿತ. ನಿಮ್ಮ ತಾಯಿಯ ಕಾಗದಕ್ಕೆ ಉತ್ತರ ಒರೆದಿಲ್ಲ; ಒಡನೆಯೇ ಉತ್ತರ ಕೊಡು-ಎಂದು ಅಣ್ಣ ಕಾಗದ ಒರೆದಿದ್ದಾರೆ

ಕಮಲೆ!

ಊಹುಂ! ಮನಸ್ಸು ಅತ್ತ ಹೋಗಕೂಡದು! ಕೂಡದು ಅಂದ ಮೇಲೆ ಕೂಡದು.

ಅಸಂಶಯಂ ಮಹಾ ಬಾಹೋ
ಮನೋದುರ್ನಿಗ್ರಹಂ ಚಲಂ
ಅಭ್ಯಾಸೇನತು...... ..... ...

ಅಣ್ಣನಿಗೆ ಏನು ಉತ್ತರ ಒರೆಯಲಿ?

ಉತ್ತರ ಬರೆಯದೆ ಇರಲೆ? ಅಥವ ನಾನು ಇಂತಹ ಹೆಣ್ಣನ್ನು ನೋಡಿ ಬಂದಿದ್ದೇನೆ. ಆ ಹುಡುಗಿಯ ತಂದೆ ಹೆಸರು ನನಗೆ ಗೊತ್ತಿಲ್ಲ. ಆ ಹುಡುಗಿಗೆ ಮದುವೆ ಆಗಿದೆಯೊ ಇಲ್ಲವೋ ವಿಚಾರಿಸಿ, ಆಗಿಲ್ಲದಿದ್ದರೆ ಮದುವೆಯಾಗುತ್ತೇನೆ ಎಂದು ಬರೆಯಲೇ? ಹಾಗಾದರೆ ಅವರು ಏನು ತಿಳಿದುಕೊಳ್ಳುತ್ತಾರೆ! ಇರುವ ಒಬ್ಬ ಮಗ, ನಾವು ನೋಡಿದ ಹೆಣ್ಣನ್ನು ಒಪ್ಪದೆ ತನಗಿಷ್ಟ ಬಂದವಳನ್ನು ನೋಡಿರುತ್ತಾನೆ--ಎಂತ ಅವರು ಅಸಮಾಧಾನ ಪಡೆದರೆ! ಹಾಗೂ ಅಸಮಾಧಾನ ಪಡೆದರೆಂದೇ ಇಟ್ಟುಕೊಳ್ಳೋಣ. ಆ ಸಂಬಂಧ ಅವರಿಗೆ ಒಪ್ಪಿಗೆಯಾಗುತ್ತದೆಯೋ ಇಲ್ಲವೊ?

ಅವರನ್ನು ಬಿಟ್ಟೇ ಮದುವೆಯಾಗುವುದೇ! ಮಾತನಾಡುವ ತಂದೆ ತಾಯಿಗಳನ್ನುಳಿದು, ಅವರ ಇಷ್ಟಕ್ಕೆ ವಿರೋಧವಾಗಿ! ಏನುಮಾಡಲಿ!

16-1-19

ಮದುವೆ ಆಗಬೇಡವೆಂತ ಉತ್ತರ ಹಾಕಿದ್ದೇನೆ.

20-1-19

ಮೂರ್ತಿ ಇಂದು ಮನೆಗೆ ಬಂದಿದ್ದ. ಏನನ್ನೋ ಹೇಳಬೇಕಂತ ಎರಡು ಮೂರು ಸಲ ಪ್ರಯತ್ನಪಟ್ಟ. ಆದರೆ ಹೇಳಲಿಲ್ಲ.

ಏನೋ ಗೊತ್ತಾಗಲಿಲ್ಲ.

24-1-19...

ಇಂದು ಸಾಯಂಕಾಲ ತಿರುಗಾಡಿಕೊಂಡು ಬರಲಿಕ್ಕೆಂದು ನಾನೂ ಮೂರ್ತಿಯೂ ಕಾರಂಜಿ ಕೆರೆಯ ಕಡೆ ಹೋಗಿದ್ದೆವು. ಸುಮಾರು ಎರಡು ಗಂಟೆಯ ಹೊತ್ತು ಇಬ್ಬರಲ್ಲಿ ಒಬ್ಬರೂ ತುಟಿ ಎರಡು ಮಾಡಲಿಲ್ಲ. ತೀರ ಮನೆಯ ಹತ್ತಿರ ಬಂದ ಮೇಲೆ ಮೂರ್ತಿ, 'ಬಡವರ ಮಗಳು, ನನ್ನ ತಂಗಿ ಕಮಲೆಯನ್ನು ಮದುವೆಯಾಗುತ್ತೀಯಾ' ಎಂತ ಕೇಳಿದ. ನಾನು ಅವನ ಕೈಯನ್ನು ಎರಡೂ ಕೈಗಳಿಂದ ಹಿಡಿದುಕೊಂಡು ಮೆಲ್ಲನೆ ಹಿಸುಕಿ, ನಕ್ಕೆ.

ಇದರಿಂದಲೇ ನನ್ನ ಭಾವನೆ ಅವನಿಗೆ ತಿಳಿದಿರಬೇಕು.

30-1-19....

ಅಣ್ಣ ಊರಿಗೆ ಬರಬೇಕೆಂತ ಕಾಗದ ಬರೆದಿದ್ದರು. ಊರಿಗೆ ಹೋದೆ. ಅಣ್ಣ ಊರಲ್ಲಿರಲಿಲ್ಲ. ಎರಡು ದಿನವಿದ್ದೆ. ಅಣ್ಣ ಊರಿಗೆ ಬರಲಿಲ್ಲ. ಏಕೆ ಕಾಗದ ಬರೆದದ್ದು, ನನಗೆ ಶಾಲೆ ಹೋಯಿತು, ಎಂತ ಅಮ್ಮನನ್ನು ಕೇಳಿದೆ.

ನನಗೆ ಗೊತ್ತಿಲ್ಲ, ಇಂದೋ ನಾಳೆಯೋ ನಿಮ್ಮ ಅಣ್ಣ ಬರುತ್ತಾರೆ. ಅವರನ್ನು ಕೇಳಿ ಹೋಗಪ್ಪ, ಎಂದಳು.

ಅಣ್ಣ ಬಂದರು. ಅವರು ಏನೂ ಹೇಳಲಿಲ್ಲ. ಅವರನ್ನು ನಾನು ಕೇಳಲೂ ಇಲ್ಲ.

31 - 1 - 19.. .

ಅಣ್ಣ ರೈಲ್ವೆ ಸ್ಟೇಷನ್ನಿಗೆ ಹೋಗಿ ಕಮಲೆಯನ್ನೂ ಅವರ ತಂದೆಯನ್ನೂ ಕರೆದು ತಂದರು. ಊಟಮಾಡುತ್ತಾ ಕುಳಿತಿದ್ದಾಗ ಕಮಲೆಯ ತಂದೆ ಮಾತನಾಡಿದ್ದರಲ್ಲಿ, ಅವರು ವರಾನ್ವೇಷಣಕ್ಕಾಗಿ ಹೊರಟಿದ್ದಂತೆ ಕಂಡು ಬಂದಿತು.

ಅದೇ ರಾತ್ರಿ ಬೇಕು ಎಂತ, ಅಮ್ಮನನ್ನು 'ಅವರು ಏಕೆ ಅಲ್ಲಿ ಬಂದಿದ್ದಾರೆ' ಎಂತ ಕೇಳಿದೆ.

ಅದಕ್ಕೆ ಅಮ್ಮ 'ಅದೆಲ್ಲ ನಿನಗೇಕೆ; ಹುಡುಗಿಯನ್ನು ಮದುವೆಮಾಡಿಕೊಳ್ಳುವುದಿಲ್ಲ ಅಂತ ಹೇಳಿಬಿಟ್ಟ ಮೇಲೆ, ಅವರ ಯೋಗಕ್ಷೇಮ ಕಟ್ಟಿಕೊಂಡು ನಿನಗೇನು? ಅವಳಿಗೆ ನನ್ನ ಸೊಸೆಯಾಗುವ ಯೋಗವಿರಬೇಕಲ್ಲ! ಮೂರ್ತಿಗೂ ನಿನಗೂ, ವರ್ಷದ ಪರಿಚಯವಿದ್ದರೆ ನಿಮ್ಮ ತಂದೆಗೂ, ಮೂರ್ತಿ ತಂದೆಗೂ 30 ವರ್ಷದ ಪರಿಚಯ ಇದೆ ಹೆಣ್ಣು ಹೆತ್ತವರ ತಾಪತ್ರಯ' ಎಂದು ಬಿಟ್ಟರು.

ನನಗೆ ತಲೆ ಮೇಲೆ ಆಕಾಶ ಬಿದ್ದ ಹಾಗಾಯಿತು!

ಕಮಲೀನ ಮದುವೆಯಾಗುತ್ತೀಯ, ಅಂತ ಅವರು ನನ್ನನ್ನು ಯಾವಾಗಲಾದರೂ ಕೇಳಿದ್ದರೇ ಎಂತ ಎಷ್ಟು ಜ್ಞಾಪಿಸಿಕೊಂಡರೂ ಅವರು ಕೇಳಿದ್ದ ಹಾಗೆ ತೋರಲೇ ಇಲ್ಲ!

'ಹಾಗಾದರೆ ಅವಳನ್ನು ನಿನ್ನ ಸೊಸೆಯಾಗಿ ತಂದುಕೊಳ್ಳಲು ನಿನಗೆ ಇಷ್ಟವಿದೆಯೆ?'

'ನಾನು ಇವಳನ್ನು ಮಾಡಿಕೋತಿಯಾ, ನಮಗೆ ಒಪ್ಪಿಗೆಯಾಗಿದೆ' ಎಂತ ಕೇಳಿದ್ದು. ಆಗ 'ಬೇಡ' ಎಂದೆ, ಈಗ ಬೇಕು ಅನ್ನುತ್ತೀಯ. ಒಂದು ಸಲ ಬೇಡ ಅಂದ ಮೇಲೆ ಈಗ ನಾವಾಗಿ ಹೇಗೆ ಕೇಳೋದು!

ನನ್ನ ಮುಖ ನೋಡಿ ಅಮ್ಮನಿಗೆ ತಡೆಯಲಾರದಷ್ಟು ನಗು ಬಂತು. ಅಷ್ಟರಲ್ಲಿಯೇ ಅಣ್ಣ ನನ್ನ ಕರೆಯಲು ಅಮ್ಮ ಹೊರಟುಹೋದರು.

ಪುನಃ ಒಬ್ಬಳನ್ನು ನೋಡುವುದಕ್ಕೇ ಆಗಲಿಲ್ಲ! ಅಮ್ಮ ನಕ್ಕಿದ್ದರ ಅರ್ಥವೇನು?

ಮೂರ್ತಿಗೆ ಮಾಡಿಕೊಳ್ಳುತ್ತೇನೆ ಎಂತ ಬಾಯಿಬಿಟ್ಟು ಹೇಳಲಿಲ್ಲ ಅಮ್ಮ ಹೀಗೆ ಹೇಳುತ್ತಾಳೆ!

ಕೈಗೆ ಬಂದ ತುತ್ತಂತಾದರೆ!

ಕಮಲೆಯನ್ನು ಕೇಳಿನೋಡಲೇ! ಅಮ್ಮನಿಗೆ ಹೇಳಲೆ?

1-2-19

ಬೆಳಿಗ್ಗೆ ಅಷ್ಟು ಹೊತ್ತಿಗೇ ಎದ್ದು ಈಚೆ ಬಂದೆ. ಕಮಲಿ ರೋಜಾ ಹೂವು ಕೀಳುತ್ತಿದ್ದಳು. ಅತ್ತಿತ್ತ ನೋಡಿದ್ದರಲ್ಲಿ ಯಾರೂ ಇದ್ದಂತೆ ಕಾಣ ಲಿಲ್ಲ. ನಿಶ್ಶಬ್ದವಾಗಿ ಹಿಂದಿನಿಂದ ಹೋಗಿ ಅವಳ ಭುಜದ ಮೇಲೆ ಕೈಯ ನ್ನಿಟ್ಟೆ. ಮೆಟ್ಟಿಬಿದ್ದು ಹಿಂತಿರುಗಿ ನೋಡಿ ಓಡಲು ಪ್ರಯತ್ನಿಸಿದಳು. 'ನಿಮ್ಮ ವರಾನ್ವೇಷಣ ನನ್ನೊಡನೆ ಮುಗಿಯಲಿ'ಎಂದೆ. ಅವಳು ಕೊಸರಿಕೊಂಡು ಓಡಿಯೇ ಹೋದಳು. ಓಡಿ ಹೋಗುವ ಮೊದಲು ಅವಳು ಒಂದು ಸಲ ಹಿಂತಿರುಗಿ ನೋಡಿದಂತೆಯೂ, ಅವಳ ಮುಖದ ಮೇಲೆ ಹಾಸ್ಯದ ನಗೆ ಆಡುತ್ತಿತ್ತೆಂದೂ, ಅದೇ ಆಕೆಯ ಒಪ್ಪಿಗೆಯನ್ನು ಸೂಚಿಸಿತೆಂದೂ ನನ್ನ ಭಾವನೆ!

13-2-19....

ಕಮಲ ಮತ್ತು ಅವಳ ತಂದೆ ಈ ದಿನ ಊರಿಗೆ ಹೊರಟು ಹೋ ದರು; ನಾನು ಹೊರಡುತ್ತೇನೆ. ಇಲ್ಲಿದ್ದ ಒಂದೆರಡು ದಿನ 'ಕಮಲೆ' ಮನೆಗೆ ಆಗಲೇ ಸೇರಿಬಿಟ್ಟಿರುವೆನೆನ್ನುವಂತೆ ಸಡಗರದಿಂದ ಓಡಾಡುತ್ತಿದ್ದಳು!

ನನ್ನ ಮನಸ್ಸಿಗೆ ಒಪ್ಪಿದವಳು ಅಮ್ಮನ ಮನಸ್ಸಿಗೂ ಒಪ್ಪುವಂತೆ ನಡೆದುಕೊಳ್ಳಲೆಂದೇ ದೇವರಲ್ಲಿ ನನ್ನ ಮೊರೆ.

15-2-19....

ಬೇಸಿಗೆ ರಜದಲ್ಲಿ ಮದುವೆ ಮಾಡಬೇಕೆಂದು ಏರ್ಪಾಡು ಮಾಡು ತ್ತಿದ್ದೇವೆ-ಎಂತ ಮೂರ್ತಿ ಹೇಳಿದ' 'ಪರೀಕ್ಷೆಯ ಫಲಿತಾಂಶ ಹೊರಬಿದ್ದ ಮೇಲೆ ಆಗಲಿ' ಎಂತ ಹೇಳಿಬಿಟ್ಟೆ.

26-6-19....

ಊಟಕ್ಕೆ ಎಲೆ ಹಾಕುವ ಮೊದಲು ಕೊಠಡಿಯಲ್ಲಿ ಕುಳಿತು ನನ್ನ

ಭವಿಷ್ಯವನ್ನು ಕುರಿತು ಚಿಂತಿಸುತ್ತಿದ್ದೆ. ಬೆನ್ನಿನ ಮೇಲೆ ಹಪ್ಪಳದಂಥ ಏಟು ಗಳು 3-4 ಬಿದ್ದವು. ಪೆಟ್ಟು ಬಿದ್ದು ತಿರುಗಿ ನೋಡುವಲ್ಲಿ, ಕಮಲೆಯು ಹೊರತು ಉಳಿದವರೆಲ್ಲರೂ ಪಲಾಯನವಾಗಿದ್ದರು. ಅವಳೂ ಬಾಗಿಲ ವರೆಗೆ ನಡೆದಿದ್ದಳು. ಒಂದೇ ಹಾರು ಹಾರಿ ಅವಳನ್ನು ಹಿಡಿದುಕೊಂಡೆ. ಅವಳು ನಾಚಿಕೆಯಿಂದ ತಲೆತಗ್ಗಿಸಿದಳು.

ಸ್ವಲ್ಪ ಹೊತ್ತು ಮೌನ. ಆ ಮೇಲೆ ಅವಳೇ ಮಾತನಾಡಲು ಪ್ರಯತ್ನಿಸಿದಳು. ಆದರೆ ಧೈರ್ಯ ನಿಲ್ಲಲಿಲ್ಲ. ಸ್ವಲ್ಪ ಉತ್ತೇಜನ ಕೊಟ್ಟೆ. 'ಊಟದ ತಿಂಡಿಬಿಟ್ಟು, ಮಿಕ್ಕದ್ದೆಲ್ಲ ತಮಾಷೆಯ ತಿಂಡಿ; ತಿನ್ನಬೇಡಿ' ಎಂದಳು.

'ಬಹಳ ವಂದನೆಗಳು' ಎಂದೆ. ನಸುನಗುತ್ತಾ ಓಡಿ ಹೋದಳು.

29 - 6 - 19....

ಅಡಿಕೆಪುಡಿ ತೆಂಗಿನ ಚಿಪ್ಪಿನ ಚೂರಂತೆ!

ಮದುವೆ ಮುಗಿಯಿತು. ನಾಳೆ ಊರಿಗೆ ಹೋಗುತ್ತೇವೆ. ಮೂರ್ತಿಯ ದಯೆಯಿಂದ ಕಮಲೆಯೊಡನೆ ಎರಡು ನಿಮಿಷ ಮಾತನಾಡಲು ಅವಕಾಶ ಸಿಕ್ಕಿತು.

ಕಮಲೆಯಿಂದ ಸಮಾಚಾರವೆಲ್ಲ ತಿಳಿದುಕೊಂಡೆ. ನನ್ನನ್ನು ಶಿವ ಮೊಗ್ಗೆಗೆ ಮೂರ್ತಿ ಕರೆದುಕೊಂಡು ಹೋದುದು ಕಮಲೆಯನ್ನು ನೋಡು ವುದಕ್ಕೇ ಅಂತೆ. ನಾನು ಮಾತುಕೊಟ್ಟ ಮೇಲೆ ತಪ್ಪುವುದಿಲ್ಲ ಎಂತ ಅವನು ಮೊದಲು ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋದುದು. ನಾನು ಒಪ್ಪಿ ರುವ ವಿಚಾರ ಅವನು ಅವರ ತಾಯಿತಂದೆಗಳಿಗೆ ತಿಳಿಸುವುದಕ್ಕೆ ಮೊದಲೇ ಅವರ ತಂದೆ ನಾನು ಅವರ ಸ್ನೇಹಿತನ ಮಗ ಎನ್ನುವುದು ತಿಳಿಯದೆ ನಮ್ಮ ತಂದೆಗೆ ಕಾಗದ ಬರೆದರು. ಅವರು ಕಮಲೀನ ನೋಡಿ, ಹುಡುಗ ಒಪ್ಪಿ ದರೆ ನಮ್ಮ ಅಭ್ಯಂತರವೇನೂ ಇಲ್ಲವೆಂತ ಹೇಳಿ, ನನಗೆ ಕಾಗದ ಬರೆದ ರಂತೆ. ಇವರು ಕೇಳುತ್ತಿರುವುದು ಕಮಲೀನ ಅಂತ ನನಗೆ ತಿಳಿಯದೆ ನಾನು ಬೇಡ ಎಂದೆ. ನಾನು ಬೇಡ ಎಂದ ವಿಚಾರ ಮೂರ್ತಿಗೆ ಗೊತ್ತಾಗಿ ಮದುವೆಗೆ ಒಪ್ಪಿದವನು ಈಗ ಹೀಗೆ ಹೇಳಲು ಕಾರಣವೇನು ಎಂತ-ಅನು ಮಾನವಾಗಿ, ಸೂಕ್ಷ್ಮವಾದ ವಿಚಾರ ಎಂಬುದರಿಂದ, ನನ್ನನ್ನು ಕೇಳಲು ಹಿಂದೇಟು ಹಾಕಿ ನಾನು ಮತ್ತೆ ಕಮಲೀನ ನಮ್ಮ ಮನೆಯಲ್ಲಿ ಸಾಧಿಸುವ ಉಪಾಯ ಮಾಡಿದ.

ಅಮ್ಮ ಹೇಳ್ತಾ ಇದ್ದುದು ಕಮಲೀನೇ ಎಂತ ತಿಳಿಯದೆ ನಾನು ಬೇಡ ಅಂದದ್ದಕ್ಕೇ ಅಮ್ಮ ನೊಂದುಕೊಂಡು 'ಅವಳಿಗೆ ನನ್ನ ಸೊಸೆಯಾಗುವ ಯೋಗ ಇರಬೇಕಲ್ಲ' ಎಂದುದು



# 10 ಮಾಲತಿ ಬರೆದ ಕತೆ

'ರಾಜಾ'

'ಏನೋ' ಲಚ್ಚಣ್ಣ?

'ನಮ್ಮವರಿಗೆ ಮಾತಾಡೋದು ಎಷ್ಟು ಸುಲಭವೋ ಆಡಿದ ಮಾತು ತಪ್ಪೋದು ಅಷ್ಟೇ ಸುಲಭ ಅಂತ ಕಾಣುತ್ತೆ'.

'ಅಂಥದು ಏನಪ್ಪ ನೀನು ಕಂಡದ್ದು ಈಗ?'

'ನಮ್ಮ ಸಮಾಜ ಯಾಕೋ ಅಧೋಗತಿಯ ದಾರಿ ಹಿಡೀತಾ ಇದೆ ಕಣಯ್ಯ, 1939ರಲ್ಲೂ ಸಹ! ವಿದ್ಯೆ ಇರೋವರೂ ಇಲ್ಲದೆ ಇರೋವರೂ ಎಲ್ಲ ಒಂದೇ ಆಗಿಬಿಟ್ಟಿದಾರೆ. ಓದಿದವರಾಗಲಿ ತಿಳಿದುಕೊಳ್ಳುವ ಶಕ್ತಿ ಇರುವವರಾಗಲಿ ಸರಿಯಾದ ದಾರೀಲಿ ನಡೆಯೋದೇ ಇಲ್ಲ. ಇನ್ನು ಓದೂ ಇಲ್ಲದೆ ತಿಳುವಳಿಕೇನೂ ಇಲ್ಲದೆ ಇರೋವರು ಇವರು ತೋರಿಸಿದ ಹಾದೀಲೇ ತಾನೆ ಹೋಗಬೇಕು! ಕಲ್ಚರ್ಡ್, ಪಿಲ್ಲರ್ಸ್ ಆಫ್ ಸೊಸೈಟಿ, ಎಜುಕೇಟೆಡ್, ರಿಫಾರಮ್ಡ್, ಮಾಡರ್ನ್ ಎಂತ ಬಿರುದು ಪಡೆದವರೆಲ್ಲ ಈ ಗತಿಯಾದರೆ, ಇನ್ನು ಸಮಾಜದ ಗತಿ ಏನು ಎಂತ ನನಗೆ ತೋಚದಾಗಿದೆ' ಅವರು ಗ್ರೇಟೆಸ್ಟ್ ಫ್ರೇಂಡ್ಸ್ ಕಣಯ್ಯ.

'ಏನಯ್ಯ, ನಿನ್ನ ವೇದಾಂತ ಸಾಕುಮಾಡು; ಛಟ್ ಅಂತ ಬಾ ವಿಷಯಕ್ಕೆ.'

'ಏನೂ ಇಲ್ಲ, ನಚ್ಚು, ಇಂಗ್ಲೆಂಡಿಗೆ ಹೋಗೋಕೆ ಎಂತ ನೆವ ಹೇಳಿ........ಅವರ ಮಗಳನ್ನು ಮದುವೆಮಾಡಿಕೋತೇನೆ ಎಂತ ಹೇಳಿ ಹತ್ತೇಸಾವಿರ ರೂಪಾಯಿ ವರದಕ್ಷಿಣೆ ತೆಗೊಂಡ, ಅಷ್ಟೆ!'

'ಏನು! ನಚ್ಚು ವರದಕ್ಷಿಣೆ ತೆಗೊಂಡನೆ! ವರದಕ್ಷಿಣೆ! ಹತ್ತುಸಾವಿರ! ಏನು ತಮಾಷೆ ಮಾಡ್ತಾ ಇದ್ದೀಯೊ?'

'ತಮಾಷೇನೂ ಇಲ್ಲ, ಗೀಮಾಷೇನೂ ಇಲ್ಲ. ನಿಜವಾಗಿಯೂ ಹತ್ತು ಸಾವಿರ ತೆಗೊಂಡ. ಮದುವೆಗೆ ನಮ್ಮನ್ನು ಕರೆದರೆ, ನಮಗೆ ಈ ವಿಚಾರ ಗೊತ್ತಾದರೆ ನಾವು ದಬಾಯಿಸ್ತೇವೆ ಎಂತ ನಮಗೆ ಲಗ್ನ ಪತ್ರಿಕೆ ಸಹ ಕಳಿಸಲಿಲ್ಲ.'

'ಅವನಿಗೇನು ಬಂದಿತ್ತಯ್ಯ ಹೊತ್ತು! ಎಲ್ಲರಮೇಲೂ ಅಷ್ಟು ಕಠಿಣ

ವಾಗಿ ಟೀಕೆ ಮಾಡ್ತಾ ಇದ್ದನಲ್ಲಯ್ಯ!'

'ಅದಕ್ಕೇ ನನ್ನ ಪೀಠಿಕೆ ಅಷ್ಟು ದೊಡ್ಡದಾಗಿದ್ದದ್ದು. ಅವನು ಮಾತಾಡೋದು ಮಾತ್ರ ನಿರ್ವಾಹವಿರಲಿಲ್ಲ. ಡಬಲ್ ಗ್ರಾಜ್ಯುಯೇಟ್. ಅವರ ತಂದೆ ಗುರಿಕಾರ್ರು. ಅವರೂ ಮುಂದುವರಿದವರೆಂದೂ ಸಮಾಜ ಸುಧಾರಕರೆಂದೂ ಹೆಸರು ಪಡೆದವರು. ಅವನ ಮಾವನವರು ಅಂಥವರೇ. ಆ ಹುಡುಗಿಯೂ ಇಂಟರ್ ಮೀಡಿಯೆಟ್ ಪರೀಕ್ಷೆ ಪ್ಯಾಸ್ ಮಾಡಿದ್ದಾಳೆ. ಅವರ ಪೈಕಿ ಯಾರಾದರೂ ವರವಿಕ್ರಯ ಕೂಡದು ಎಂತ ಹೇಳಲಿಲ್ಲವಲ್ಲ. ಇಂಥವರೇ ವರಗಳ ವ್ಯಾಪಾರ ಇತರರಿಗೆ ತೋರಿಸಿ ಕೊಡ್ತಾ ಇದ್ದರೆ ಇನ್ನೂ ಬಡವರ ಗತಿ ಏನು! ಅದರಲ್ಲೂ ೪-೫ ಜನ ಹೆಣ್ಣುಮಕ್ಕಳಿದ್ದರೆ ಅವರನ್ನು ಬಾವಿಗೆ ತಾನೇ ತಳ್ಬೇಕು!'

ದೊಡ್ಡ ಪೇಟೆಯಲ್ಲಿ ನಾಲ್ಕೈದು ಯುವಕರು ಈ ರೀತಿ ಮಾತನಾಡಿ ಕೊಂಡು ಹೋಗುತ್ತಿದ್ದದನ್ನು ಅವರ ಹಿಂದೆ ಕಾಲೇಜು ಮುಗಿಸಿಕೊಂಡು ಮನೆಗೆ ಹಿಂತಿರುಗುತ್ತಿದ್ದ ಯುವತಿಯರ ಗುಂಪೊಂದರಲ್ಲಿ ಇದ್ದ ಮಾಲತಿ ಗಮನಿಸಿ ಕೇಳುತ್ತಿದ್ದವಳು–ನಡುಗಿದಳು. ಆಕೆಯ ಮುಖ ವಿವರ್ಣ ವಾಯಿತು. ನಡಿಗೆ ನಿದಾನವಾಯಿತು. ತುಟಿಯನ್ನು ಪೀಡಿಸಿ ಮನಸ್ಸು ಬಿಗಿ ಹಿಡಿದು ಆ ಯುವಕರ ಕಡೆ ನೋಡಿದಳು. ಆಕೆಗೆ ಕಾಣಿಸುತ್ತಿದ್ದದು ಅವರ ಬೆನ್ನು ಮಾತ್ರ; ಆಗಾಗ್ಯೆ ಅವರು ಒಬ್ಬರನ್ನೊಬ್ಬರು ಸಂಭೋಧಿ ಸಲು ಮುಖ ಒಂದು ಪಾರ್ಶ್ವಕ್ಕೆ ತಿರುಗಿಸಿದಾಗ ಅಷ್ಟು ಮುಖ ಮಾತ್ರ.

ರಾಜ ಎಂದು ಕರೆಯಿಸಿಕೊಳ್ಳಲ್ಪಟ್ಟಾತ ಸುಮಾರು ಎತ್ತರದ ಆಳು. ವಿಶಾಲವಾದ ಬೆನ್ನು; ಸಣ್ಣ ನಡು; ಬಲವಾದ ತೊಡೆ. ನಾಲ್ಕು ಮೊಳದ ಖಾದಿ ಪಂಚೆಯುಟ್ಟು ಖಾದಿ ಬನಿಯನ್ ತೊಟ್ಟಿದ್ದ. ಎಡ ತೋಳಿನ ಅಂಗಿಯನ್ನು ಮೇಲಕ್ಕೆ ಮುದುರಿದ್ದುದರಿಂದ ಮಾಂಸ ಪುಷ್ಟ ವಾದ ತೋಳು ಕಾಣುತ್ತಿತ್ತು. ಗುಂಗುರು ಕೂದಲು, ಗುಂಡು ಮುಖ; ಎಣ್ಣೆಗೆಂಪು ಬಣ್ಣ. ಕಣ್ಣಿಗೆ ಸುಲೋಚನ.

ಅಚ್ಚಣ್ಣ ಎಂದು ಕರೆಸಿ ಕೊಂಡಾತ ಮಿಲಿಟರಿ ಅಧಿಕಾರಿ ಉಡುಪು ಧರಿಸಿದ್ದ. ಎತ್ತರವಾದ ಆಳು. ರಾಜನಷ್ಟು ಮಾಂಸ ಪುಷ್ಟಿಯಿಲ್ಲದಿದ್ದರೂ ಎತ್ತರಕ್ಕೆ ತಕ್ಕ ಗಾತ್ರ. ಸ್ಫುರದ್ರೂಪಿ, ಉದ್ದವಾದ ಮೂಗು.

ಮಿಕ್ಕವರನ್ನು ಮಾಲತಿ ಗಮನಿಸುವ ಮೊದಲೇ ಅವರು ಬೇರೆ

ಶಸ್ತ್ರೆಯಲ್ಲಿ ತಿರುಗಿಬಿಟ್ಟರು.

*   *   *   *   *

ಋುಕ್ಮಿಣೀ

ಋುಕ್ಮಿಣೀ............

ಅಂ, ಏನಣ್ಣಾ, ಕೂಗಿದೆಯ? ಸಾರಿಗೆ ಒಗ್ಗರಣೆ ಹಾಕ್ತಾ ಇದ್ದಳು—ವೈನಿ, ನೀನು ಕೂಗಿದ್ದು ಆ ಶಬ್ದದಲ್ಲಿ ಕೇಳಿಸಲಿಲ್ಲ.

'ಅಚ್ಚಣ್ಣಾನಿಂದ ತಂತಿ ಬಂದಿದೆ. ಸಾಯಂಕಾಲದ ರೈಲಿಗೆ ಬರ್‍ತಾನಂತೆ.'

'ವೈನೀ.... ಅಚ್ಚಣ್ಣ ಸಾಯಂಕಾಲ ಬರ್‍ತಾನಂತೆ.'

'ಒಳ್ಳೇದಣ್ಣಾ, ದೇವರು ದೊಡ್ಡವನು. ವೈನಿ ಪುಣ್ಯ'

'ಹವುದಮ್ಮಾ, ಅವಳು ನಮ್ಮ ಮನೆಯ ಲಕ್ಷ್ಮಿದೇವಮ್ಮ. ಆಕೆ ಇದ್ದಿದ್ದರೆ ಈಗ ಎಷ್ಟು ಸಂತೋಷ ಪಡ್ತಾ ಇದ್ದಳೊ!

ಅವರ ಮತ್ತು ರುಕ್ಮಿಣಿಯ ಕಣ್ಣುಗಳಲ್ಲಿ ನೀರು ಮಿಡಿಯಿತು.

ಲಕ್ಷ್ಮೀದೇವಿಯಂತ ಮಾನವರಿಂದ ಬಿರುದು ಪಡೆದ ಮಾಲತಿಯ ಮನದಲ್ಲಿ ಆರು ವರ್ಷಗಳ ತನ್ನ ಬಾಳು ಒಂದು ಮಿಂಚಿನಂತೆ ತಲೆದೋರಿ ಅದೃಶ್ಯವಾಯಿತು. ಹೆಚ್ಚು ಕಾಲ ಅದನ್ನು ನೆನೆಸಿಕೊಳ್ಳಲು ಅವಕಾಶ ವೆಲ್ಲಿಯದು! ತನಗಿಂತ ಉತ್ತಮರೂ ಸಿರಿವಂತರೂ ಹತ್ತಾರು ಜನರಿದ್ದರೂ ತನ್ನನ್ನು ಕೈಹಿಡಿದು ಕಾಪಿಟ್ಟು, ನಿರ್ಗತಿಕನಾದ ತನ್ನ ತಂದೆಯ ಮಾನ ಉಳಿಸಿದ, ಒಂದೆರಡು ವರ್ಷಗಳಿಂದ ಇರವೇ ಅನುಮಾನವಾಗಿದ್ದ ತನ್ನ ಪತಿದೇವನ ಬರವಿನ ಸಂತೋಷ ಸುದ್ದಿಯನ್ನು ಕೇಳಿದ ಆಕೆಗೆ, ಆಗ ಹಿಡಿಸದಷ್ಟು ಆನಂದವಾಯಿತು. ಆಕೆಗೆ ಆರು ವರ್ಷದಿಂದ ಪತಿಯ ಹೆಸರೇ ಜಪಮಂತ್ರವಾಗಿತ್ತು. ಅಚ್ಚಣ್ಣಾ! ಮನೆಯವರಿಗೆಲ್ಲ ಅಚ್ಚಣ್ಣನಾದರೆ ತನಗೂ ಅಚ್ಚಣ್ಣನೆ! ನಾಚಿಕೆಯಿಂದ ಆಕೆಯ ಬಿಳಿ ಕೆನ್ನೆಗಳ ಮೇಲೆ ಬಣ್ಣ ಏರಿತು.

*   *   *   *   *

ಮಕ್ಕಳಿಗೆ ಊಟ ಬಡಿಸುತ್ತಿದ್ದರೂ ನನ್ನ ಮನಸ್ಸೆಲ್ಲ ಬೀದಿಯಲ್ಲಿನ ಶಬ್ದವನ್ನೇ ಆಲಿಸುವುದರಲ್ಲಿತ್ತು. ಸ್ವಲ್ಪ ಸದ್ದಾದರೂ ನನ್ನಿನಿಯನನ್ನು ಕರೆ ತರುತ್ತಿದ್ದ ವಾಹನದ ಶಬ್ದವೇನೋ ಎಂಬ ಭ್ರಾಂತಿಯುಂಟಾಗಿ ಮನಸ್ಸು

ಬೀದಿಯ ಕಡೆಗೇ ಓಡುತಿತ್ತು. ಹಗಲೆಲ್ಲ ಮನಸ್ಸಿಗೂ ದೇಹಕ್ಕೂ ಒಂದು ಕ್ಷಣ ವಿರಾಮ ಸಿಕ್ಕದಂತೆ ಕೆಲಸಕೊಟ್ಟು ಅವರ ಕಡೆಯೇ ಇರುತ್ತಿದ್ದ ಮನವನ್ನು ಬೇರತ್ತ ತಿರುಗಿಸುತ್ತಿದ್ದುದರಿಂದ ಇನಿಯನಿಂದ ನನಗುಂಟಾಗಿದ್ದ ಅಗಲಿಕೆಯ ಕಷ್ಟ ಅಷ್ಟು ಹೆಚ್ಚಾಗಿ ತೋರಲು ಸಾಧ್ಯವಿರಲಿಲ್ಲ. ಆದರೆ ರಾತ್ರಿ ಮಲಗಲು ನಮ್ಮ ಕೊಠಡಿಯೊಳಗೆ ಕಾಲಿಟ್ಟೊಡನೆಯೇ ಅವರಿಲ್ಲದ ಆ ಕೊಠಡಿ ಸ್ಮಶಾನದಂತೆ ತೋರುತ್ತಿತ್ತು. ಆದರೆ ಅಂದು ಕಳೆದುದರಿಂದ ಇನಿಯನನ್ನು ನೋಡುವ ಸುದಿನ ಇನ್ನೊಂದು ದಿನ ಹತ್ತಿರಕ್ಕೆ ಬಂತೆಂಬ ಸಮಾಧಾನ ತಂದು ಮನಸ್ಸನ್ನು ಬಿಗಿಹಿಡಿದು ಕಾಲ ಕಳೆಯುತ್ತಿದ್ದೆ. ಅಷ್ಟು ದಿನ ಕಳೆದ ನನಗೆ ಒಂದು ದಿನ ಹೆಚ್ಚಲ್ಲ. ಆ ದಿನದ ಒಂದೆರಡು ಗಂಟೆಗಳನ್ನು ಕಳೆಯುವುದು ನನಗೆ ಜನ್ಮಗಳನ್ನು ಕಳೆಯುತ್ತಿದ್ದಂತೆ ತೋರುತ್ತಿತ್ತು.

ಕೊನೆಗೆ ಬಂದರು ಅವರ ಕಡೆಯುವರು 'ಬಾಪ್ಪ, ಚೆನ್ನಾಗಿದ್ದೀಯ,' ಎಂತ ಕೇಳಿ ಮುಖವನ್ನು ಸ್ವಲ್ಪ ಓರೆಮಾಡಿ ಕಣ್ಣೊರಸಿಕೊಂಡರು. ಎಲ್ಲರನ್ನೂ ಒಂದು ಬಾರಿ ನೋಡಿ ಮಾತಾಡಿಸಿ, ತಾಯಿ ಎಂಬ ಅತ್ಯಂತ ಹಿರಿದಾದ ವಸ್ತುವಿಲ್ಲದುದಕ್ಕೆ ಒಂದು ನಿಟ್ಟುಸಿರುಬಿಟ್ಟು ನನ್ನನ್ನು ನೋಡಿ 'ಏನ್ರೀ, ಚೆನ್ನಾಗಿದ್ದೀರಾ' ಎಂತ ಹೇಳಿ ನಸುನಕ್ಕರು. ಓಡಿಹೋಗಿ ಅವರನ್ನು ತಬ್ಬಿಕೊಂಡು ಮುತ್ತಿಡಬೇಕೆನಿಸಿತು, ನನಗೆ. ಆದರೆ ಅಷ್ಟು ಜನರೆದುರಿಗೆ ಸಾಧ್ಯವೇ!

*  *  *  *  *

ನನ್ನ ಕೆಲಸವನ್ನೆಲ್ಲ ಪೂರೈಸಿಕೊಂಡು ನಮ್ಮ ಕೊಠಡಿಯೊಳಕ್ಕೆ ಹೋದೆ. ಅವರು ಹಾಸಿಗೆಯಮೇಲೆ ಮಲಗಿ ಕಣ್ಣು ಮುಚ್ಚಿಕೊಂಡಿದ್ದರು. ನಿದ್ದೆ ಮಾಡಿರಬಹುದೆಂದುಕೊಂಡು ನಿಶ್ಶಬ್ದವಾಗಿ ಹೋಗಿ ಎರಡು ಕಾಲುಗಳ ಮೇಲೆ ತಲೆಯಿಟ್ಟೆ. ಬಾಚಿ ತಬ್ಬಿಕೊಂಡು ನನ್ನ ಕಡೆ ನೋಡಿ ನನ್ನ ಗಲ್ಲ ಹಿಡಿದೆತ್ತಿ, 'ಮಾಲತಿ' ಎಂದೊಂದು ಬಾರಿ ಪ್ರೇಮದಿಂದ ಕೂಗಿದರು.

'ಮಲಗಿದ್ದೇನೆಂದು ಕೋಪವೇ?'

ದೇವರೆ, ನಿಮ್ಮ ಮೇಲೆ ಕೋಪವೆ!

ಆರೆಂಟು ವರ್ಷ ವೀರ ಯೋಧನಂತೆ ಹೋರಾಡಿ ದಣಿದು ವಿಶ್ರಾಂತಿಗಾಗಿ ಸಾವಿರಾರುಮೈಲು ಅವಿಶ್ರಾಂತವಾಗಿ ಪ್ರಯಾಣಮಾಡಿ ಈಗ ತಾನೇ

ಮನೆಗೆ ಬಂದು ಮಲಗಿರುವ ನಿಮ್ಮನ್ನು ಎಚ್ಚರಿಸಕೂಡದೆಂದು ಮನ ಬಂತಾದರೂ ನಿಮ್ಮನ್ನು ಸಮೀಪಿಸಿದುದರಿಂದ ಉಂಟಾದ ಆನಂದದ ಆವೇಶದಲ್ಲಿ ಅದು ಮರೆತು ಹೋದುದಕ್ಕೆ ಕ್ಷಮಿಸಬೇಕು.

* * * * *

ಈ ಕತೆಯಲ್ಲಿ ಬಂದಿರುವ ಮಾಲತಿ ನಾನೇ. ಪ್ರಥಮದಲ್ಲಿ ಕಂಡಾಗ ಯೋಧ್ಧ ಅಧಿಕಾರಿಯ ಉಡುಪಿನಲ್ಲಿದ್ದವರೇ ನನ್ನ ಪತಿ. ಇದು ನನ್ನ ಕತೆ. ನಾನೇ ಬರೆದಿದ್ದೇನೆ—ನಮ್ಮಿಂದ ಕಣ್ಮರೆಯಾಗಿರುವ ನಮ್ಮ ಅತ್ತೆಯವರ ಆತ್ಮದ ಮತ್ತು ಮಾವಂದಿರ ಕ್ಷಮೆಬೇಡಿ ನಾನು ಇಂದು ನಮ್ಮ ಮಾವಂದಿರ ಮೆಚ್ಚಿನ ಸೊಸೆ, ನನ್ನ ಮೇಲೆ ಅವರಿಗೆಕೋಪ ಬರಲಾರದು, ನಾನು ಕತೆ ಬರೆದಿರುವುದಕ್ಕೆ.

* * * * *

ನಮ್ಮ ತಂದೆ ಮಿಡಲ್‌ಸ್ಕೂಲಿನ ಬಡ ಉಪಾಧ್ಯಾಯರು ಅವರು ಉದ್ಯೋಗಕ್ಕೆ ಸೇರಿದಾಗಲೂ ಇಪ್ಪತ್ತೇ ರೂಪಾಯಿ ಸಂಬಳ. ವಿಶ್ರಾಂತಿ ಪಡೆಯುವವರೆಗೂ ಅದೇ ಸಂಬಳ! ಅವರಿಗೆ ಏಳು ಜನ ಮಕ್ಕಳು. ಹೆಣ್ಣು ನಾಲ್ಕು-ಶಾರಿ, ಸುಸಿ, ದುರ್ಗಿ, ಮಾಲತಿ ಗಂಡು ಮಕ್ಕಳ ಹೆಸರುಬೇಕಿಲ್ಲ. ಅವರಿಗೂ ಈ ಕತೆಗೂ ಸಂಬಂಧವಿಲ್ಲ.

ಶಾರಿಗೆ ವರ ಹುಡುಕುವ ಯಜ್ಞದಲ್ಲಿ ನಮ್ಮ ತಂದೆಯೇ ಯಜ್ಞಪಶು ವಾಗಲಿಲ್ಲವಷ್ಟೆ, ಬಹಳ ಕಷ್ಟಪಟ್ಟು ನಮ್ಮ ಭಾವನನ್ನು ಹುಡುಕಿದರು. ಆಕೆಗೆ ತಾಳಿಕಟ್ಟುವ ಶಾಸ್ತ್ರವಾಗುವ ಹೊತ್ತಿಗೆ ನಮ್ಮ ತಾಯಿಯ ಮೈಮೇಲಿದ್ದ, ಅವರ ತೌರುಮನೆಯಿಂದ ತಂದಿದ್ದ ಸಮಸ್ತವೂ ಹೋಗಿ, ನಮ್ಮ ತಂದೆ ಅದಕ್ಕಾಗಿ ಕೂಡಿಟ್ಟಿದ್ದ ಹಣವೂ ಖರ್ಚಾಗಿ ಹೋಗಿತ್ತು. ಸುಸಿ ಮಧುವೆ ಖರ್ಚಿಗಾದ ಸಾಲಕ್ಕೆ ನಮ್ಮ ತಂದೆಯ ಸಂಬಳ ಸಾಲಗಾರರ ಪಾಲಾಗಿ, ಮನೆಗೆ ಅಲ್ಪ ಸ್ವಲ್ಪ ಬರುತ್ತಿತ್ತು. ಮನೆಯಲ್ಲಿ ಸಂಸಾರ ಹೇಗೆ ನಡೆಯಬೇಕು! ಇನ್ನುಳಿದಿದ್ದ ಇಬ್ಬರ ಮದುವೆ ಹೇಗೆ ಪೂರೈಸಬೇಕು!

ಇದರ ಫಲವೆಂದರೆ—ಮಾರಿಗೆ ಬಲಿಕೊಟ್ಟ ಹೋತನ ಗತಿಯಂತೆಯೇ ಆದದ್ದು!

ಈ ಮೂರು ಮದುವೆಮಾಡಿ ಮಕ್ಕಳು ಉಣ್ಣುತ್ತಿರುವ ಸುಖನೋಡಿ ತಂದೆಯವರು ಬೇಸರಗೊಂಡು ನನಗೆ ತಾವಾಗಿ ಲಗ್ನ ಮಾಡುವ ಪ್ರಯತ್ನ

ಮಾಡುವುದಿಲ್ಲವೆಂತ ಪ್ರತಿಜ್ಞೆ ಮಾಡಿಬಿಟ್ಟಿದ್ದರು. ಅವರಂತಹ ಬಡವರ ಕಷ್ಟದಲ್ಲಿ ಸಹಾಯ ಮಾಡಲು ಅಶಕ್ತವಾದ ಸಮಾಜದ ಮೇಲೆ ಕೋಪ ಗೊಂಡು, ಸಹಾಯ ಮಾಡಲು ಕಿರಿಬೆರಳನ್ನು ಎತ್ತದೆ ಇದ್ದರೂ, ನಿಂದೆ ಮಾಡಲು ಹೇಸದಿದ್ದ ಹೀನರ ಕಟೋಕ್ತಿಗಳನ್ನು ಲೆಕ್ಕಿಸದೆ ಧೈರ್ಯಮಾಡಿ ಹಾಗೆಯೇ ಇದ್ದುಬಿಟ್ಟರು! ಅಷ್ಟೇ ಅಲ್ಲ; ನನಗೆ ಲಗ್ನವಾಗದಿದ್ದರೂ ಚಿಂತೆ ಯಿಲ್ಲ; ಎರಡು ಅಕ್ಷರವನ್ನಾದರೂ ಕಲಿಯಲಿ–ಎಂದು ನನ್ನನ್ನು ಓದು ಕಲಿ ಯಲು ಶಾಲೆಗೆ ಸೇರಿಸಿಯೇ ಬಿಟ್ಟರು!

ನಾನೇನೂ ಅಷ್ಟು ದಡ್ಡಿಯಾದ ವಿದ್ಯಾರ್ಥಿನಿಯಾಗಿರಲಿಲ್ಲ. ಮೇಲೆ ಬಡವಳಾದ ಕಾರಣ ಕಷ್ಟಪಟ್ಟು ಓದಿದರೆ ನನ್ನ ಓದಿನ ವೆಚ್ಚವನ್ನು ನಮ್ಮ ತಂದೆಯವರ ತಲೆಯ ಮೇಲೆ ಬೀಳದಂತೆ,ನನಗೇನಾದರೂ ವಿದ್ಯಾ ರ್ಥಿವೇತನ ದೊರೆಯಬಹುದೆಂಬ ಶ್ರದ್ಧೆಯಿಂದ ಓದುತ್ತಿದ್ದೆ. ನಾನು ಶಾಲೆ ಬಿಡುವ ವರೆಗೂ ನನಗೆ ವಿದ್ಯಾರ್ಥಿವೇತನ ಬರುತ್ತಿತ್ತು.

ನಾನಾಗಿ ವರ ಹುಡುಕುವುದಿಲ್ಲವೆಂತ ನಮ್ಮ ತಂದೆ ಹೇಳುತ್ತಿದ್ದರೂ ಹೆಣ್ಣು ಹೆತ್ತ ಪಾಪ ಮಾಡಿದ್ದುದರಿಂದ ಅಲ್ಲಲ್ಲಿ ಪ್ರಯತ್ನ ಮಾಡುತ್ತಲೇ ಇದ್ದರು. ದುರಾಶಾಪೀಡಿತರಾಗಿ ಹಣಕ್ಕಾಗಿ ಹಾತೊರೆಯುತ್ತಿರುವ ಸಮಾಜದಲ್ಲಿ, ದೊಡ್ಡವರೆಂದು ಹೆಸರುಗೊಂಡ ಅನೇಕರು ನಿರ್ಗತಿಕರ ಮಗಳಾದ ನನ್ನನ್ನು ಅವರ ಮನೆಗೆ ತಂದುಕೊಳ್ಳಲು ಒಪ್ಪಲಿಲ್ಲ. ನನ್ನ ವಿದ್ಯಾಬುದ್ಧಿಗಳೂ ರೂಪಯೌವನಗಳೂ ವರರೆಂಬ ಕುರಿಗಳ ಸಂತೆಯಲ್ಲಿ ನನಗಾಗಿ ಒಂದು ಕುರಿಯನ್ನೂ ಕೊಳ್ಳಲು ಚೈತನ್ಯವಿಲ್ಲವಾದವು! ಇನ್ನು ಕೆಲವರು ನನ್ನನ್ನು ನೋಡಿ 'ಹುಡುಗಿ ಬಲಿತಿದೆ'ಎಂದರು; ಮತ್ತೆ ಕೆಲವರು 'ಹುಡುಗಿ ಓದು ಕಲಿತಿರುವ ಈಗಿನಕಾಲದ ಯುವತಿ. ಅವಳು ಸಮಾನ ಹಕ್ಕು ಬಾಧ್ಯತೆಗಳನ್ನು ಕೇಳಿಬಿಡಬಹುದು; ನಮ್ಮ ಅಡ್ಡಿ ಆತಂಕಗಳಲ್ಲಿ ಇರಲಾರಳು' ಎಂದರು. ಇನ್ನೂ ಕೆಲವರು'ಅವಳ ಟಾಯಿಲೆಟ್‌ಗೆ ಆಗುವ ದುಡ್ಡಿನಲ್ಲಿ ಒಂದು ಸಂಸಾರ ಸಾಕಬಹುದು' ಎಂತ ಮೂದಲಿಸಿದರು.

ಇಷ್ಟು ವೇಳೆಗೆ ನಾನು ಎಡವದೆ, ಹಿಂದು ಬೀಳದೆ, ಇಂಟರ್ ಮೀಡಿಯೇಟ್ ಪರೀಕ್ಷೆಗೆ ಕಟ್ಟುವ ವರೆಗೂ ಬಂದುಬಿಟ್ಟಿದ್ದೆ. ಆದರೂ ನಮ್ಮ ತಂದೆಗೆ ನನಗಾಗಿ ಒಂದು ವರ ಕೊಳ್ಳಲು ಸಾಧ್ಯವಾಗಲೇ ಇಲ್ಲ.

ನನ್ನ ಅದೃಷ್ಟವೂ ಖುಲಾಯಿಸಿತೆಂತ ಕಾಣುತ್ತದೆ! ನಮ್ಮ ತಂದೆಗೆ

ನಮ್ಮ ಮಾವನವರ ವಿಷಯ ಹೇಗೋ ತಿಳಿದು, ಅವರ ಬಳಿಗೆ ಹೋಗ ಬೇಕಂತ ಏರ್ಪಾಡು ಮಾಡಿದರು.

ಈ ಮಧ್ಯೆ ನಮ್ಮ ಮಾವಂದಿರ ಮನೆ ವಿಚಾರ ಸ್ವಲ್ಪ ತಿಳಿದುಕೊಳ್ಳ ಬೇಕು. ನಮ್ಮ ಅತ್ತೆಮ್ಮನವರು ಮಕ್ಕಳನ್ನು ಹಡೆದು ಹಡೆದು, ಅವಕ್ಕೆ ದುಡಿದು ದುಡಿದು ತೀರ ಕಂಗಾಲಾಗಿದ್ದರು. ಈ ಮಧ್ಯೆ ಇದ್ದಕ್ಕಿದ್ದ ಹಾಗೆ ಹೃದಯ ವೇದನೆ ಸಹ ಆಗಾಗ್ಯೆ ಕಾಣಿಸಿಕೊಳ್ಳಲಾರಂಭಿಸಿತ್ತು. ನಮ್ಮ ಭಾವಂದಿರಿಗೆ ಮದುವೆಯಾಗಿದ್ದರೂ ಉದ್ಯೋಗದಲ್ಲಿ ಅವರಿದ್ದುದರಿಂದ ಅವರಾರೂ ಅತ್ತೆಮ್ಮನವರಿಗೆ ಸಹಾಯ ಮಾಡುವ ಸ್ಥಿತಿಯಲ್ಲಿರಲಿಲ್ಲ. ಮನೆಯ ಬೇರೆ ಕೆಲಸಗಳನ್ನು ನೋಡಿಕೊಂಡು ಹೋಗಲು ಬೇಕಾದಷ್ಟು ಜನ ಇದ್ದರೂ, ಊಟ ಉಪಚಾರಗಳನ್ನು ಮಾಡಿಸಲಿಕ್ಕೆ ಒಬ್ಬರಾರಾದರೂ ಇರಬೇಕಾಗುತಿತ್ತು.

ನಮ್ಮವರು ಎಂಜಿನಿಯರಿಂಗ್ ಕಾಲೇಜಿನಲ್ಲಿ ಓದಿ, ಆರ್ಮಿ ಎಂಜಿನಿಯರ್ ಆಗಿ, ವೈಸ್‌ರಾಯ್ಸ್ ಕಮಿಷನ್ ಪಡೆದು ಯುದ್ಧಕ್ಕೆ ಹೋಗಿ 2-3 ವರ್ಷವಾಗಿತ್ತು. ಯುದ್ಧ ಪೂರೈಸದೆ ಅವರು ಮದುವೆಯಾಗುವುದಿಲ್ಲವೆಂದು ಬಿಟ್ಟಿದ್ದರು. ಅವರು ಮದುವೆಮಾಡಿಕೊಳ್ಳದಿದ್ದರೆ ನನ್ನ ಮೈದುನಂದಿರಿಗೆ ಮದುವೆ ಮಾಡುವುದೇ ಇಲ್ಲವೆಂತ ನಮ್ಮ ಮಾವಂದಿರ ಹಟ. ಹಾಗಾಗಿ ಮೆತ್ತಗಾಗುತ್ತಿದ್ದವರು ನಮ್ಮ ಅತ್ತೆಮ್ಮ!

ಈ ಮಧ್ಯೆ ನಮ್ಮವರು ಎರಡು ತಿಂಗಳ ರಜದ ಮೇಲೆ ಊರಿಗೆ ಬಂದಿದ್ದರು. ಆ ಸಮಯ ನೋಡಿ ನಮ್ಮ ತಂದೆ ನಮ್ಮ ಮಾವಂದಿರ ಬಳಿಗೆ ಪ್ರಸ್ತಾಪ ಮಾಡಲು ಹೋದರು. ನನ್ನನ್ನು ನಮ್ಮ ಅತ್ತೆಮ್ಮ ನೋಡಿ ಒಪ್ಪಿಗೆ ಇತ್ತರು. ಮದುವೆ ಗೊತ್ತುಮಾಡಿ ಬಿಟ್ಟಿದ್ದೇನೆ ಎಂತ ಹೇಳದಿದ್ದರೆ ಎಲ್ಲಿ ಮಗ ಮುರಾಡ ಹಾಕಿಬಿಡುತ್ತಾನೋ ಎಂತ ಮಾವನವರು ಸಂಶಯಪಟ್ಟು, ತಂದೆತಾಯಿಯಾದ ತಾವುಗಳು ಹೆಣ್ಣು ನೋಡಿ ಒಪ್ಪಿರುವುದಾಗಿಯೂ ಆ ಹೆಣ್ಣನ್ನು ಅವರು ಒಪ್ಪಲೇ ಬೇಕೆಂದು ಹಟಹಿಡಿದರು.

ಆ ವೇಳೆಗೆ ನಮ್ಮವರು ರಾಜನನ್ನು ನೋಡಲು ಅವರ ಊರಿಗೆ ಹೋಗಿದ್ದುದರಿಂದ ನನ್ನನ್ನು ನೋಡಲೇ ಇಲ್ಲ! ನಾನೂ ಅವರನ್ನು ನೋಡಲಿಕ್ಕೆ ಆಗಲಿಲ್ಲ!

ವರದಕ್ಷಿಣೆಯನ್ನೂ ಕೇಳದೆ ನನ್ನನ್ನೂ ನೋಡದೆ ನನ್ನನ್ನು ಮದುವೆ

ಯಾಗುವವರು ಇನ್ನು ಹೇಗಿರಬೇಕೆಂದು ನನಗೆ ಹೊಳೆಯುದಾಯಿತು. ನನ್ನವರಾಗತಕ್ಕವರು ಹೇಗಿರುವರೋ ನೋಡೋಣವೆಂತ ನನಗಿದ್ದ ಆಶೆ ನಿರಾಶೆಯಾಯಿತು. ಅವರು ಹೇಗಿದ್ದಾರೆಂತ ನೋಡಿದ ಯಾರನ್ನಾದರೂ ಹೇಗೆ ಕೇಳುವುದು? ಪೂರಾಟಕ್ಕಿಡಲ್ಪಟ್ಟಿದ್ದ ಅನೇಕ ವರಗಳ ಕಡೆಯವರು ನನ್ನನ್ನು ಗಟ್ಟಿಗಿತ್ತಿ ಎಂತ ಹೇಳಿದ್ದರೂ, ನನ್ನವರಾಗತಕ್ಕವರು ಹೇಗಿರು ವರೆಂದು ನೋಡೋಣವೆಂದು ಹೇಳುವುದು ಹೋಗಲಿ, ಕೇಳಿ ತಿಳಿದು ಕೊಳ್ಳುವಷ್ಟು ಭೆಟ್ಟಿಗಳಾಗಲು ಸಹ ಸಾಧ್ಯವಿಲ್ಲದೆ ಹೋಯಿತು.

ನಮ್ಮ ಮಾವಂದಿರು ವರದಕ್ಷಿಣೆಯನ್ನು ಕೇಳದಿದ್ದರೂ ನಮ್ಮವರ ತಿಳುವಳಿಕೆಯಿಲ್ಲದೆ ಅವರ ಉಡುಪುಗಳಿಗೆಂದು ಸುಮಾರು ಮುನ್ನೂರು ರೂಪಾಯಿ ವರೆಗೂ ಕೇಳಿದ್ದರು. ನಮ್ಮ ತಂದೆಗೆ ಅಷ್ಟು ಹಣ ಒದಗಿಸಲು ಚೈತನ್ಯವಿಲ್ಲದಿದ್ದರೂ ಅದು ಉಳಿದವರು ಕೇಳಿದುವಕ್ಕಿಂತ ಕಮ್ಮಿ ಎಂಬ ಭಾವನೆಯಿಂದಲೋ ಅಥವ ವರ ಒಳ್ಳೆಯದು ಎಂಬ ಭಾವನೆಯಿಂದಲೋ ಪ್ರಯತ್ನಪಟ್ಟು ನೋಡುತ್ತೇನೆಂತ ಮಾತುಕೊಟ್ಟರು. ನಮ್ಮವರಿಗೆ ರಜ ಬಹಳ ದಿನಗಳಿಲ್ಲದುದರಿಂದ ಮದುವೆ ಬೇಗ ಆಗಬೇಕಂತ ನಿಷ್ಕರ್ಷೆಯಾಗಿ ಮಾತನಾಡಿದ ಹನ್ನೆರಡನೆ ದಿನ ಇದ್ದ ಲಗ್ನದಲ್ಲೇ ಮದುವೆಯಾಗಿ ಹೋಗ ಬೇಕೆಂದು ತೀರ್ಮಾನವಾಯಿತು.

ಈ ಮಧ್ಯೆ ನಮ್ಮ ತಂದೆಗೆ ಹಣ ಒದಗಲಿಲ್ಲ. ಅವರು ಆ ಹಣಕ್ಕೆ ಒದ್ದಾಡುವುದನ್ನು ಕಂಡು ವಿದ್ಯಾವತಿಯಾದ ನನ್ನಂಥವಳಿಗೂ ಅವರ ತೊಂದರೆಯನ್ನು ತಪ್ಪಿಸಲು ತುಂಗೆಗೆ ಹಾರಿಕೊಳ್ಳುವುದೇ ಸರಿ ಎನಿಸಿತು. ಕೊನೆಗೂ ಮದುವೆ ಇನ್ನುಒಂದು ವಾರ ಇದೆ ಎನ್ನುವ ವರೆಗೂ ಪ್ರಯತ್ನಿಸಿ ದರೂ ಒಂದು ನೂರು ರೂಪಾಯಿಗಿಂತ ಹೆಚ್ಚಿಗೆ ಸಿಗಲಿಲ್ಲ. ಸಿರ್ಗತಿಕರ ಸಮಯಕ್ಕೆ ಒದಗುವರಾರು!

ಹಣ ಒದಗದೆ ಇರುವಾಗ, ಇನ್ನು ಮದುವೆ ಏರ್ಪಾಟು ಹೇಗೆ ನಡೆ ದೀತು! ಲಗ್ನಪತ್ರಿಕೆ ಸಹ ಅಚ್ಚು ಹಾಕಿಸಿರಲಿಲ್ಲ! ಲಗ್ನಕ್ಕೆ ಯಾರನ್ನು ಕರೆಯುವುದು, ಯಾರನ್ನು ಬಿಡುವುದು—ಗೊತ್ತಾಗಲಿಲ್ಲ. ಆದರೆ ಲಗ್ನ ಗೊತ್ತಾಗಿದೆ, ಇಂಥಾ ತಾರೀಖು ಎಂತ ನಮ್ಮವರಿಗೆಲ್ಲ ತಿಳಿದಿದೆ! ಅಂಥಾದ್ದು ಲಗ್ನ ನಿಂತು ಹೋದರೆ! ನಮ್ಮ ತಂದೆಗೆ ಮಾನ ಹೋಗುವ ಪ್ರಸಂಗವೇ ಬಂದುಬಿಟ್ಟಿತು.

ಬೇರೆ ಉಪಾಯ ಕಾಣದೆ ನಮ್ಮ ತಂದೆ ಬಹಳ ಖಿನ್ನರಾಗಿ ನನ್ನ ಮಾವಂದಿರ ಬಳಿಗೆ ಹೋಗಿ ನೂರು ರೂಪಾಯಿ ಮಾತ್ರ ಒದಗಿದೆಯೆಂದೂ ಅದನ್ನು ದಯವಿಟ್ಟು ತೆಗೆದುಕೊಂಡು ತನ್ನನ್ನುದ್ಧಾರ ಮಾಡಬೇಕೆಂದೂ ಕೇಳಿಕೊಂಡರು.

ನಮ್ಮ ಮಾವಂದಿರು ಹೆಚ್ಚಿಗೆ ಅವರ ಸಂಗಡ ಮಾತನಾಡದೆ, ತಮ್ಮ ಅಸಮಾಧಾನವನ್ನು ಸೂಚಿಸಿ, ಹಣ ತೆಗೆದುಕೊಳ್ಳದೆ, ಮಾರನೆಯ ಬೆಳಿಗ್ಗೆ ತಮ್ಮ ಮಗನನ್ನು ನಮ್ಮ ಮನೆಗೆ ಕಳುಹಿಸುವುದಾಗಿಯೂ, ಆ ಹಣವನ್ನು ಅವರ ಕೈಯಲ್ಲಿ 'ಕೊಡಬೇಕೆಂಬುದಾಗಿಯೂ ಹೇಳಿ ಕಳುಹಿಸಿದರು.

ಅವರು ಅತ್ತ ಹೋದ ಮೇಲೆ, ಅಳಿಯನ ಬಟ್ಟೆಬರೆಗಳಿಗಾಗಿ ಮುನ್ನೂರು ರೂಪಾಯನ್ನೂ ಕೊಡಲಾಗದವರ ಸಂಬಂಧ ಸರಿಯಾದುದಲ್ಲವೆಂದೂ, ನಮ್ಮ ಅತ್ತೆ ಮಾವಂದಿರು ಮಾತನಾಡಿಕೊಂಡು ಮದುವೆ ನಿಲ್ಲಿಸಿಬಿಡಬೇಕೆಂದೂ ನಿಶ್ಚಯಮಾಡಿಕೊಂಡರು. ಮಗನಿಗೆ ಮಾವನ ಮನೆಗೆ ಹೋಗೆಂದೂ ಹೇಳಲಿಲ್ಲ. ಮದುವೆ ನಿಲ್ಲಿಸಿ ಬಿಡಬೇಕೆಂದೂ ಹೇಳಲಿಲ್ಲ. ಮದುವೆಗೆ ಯಾವ ಏರ್ಪಾಡೂ ಮಾಡದೆ ಸುಮ್ಮನೆ ಇದ್ದುಬಿಟ್ಟರು. ಮದುವೆಗೆ ಯಾವ ಏರ್ಪಾಡೂ ಆಗದ ಇರುವುದರಿಂದ ಯಾವುದೋ ನಿಮಿತ್ತ ಮದುವೆ ನಿಂತುಹೋಗಿದೆಯೆಂತ ಮಗ ಊಹಿಸಿಕೊಳ್ಳುತ್ತಾನೆಂತ ಎಲ್ಲರೂ ತಟಸ್ಥರಾಗಿರುವುದು, ನಮ್ಮವರಿಗೆ ಸರಿಹೋಗಲಿಲ್ಲ. ಇನ್ನು ಹೆಚ್ಚು ತಡೆಯಲಾರದೆ ಅವರೇ ಹೋಗಿ ಅತ್ತೆಮ್ಮನವರಲ್ಲಿ ಪ್ರಸ್ತಾಪಿಸಲಾಗಿ ಆ ಮದುವೆ ಅವರಿಗೆ ಇಷ್ಟವಿಲ್ಲವೆಂತಲೂ, ಆ ಮಾತು ಬಿಟ್ಟು ಬೇರೆ ಮಾತು ಆಡಬೇಕೆಂತಲೂ ಅತ್ತೆಮ್ಮನವರು ಹಟಹಿಡಿದರು.

ಮದುವೆ ಏತಕ್ಕೆ ನಿಲ್ಲಬೇಕೆಂತ ನಮ್ಮವರಿಗೆ ಗೊತ್ತಾಗದೆ ಹೋಯಿತು. ಬಹಳವಾಗಿ ಕೇಳಲಾಗಿ, ಅಳಿಯಂದಿರ ಬಟ್ಟೆಬರೆಯ ಖರ್ಚಿಗಾಗಿ ಮುನ್ನೂರು ರೂಪಾಯಿ ಕೇಳಿದ್ದಂತೆಯೂ, ಅದನ್ನು ಕೊಡಲು ಚೈತನ್ಯವಿಲ್ಲದಿರುವವರ ಸಂಬಂಧ ತಮ್ಮ ಯೋಗ್ಯತೆಗೆ ತೀರ ಕಡಿಮೆ ಎಂದೂ ಹೇಳಿದರು.

ಮಾತು ಕೊಟ್ಟ ಮೇಲೆ ಆಗುವುದಿಲ್ಲವೆಂತ ಹಟ ಹಿಡಿದರೆ, ಅದು ತಮ್ಮ ಯೋಗ್ಯತೆಗೆ ಕಮ್ಮಿಯಲ್ಲವೋ ಎಂತ ಅವರು ಹೇಳಿದ ಮಾತು, ನಮ್ಮ ಅತ್ತೆಮಾವಂದಿರ ಕಿವಿಗೆ ಇಂಪಾಗಿರಲಿಲ್ಲ. ಮದುವೆ ಕೊಡದೆಂತ

ಅವರು ಹಿಡಿದ ಹಟವೇ ಹೆಚ್ಚಾಯಿತು.

ಕೊನೆಗೆ ನಮ್ಮವರಿಗೆ ಬೇಸರವಾಗಿ, ಮಾತು ಕೊಟ್ಟ ಮೇಲೆ ಹಿಂದೆ ಹೋಗುವುದು ಸಾಧ್ಯವಿಲ್ಲವೆಂತಲೂ, ಕೊಟ್ಟ ಮಾತನ್ನು ನಡೆಸಿಕೊಡುವುದು ಧರ್ಮವೆಂತಲೂ, ನಾಲ್ಕಾರು ಹೆಣ್ಣು ಹೆತ್ತ ಅವರೇ ಹಾಗೆ ಮಾಡುವುದು ಅನುಚಿತವೆಂತಲೂ, ತಮಗೇ ಯಾರಾದರೂ ಆ ರೀತಿ ಮಾಡಿದ್ದರೆ ತಮ್ಮ ಸ್ಥಿತಿ ಹೇಗಿರುತ್ತಿತ್ತೆಂತ ಅವರು ಆಲೋಚಿಸುವುದು ಒಳ್ಳೆಯದೆಂತಲೂ ಒತ್ತಿ ಹೇಳಿದರು.

ತಮ್ಮ ಮಗನಿಂದ ತಾವು ಉಪದೇಶ ಕೇಳಬೇಕಾಯಿತಲ್ಲ ಎಂತ ಅವರಿಗೆ ಆಕ್ರೋಶ ಹೆಚ್ಚಾಯಿತು; ತಿಳುವಳಿಕೆ ಬರಲಿಲ್ಲ. ಮದುವೆಮಾಡಿಕೊಳ್ಳಬೇಕೆಂದಿರುವವರಿಗೆ ಸುಖವಾಗಿರು ಎನ್ನುವುದನ್ನು ಬಿಟ್ಟು, "ನೀನು ನಮ್ಮನೆಯಲ್ಲಿರಬೇಡ, ಹೊರಟುಹೋಗು, ನಮಗೂ ನಿನಗೂ ಸಂಬಂಧವಿಲ್ಲ; ಯುದ್ಧದಲ್ಲಿ ನಮ್ಮ ಮಗನೊಬ್ಬ ಬಲಿಯಾದನೆಂತ ನಾವು ತಿಳಿದುಕೊಳ್ಳುತ್ತೇವೆ; ಮದುವೆಯಾಗುವ ಮೊದಲೇನೆ ಹುಡುಗಿಯ ಮಾತಿಗೆ ಹೀಗೆ ಜೋಲುಬಿದ್ದರೆ (ಪಾಪ! ಗಂಡಹೆಂಡಿರಾಗತಕ್ಕವರು ಒಬ್ಬರನ್ನೊಬ್ಬರು ನೋಡಿಯೇ ಇರಲಿಲ್ಲವೆಂಬುದನ್ನೂ ಸಹ ಅವರು ಮರೆತು ಬಿಟ್ಟಿರಬೇಕಿತ್ತು!) ಮದುವೆಯಾದ ಮೇಲೆ ಕೈತುಂಬ ಸಂಬಳ ತರುವ ನೀನು ನಮ್ಮನ್ನು ಲಕ್ಷ್ಯಮಾಡುತ್ತೀಯಾ, ಹೊತ್ತು ಹೊತ್ತು ಸಲಹಿ ಸಾಕಿದ ನಮಗಿಂತ ಒಬ್ಬ ಹೆಂಗಸು,ಆಕೆಯ ಮೂಲಕ ಸಂಬಂಧವಾಗುವ ಜನವೇ ನಿನಗೆ ಹೆಚ್ಚಾಯಿತೋ" ಎಂತ ಇನ್ನೂ ಹೇಳಕೇಳಲಾರದಷ್ಟು ಮಾತುಗಳನ್ನು ಅತ್ತೆ ಮಾವಂದಿರು ಆಡಿಬಿಟ್ಟರು.

ನಮ್ಮವರು ಕೋಪಗೊಳ್ಳಲಿಲ್ಲ. ಅದಕ್ಕೆ ಉತ್ತರವಾಗಿ—ಅವರು ನನ್ನನ್ನೇ ಮದುವೆಯಾಗುವುದಾಗಿಯೂ,ಇಲ್ಲದಿದ್ದರೆ ತಾವು ಮದುವೆಯೇ ಆಗುವುದಿಲ್ಲವೆಂತಲೂ ತಾನು ಮಗನಲ್ಲವೆಂತ ಅವರು ಹೇಳಿದರೂ ಅದು ಯಥಾರ್ಥವಲ್ಲವೆಂತಲೂ ಹೇಳಿ ಮದುವೆಗೆ ಏರ್ಪಾಟು ಮಾಡಿಕೊಳ್ಳಬೇಕೆಂತ ಹೆಣ್ಣಿನ ಕಡೆಯವರಿಗೆ ಹೇಳಿಬಿಟ್ಟು ಬರುತ್ತೇನೆಂದು ಹೇಳಿ ಹೊರಟೇಬಿಟ್ಟರು!

* * * * *

ನನ್ನ ಮದುವೆ ನಡೆದರೆ ಇನ್ನು ನಾಲ್ಕು ದಿನಕ್ಕೆ ನಡೆದುಹೋಗು

ಬೇಕು; ಆದರೆ ಇನ್ನೂ ವರ್ತಮಾನವಿಲ್ಲ! ಮೂರನೆಯ ದಿನ ಬರುತ್ತಾರೆಂತ ಹೇಳಿದವರು ಮೂರನೆಯ ದಿನವಾಗಿದ್ದರೂ ಬಂದೇ ಇರಲಿಲ್ಲ! ನನ್ನ ಮತ್ತು ನನ್ನ ತಂದೆ ತಾಯಿಗಳ ಮನಸ್ಸಿನ ಸ್ಥಿತಿ ದೇವರಿಗೇ ವೇದ್ಯ.

ಇದೇ ವಿಷಯ ಕುರಿತು ಆಲೋಚಿಸುತ್ತಿದ್ದೆ. ತಂದೆಯವರು ದೇವರ ಪೂಜೆ ಮಾಡುತ್ತಿದ್ದರು. ಮನೆ ಹುಡುಗರು ಯಾರೂ ಇರಲಿಲ್ಲ. ಆಗ ಆಚೆ ಯಾರೋ ಕೂಗಿದ ಹಾಗಾಯಿತು. ಹೊರಗೆ ಹೋಗಿ ನೋಡಿದರೆ-ಬಿಳಿ ಷರಾಯಿ, ಬಿಳಿಯ ಬುಷ್‌ಕೋಟ್ ಹಾಕಿಕೊಂಡು, ಆ ದಿನ ವರದಕ್ಷಿಣೆ ವಿಷಯ ಮಾತನಾಡುತ್ತಿದ್ದವರ ಪೈಕಿ ಮಿಲಿಟರಿ ಉಡುಪಿನಲ್ಲಿದ್ದವರು ನಿಂತಿದ್ದಾರೆ!

'ಒಳಗೆ ಬನ್ನಿ; ದೇವರ ಪೂಜೆ ಮಾಡುತ್ತಿದ್ದಾರೆ, ಬರುತ್ತಾರೆ' ಎಂದೆ. ಅವರು ಒಳಗೆ ಬರಲಿಲ್ಲ. ರಸ್ತೆಯಲ್ಲೇ ಅಡ್ಡಾಡುತ್ತಿದ್ದರು. ಬಿಸಿಲಿನಲ್ಲಿ ಅವರು ಶತಪಥ ತುಳಿಯುತ್ತಿದ್ದುದನ್ನೂ ನೋಡಲಾರದೆ 'ಯಾರು ಎಂತ ಹೇಳಲಿ?' ಎಂತ ಕೇಳಿದೆ.

ತಮ್ಮ ಹೆಸರು ಹೇಳಿದರು. ಒಡನೆ ನನ್ನ ಪೆಚ್ಚು ಕೆಲಸ ನನಗೆ ಅರ್ಥವಾಯಿತು. ಅವರು ಯಾರೆಂತ ಊಹಿಸಲಾರದೆ ಹೋದೆನಲ್ಲ ಎಂತ ಅವಮಾನವಾಯಿತು. ಅವರನ್ನು ಸರಿಯಾಗಿ ಸಹ ನೋಡದೆ ಒಳಗೆ ಹೋಗಿಬಿಟ್ಟವಳು ಮತ್ತೆ ಈಚೆ ತಲೆಯನ್ನೇ ಹಾಕಲಿಲ್ಲ.

* * * * *

ನಮ್ಮ ತಂದೆ ಆತುರ ಆತುರವಾಗಿ ದೇವರ ಪೂಜೆ ಮಾಡಿ, ಓಡಿ ಹೋದರು. ಹಣ ಒದಗಲಿಲ್ಲವೆಂತ ಬಹಳ ದೈನ್ಯವಾಗಿ ಹೇಳಿ, ಎಷ್ಟು ಪ್ರಯತ್ನಪಟ್ಟರೂ ಒಂದು ನೂರು ರೂಪಾಯಿಗಿಂತ ಹೆಚ್ಚು ಸಿಗಲಿಲ್ಲ ವೆಂದೂ, ಅಷ್ಟನ್ನು ತೆಗೆದುಕೊಂಡು ತಮ್ಮ ಮಗಳ ಕೈ ಹಿಡಿದು ತಮ್ಮನ್ನು ದ್ಧಾರಮಾಡಬೇಕೆಂದು, ಆರು ಅಡಿಯಷ್ಟರ ಆತ್ಮವನ್ನು ಅಣುವಷ್ಟಕ್ಕೆ ಇಳಿಸಿ ಪ್ರಾರ್ಥಿಸಿಕೊಂಡರು. ಅವರು ಕಾಲು ಹಿಡಿದು ಹೇಳಿಕೊಳ್ಳಲಿಲ್ಲ ವಾದರೂ ಮಾತಿನಲ್ಲಿ ಇನ್ನೂ ದೈನ್ಯತೆಯಿತ್ತು.

ಮರೆಯಲ್ಲಿ ನಿಂತು ನಮ್ಮ ತಂದೆಯ ಮಾತನ್ನು ಕೇಳುತ್ತಿದ್ದ ನನ್ನ ಸ್ಥಿತಿಯನ್ನು ನಾನು ವರ್ಣಿಸಲು ಸಾಧ್ಯವಿಲ್ಲ. ನಮ್ಮನ್ನು ಈ ಸ್ಥಿತಿಗೆ ತಂದಿ ರುವ, ನಮ್ಮಿಂದ, ನಮಗಾಗಿ ಸೃಷ್ಟಿಸಲ್ಪಟ್ಟಿರುವ, ನಮ್ಮ ಸಮಾಜದ

ಮೇಲೂ, ನನ್ನನ್ನು ಸರಿಯಾದ ಸ್ಥಿತಿಯಲ್ಲಿಡಲು ಚೈತನ್ಯವಿಲ್ಲದಿದ್ದರೂ ನನ್ನನ್ನು ಹುಟ್ಟಿಸಿದ ನಮ್ಮ ತಂದೆತಾಯಿಗಳ ಮೇಲೂ, ಹೆಣ್ಣಾಗಿ ಹುಟ್ಟಿದುದರಿಂದಲೇ ಅಪರಾಧವಾದ ನನ್ನಮೇಲೂ, ಎಲ್ಲಕ್ಕಿಂತಹೆಚ್ಚಾಗಿ ಕಾಣದ ಕರ್ಮದ ಫಲವನ್ನನುಭವಿಸಿ ತೊಳಲುವಂತೆ ಮಾಡುತ್ತಿದ್ದ ಪರಮಾತ್ಮನ ಮೇಲೂ ಏಕಕಾಲದಲ್ಲಿ ಕೋಪಬಂತು.

ಕೋಪದ ಜೊತೆಗೆ ಅವರು ಏನು ಉತ್ತರ ಕೊಡುತ್ತಾರೋ ಎಂತ ಜೀವ ತಲ್ಲಣಿಸುತ್ತಿತ್ತು. ಯಾರಾದರೂ ಸ್ವಲ್ಪ ಗಮನಿಸಿದ್ದರೂ ನನ್ನ ಎದೆಯ ಬಡಿತ ಅವರಿಗೆ ಕೇಳಬಹುದಿತ್ತು.

ನಮ್ಮವರು ಹೇಳಿದುದರ ಸಾರಾಂಶವಿಷ್ಟು-"ಯಾಕೆ ಹಣ? ಅದನ್ನು ಕೇಳಿದವರ್ಯಾರು? ಅದು ನನಗೆ ಬೇಕಿಲ್ಲ. ತಮ್ಮ ಖರ್ಚಿಗೇ ಅದನ್ನಿಟ್ಟು ಕೊಳ್ಳಿ. ಅದನ್ನು ತಮಗೆ ಕೊಟ್ಟವರು ನನ್ನ ಮುಖ ನೋಡಿ ತಮಗೆ ಕೊಟ್ಟೆವೆಂದು ಹೇಳುತ್ತಾರೆ. ಅದರಿಂದ ನನಗೆ ಉಪಯೋಗವಿಲ್ಲ. ಸಂತೆಯಲ್ಲಿ ಕೊಳ್ಳುವ ದಿನಸು ನಾನಲ್ಲ ಆದರೂ ನನ್ನ ಬೆಲೆ ಅಷ್ಟು ಅಲ್ಪವಾಗಲಾರದು. ಹಣ ಸಂಪಾದಿಸುವ ಯೋಗ್ಯತೆ ನನಗಿರುವಾಗ ನಾನು ಇತರರಿಗೆ ಕೊಡಬೇಕು ಅವರಿಂದ ಅದರಲ್ಲೂ ಕೊಡಲಾಗದವರಿಂದ ತೆಗೆದು ಕೊಳ್ಳುವುದು ಧರ್ಮವಲ್ಲ. ನೀವು ಕೊಟ್ಟ ಹಣದಿಂದ ನಾನು ಜೀವಿಸುವುದಾದರೆ ನಿಮ್ಮ ಮಗಳನ್ನು ನಾನು ಹೇಗ ಸಾಕಬಲ್ಲೆ! ಸಾಕಲು ಯೋಗ್ಯತೆ ಇಲ್ಲದಿದ್ದಲ್ಲಿ ಆಕೆಯನ್ನು ಮದುವೆಯಾಗುವುದು ಸೂಕ್ತವೇ?"

ಇನ್ನೂ ಏನೇನೋ

ಓಡಿಹೋಗಿ ಅವರ ಕಾಲಿಗೆ ಬಿದ್ದು, ಅವರಿಗೆ ನನ್ನ ಕೃತಜ್ಞತೆಯನ್ನು ಸೂಚಿಸಬೇಕೆನಿಸಿತು, ನನಗೆ. ಮಾತಿನಲ್ಲೂ ಹೇಳಲು ಸಾಧ್ಯವಿಲ್ಲದಿರುವಾಗ ಅವರ ಕಾಲಿಗೆ ಬೀಳಲು ಸಾಧ್ಯವೇ? ಮನಸ್ಸಿನಲ್ಲೇ ಅವರನ್ನು ನಮಸ್ಕರಿಸಿದೆ.

ಆಗಲೇ ಅವರೇ ನನ್ನ ದೇವರು ಎಂದೆನಿಸಿತು. ಕನ್ನೆಯನ್ನು ಅವರು ಒಪ್ಪಿದ್ದಾರೆ. ಆಕೆಯ ವಿಷಯದಲ್ಲಿ ಅವರದೇನೂ ಆಕ್ಷೇಪಣೆಯಿಲ್ಲ. ನಿಮ್ಮ ಮೇಲೂ ಇಲ್ಲ. ಆ ಕನ್ಯೆಯನ್ನು ಹೆತ್ತ ಕೇವಲ ಬಡವರಾದ ನೀವು ಹಣ ಕೊಡಲು ಅಶಕ್ತರಾಗಿರುವುದೇ ತಪ್ಪಾಗಿದೆ. ನಿಮ್ಮ ಬಡತನದ ಮೇಲೆ ಅವರ ಕೋಪ; ಲೋಕಕ್ಕೇ ಸಹಜವಾಗಿರುವಂತೆ! ಅವರನ್ನು ನಾನು

ಸಮಾಧಾನ ಗೊಳಿಸುತ್ತೇನೆ. ಲಗ್ನಕ್ಕೆ ಕರೆದು ತರುತ್ತೇನೆ. ದೇವಸ್ಥಾನದಲ್ಲಿ ಒಂದು ದಿನದ ಲಗ್ನವಾಗಲಿ. ಏನೇ ಆಗಲಿ, ಲಗ್ನಮಾಡಿ ಕೊಡಲು ನೀವು ಸಿದ್ಧರಾಗಿದ್ದರೆ ಮಾಡಿಕೊಳ್ಳಲು ನಾನೂ ಸಿದ್ಧ. ನನ್ನ ತಂದೆ ತಾಯಿಗಳು ಒಪ್ಪಿದ ಕನ್ಯೆ ನನಗೂ ಒಪ್ಪಿಗೆಯೆ. ಆದರೆ ಕನ್ಯೆಯ ಇಚ್ಛೆಗೆ ವಿರುದ್ಧವಾಗಿ ನಾನು ಮದುವೆಯಾಗುವವನಲ್ಲ. ಅಷ್ಟು ಮಾತ್ರ ತಿಳಿಯಿರಿ.

'ಈ ಮದುವೆಗೆ ನಮ್ಮ ತಂದೆ ತಾಯಿಗಳು ಅಸಮ್ಮತಿಪಟ್ಟಿರುವುದರಿಂದ ಅವರೇನೂ ನನಗೆ ಧನಸಹಾಯಮಾಡಲಾರರು. ಅವರನ್ನು ನಾನು ಕೇಳುವುದೂ ಇಲ್ಲ. ನನ್ನ ಬಳಿ ೪೦ ರೂಪಾಯಿ ಇವೆ ನನಗೆ ಬೇಕಾದುದನ್ನು ಅದರಲ್ಲಿ ನಾನು ತಂದುಕೊಳ್ಳುತ್ತೇನೆ. ನನಗಾಗಿ ನೀವು ಏನೂ ತರಬೇಡಿ. ನಿಮ್ಮ ವೆಚ್ಚವೂ ನನ್ನ ವೆಚ್ಚದ ಮಟ್ಟವನ್ನು ಮೀರಿ ಹೋಗದಿರಲಿ.

'ನನಗೆ ಹೆಚ್ಚು ದಿನಗಳ ರಜ ಇಲ್ಲ. ರಜ ಇದ್ದು, ಮದುವೆ ಇನ್ನೂ ತುಸು ದೂರ ಇದ್ದಿದ್ದರೆ ಏನಾದರೂ ಮಾಡಬಹುದಾಗಿತ್ತು. ಈಗ ಎಲ್ಲೂ ಹೋಗಿ ಬರಲು ಸಾಧ್ಯವಿಲ್ಲ. ನಾನು ಯೋಧನಲ್ಲದಿದ್ದರೂ ಮೃತ್ಯುವಿನ ಬಾಯಲ್ಲೇ ಇರುವವನು. ನನಗೆ ತಮ್ಮ ಮಗಳನ್ನು ಕೊಡಬೇಕೆಂದು ಮುಂದೆ ಬಂದಿರುತ್ತೀರಿ. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯ ಮುಖ್ಯ. ನಿಮ್ಮ ಮತ್ತು ನಿಮ್ಮ ಮಗಳ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿದುಕೊಳ್ಳದೆ ಆತುರದಲ್ಲಿ ಲಗ್ನವಾಗಿ, ಏನಾದರೂ ಹೆಚ್ಚುಕಡಿಮೆ ಆದಲ್ಲಿ ಜೀವವಿರುವ ವರೆಗೆ ನೀವೂ ಅವಳೂ ಚಿಂತಿಸುವುದು ಯುಕ್ತವಲ್ಲ........'

* * * * *

ಇಂತಹರನ್ನು ಮದುವೆಯಾಗಿ ಇವರೊಡನೆ ಎರಡು ದಿನ ಮಾತ್ರವೇ ಜೀವನದ ಸುಖವನ್ನು ಅನುಭವಿಸಿದರೂ ಸಾಕು. ಒಂದು ದಿನ ಬೆಳಗಿ ದೇವರಿಗೆ ಅರ್ಪಿತವಾಗಿ ಒಣಗಿ ಹೋಗುವ ಹೂವಿನ ಬಾಳು ವ್ಯರ್ಥವೆ! ಇವರಿಗೆ ಈ ದೇಹ ಮೀಸಲಾಗಲಿ. ಎರಡು ದಿನದ ಸೇವೆಯಿಂದ ಸುಖಿಸಲಿ. ಆ ಮೇಲೆ ದೇಹ ಹೋಗಲಿ.

ಸಾಧ್ಯವಾದರೆ ಅವರ ಆತ್ಮ, ನನ್ನ ಆತ್ಮ ಪುನಃ ಸೇರಲಿ, ಎಂದೆನಿಸಿತು ನನಗೆ.

* * * * *

ನಮ್ಮ ತಂದೆ ಒಳಗೆ ಬಂದು ನನ್ನನ್ನು ನೋಡಿದರು. ನಾನು ಮಾ ನಾಡಲಿಲ್ಲ. "ಹುಟ್ಟು ಸಾವು ದೇವರಿಚ್ಛೆಯಲ್ಲವೇ?" ಎಂದೆ. ನಮ್ಮ ತಂ ಆಚೆ ಹೋಗಿ 'ಹುಡುಗಿಯೂ ಸಮ್ಮತಿಸಿದ್ದಾಳೆ. ಇದರ ಮೇಲೆ ಭಗವಂತ ಇಚ್ಛೆ ಇದ್ದಂತಾಗಲಿ' ಎಂದರು.

* * * * *

ನಮ್ಮವರು ಮನೆಗೆ ಹೊರಟು ಹೋದರು. ನಮ್ಮ ತಂದೆ ಆ ಪೇಟೆಗೆ ಹೋಗಿ ಮಾಂಗಲ್ಯ ಮಾಡಲು ಹಾಕಿ, ಸಾಧಾರಣವಾದ ಒಂ ಸೀರೆ ಮತ್ತು ಇತರ ವಸ್ತುಗಳನ್ನು ತಂದರು.

ನಮ್ಮವರು ಮನೆಗೆ ಹೋಗುತ್ತಾ ದಾರಿಯಲ್ಲಿ ರಾಜುವಿಗೆ ತಂತಿ ಮೂಲಕ ಎಲ್ಲ ವಿಷಯಗಳನ್ನೂ ತಿಳಿಸಿ, ಮನೆ ಸೇರಿ ಕೊಠಡಿಯನ ಹೊಕ್ಕುಬಿಟ್ಟರು.

ಮಗನ ಮೇಲೆ ತಂದೆಗೆ ಪೂರಾ ಆಕ್ರೋಶ. ಮಗನನ್ನು ಮಾ ನಾಡಿಸಲಿಲ್ಲ. ಊಟಕ್ಕೆ ಸಹ ಕರೆಯಲಿಲ್ಲ. ತಮ್ಮ ಪಾಡಿಗೆ ತಾವು ಊ ಮಾಡಿ ಮನೆ ಬಿಟ್ಟು ಹೊರಟುಹೋದರು.

ಅವರನ್ನು ಊಟಕ್ಕೆ ಕರೆಯಲು ಅತ್ತೆಮ್ಮನವರಿಗೆ ಭಯ! ಮಗ ಮೇಲೆ ಎಷ್ಟೇ ಕೋಪವಿದ್ದರೂ ಮಗ ಊಟ ಮಾಡದಿದ್ದರೆ ತಾಂ ಮಾಡುವಳೇ? ಆ ದಿನ ಮಗನೂ ಉಪವಾಸ, ತಾಯಿಯೂ ಉಪವಾ ವಾಯಿತು. ಮಾರನೆಯ ದಿನವೂ ಕಳೆಯಿತು. ಮೂರನೆಯ ದಿನ ಅತ್ತೆವ ಹಾಸಿಗೆ ಬಿಟ್ಟು ಏಳಲಿಕ್ಕೇ ಆಗಲಿಲ್ಲ. ಆಗ ಮಾವನವರಿಗೆ ಈ ವಿಚಾ ತಿಳಿಯಿತು. ಅವರು ಇನ್ನೂ ಹೆಚ್ಚು ಕೂಗಾಡಿದರು. "ನಿಮ್ಮ ತಾಯಿ ಸತ ಹೋಗಬೇಕಂತ ನಿನ್ನ ಇಷ್ಟವಾದರೂ, ನನ್ನ ಹೆಂಡತಿ ಬದುಕಿರಬೇಕಂ ನನಗೆ ಆಶೆ ಇದೆ. ಅದಕ್ಕಾದರೂ ಪಿಂಡ ತಿನ್ನು" ಎಂದರು

ಅವರಿಗೆ ಆ ಮಾತು ಕೇಳಲಿಕ್ಕಾಗಲಿಲ್ಲ. ಆದರೂ ಅವರು ತು ಎರಡು ಮಾಡಲಿಲ್ಲ.

ಮೂರನೆಯ ದಿನವೂ ತಂದೆ ಮಗನನ್ನು ಊಟಕ್ಕೆ ಕರೆಯಲಿ ಆ ದಿನ ರಾಜ ಕಾರಿನಲ್ಲಿ ಬಂದರು. ಅವರು ಈ ವಿಷಯವೆಲ್ಲ ಕೇ 'ಅವರಿಗೂ' ಬೈದು, ಅತ್ತೆಮ್ಮನವರನ್ನೂ ದಂಡಿಸಿ, ಇಬ್ಬರನ್ನೂ ಊಟ ಪ್ಪಿಸಿದರು. ಯಾರೂ ಏಳಲಿಲ್ಲ. ಆಗ ರಾಜ ಕೋಪಗೊಂಡು "ತಾ

ಮಗ ಜಗಳವಾಡೋ ಮನೆ ಮನೆಯಲ್ಲ; ನಾನೂ ಊಟ ಮಾಡೋದಿಲ್ಲ” ಎಂತ ಬಟ್ಟೆ ಹಾಕಿಕೊಂಡು ಕಾರು ತೆಗೆದುಕೊಂಡು ಹೊರಟು ಬಿಡುವುದರಲ್ಲಿದ್ದರು. ಅವರು ಮಾತನಾಡಲಿಲ್ಲ. ಅತ್ತೆಮ್ಮನವರು ‘ನನ್ನ ಮಗ ಊಟ ಮಾಡದಿದ್ದರೆ ಚಿಂತೆಯಿಲ್ಲ. ಅವನಿಗಿಂತ ನೀನು ಊಟಮಾಡದೆ ಹೋದರೆ ನನ್ನಾಣೆ’ ಎಂದರು. ಆಗ ರಾಜ, ನೀವು ಊಟಮಾಡದಿದ್ದರೆ ನನ್ನಾಣೆ ಎಂದರು.

ಆಗ ವಿಧಿ ಇಲ್ಲದೆ ಮೂವರೂ ಊಟಮಾಡಬೇಕಾಯಿತು. ತಾಯಿ ಮಗನಿಗಿದ್ದ ಭೇದ ಭಾವ ಕುಂಬಳಕಾಯಷ್ಟರಲ್ಲಿ ಸಾಸವೆಯಷ್ಟು ಕಡಿಮೆಯಾಗಲಿಲ್ಲವೆನ್ನಬಹುದು.

ನ್ಯಾಯವಾಗಿ-ಅಂದು ದೇವರ ಸಮಾರಾಧನೆ ನಡೆಯಬೇಕಾಗಿತ್ತು!

ರಾಜ ಊಟಮಾಡಿ ಹೊರಟುಹೋದರು. ಊಟವಾದ ಮೇಲೆ ತಾಯಿಯೇ ಮಗನನ್ನು ಕರೆದು, ಮದುವೆ ನಾಳೆ, ಚಪ್ಪರ ಹಾಕದಿದ್ದರೆ ನಮಗೆ ಮರ್ಯಾದೆ ಇಲ್ಲ. ಚಪ್ಪರ ಹಾಕಿಸು ಎಂತ ಮದುಮಗನಿಗೇ ಹೇಳಿದರು. ಮದುಮಗ ಮನೆಯಿಲ್ಲಿದ್ದ ಚಾಪೆಗಳನ್ನೂ ಎದುರು ಮನೆಯ ಮಾವಿನ ಮರದಲ್ಲಿದ್ದ ಸೊಪ್ಪನ್ನೂ ಉಪಯೋಗಿಸಿ, ತಮ್ಮ ಮದುವೆಗೋಸ್ಕರ ತಾವೇ ಚಪ್ಪರ ಹಾಕಿದರು.

* * * * *

ಮದುವೆ ಹಿಂದಿನ ದಿನ ಸಾಯಂಕಾಲ, ತಂದೆಯವರು ಮನೆಯಲ್ಲಿರಲಿಲ್ಲ. ಮನೆಯ ಮುಂದೆ ಕಾರು ನಿಂತ ಹಾಗಾಯಿತು. ಈಚೆ ಬಂದು ನೋಡುತ್ತೇನೆ. ಮೊದಲನೆಯ ದಿನ ಚಂಡಿ ಬಟ್ಟೆಯುಟ್ಟು ಅವರೊಡನೆ ಮಾತನಾಡುತ್ತಿದ್ದರಲ್ಲ, ಅವರು! ವಾಹನ ಇಳಿದು ಒಳಗೆ ಬಂದೇ ಬಿಟ್ಟರು. ನಿಶ್ಶಬ್ದವಾಗಿ ಅವರ ಜೊತೆಯಲ್ಲಿ ಬಂದಿದ್ದಾತ ಎರಡು ಟ್ರಂಕುಗಳನ್ನು ಒಳಗೆ ತಂದಿಟ್ಟು ಆಚೆ ಹೊರಟುಹೋದರು.

ಅವರೇ ರಾಜ!

ರಾಜ ನಿಂತುಕೊಂಡೇ ನನ್ನ ಕಡೆ ನಮ್ಮ ತಾಯಿ ಕಡೆ ನೋಡುತ್ತಾ, ‘ರಾಯರೆಲ್ಲಿ’ ಎಂದರು. ನಮ್ಮ ತಾಯಿಯವರು ‘ಮನೆಯಲ್ಲಿಲ್ಲವೆಂತಲೂ ಬರಲು ಸ್ವಲ್ಪ ಹೊತ್ತಾಗಬಹುದೆಂತಲೂ’ ಹೇಳಿದರು.

ಆಗ ರಾಜ ನಮ್ಮ ತಾಯಿ ಸಂಗಡ ಮಾತನಾಡುವುದು ಬಿಟ್ಟು, ನನ್ನ

ಕಡೆ ತಿರುಗಿ ಇಂಗ್ಲಿಷಿನಲ್ಲಿ ಮಾತನಾಡಲಾರಂಭಿಸಿದರು

'ಕ್ಷಮಿಸಿ, ನೀವೇ ಕಿಟ್ಟುವಿನ ಕೈಹಿಡಿಯುವವರು!' ನಾನು ಉತ್ತರ ಕೊಡಲಿಲ್ಲ. ಮುಖಕ್ಕೆ ರಂಗೇರಿದುದರಿಂದ ಅವರು ಅರ್ಥಮಾಡಿಕೊಂಡ ರಂತೆ ಕಾಣುತ್ತೆ.

'ನಾನು ಸ್ವಲ್ಪವೂ ಎಗ್ಗಿಲ್ಲದೆ ಮಾತನಾಡುತ್ತಿದ್ದೇನೆಂತ ಭಾವಿಸಿ ಕೊಳ್ಳಬೇಡಿ; ಅದರಿಂದ ತಮಗೆ ಮನಸ್ಸಿಗೆ ಅಸಮಾಧಾನ ಉಂಟಾಗುವ ಹಾಗಿದ್ದರೆ ಕ್ಷಮಿಸಿ. ನಿಮ್ಮವರಾಗತಕ್ಕವರೂ ನಾನೂ ಸ್ನೇಹಿತರು. ಅದು ಎಲ್ಲ ಬಾಂಧವ್ಯಗಳಿಗಿಂತ ಹೆಚ್ಚಿನದೆಂದು ತಿಳಿದ ನಾನು, ನಿಮಗೆ ಜ್ಞಾಪಿಸಿ ಕೊಡಬೇಕಾಗಿಲ್ಲ ಈಗ ತೊಂದರೆ ಕೊಟ್ಟ ಹಾಗೆಯೇ ಇನ್ನು ಮುಂದೂ ನಿಮಗೆ ತೊಂದರೆ ಕೊಡುತ್ತಿರುತ್ತೇನೆ: ನಿಮ್ಮ ಮನೆಗೆ ಬಹುವಾಗಿ ಬರುವ ವನಿದ್ದೇನೆ.

'ನಿಮ್ಮವರ ಅಪ್ಪಣೆ ಪ್ರಕಾರ ನಡೆಯುತ್ತಿದ್ದೇನೆ. ಈ ಎರಡು ಪೆಟ್ಟಿಗೆಗಳನ್ನು ಅವರ ಇಷ್ಟದ ಪ್ರಕಾರ ತಂದಿರುತ್ತೇನೆ. ಒಂದರಲ್ಲಿ ಅಳಿಯಂದಿರಿಗೆ ಕೊಡಬೇಕಾದ ಬಳುವಳಿ ಇದೆ ಇನ್ನೊಂದರಲ್ಲಿ ಬೀಗರಿಗೆ ಕೊಡಬೇಕಾದ ಬಳುವಳಿ ಇದೆ ಇದು ನಿಮ್ಮವರ ಕಡೆಯಿಂದ ಬಂತೆಂತ ಯಾರಿಗೂ ತಿಳಿಯುವುದು ಬೇಡ'

* * * * *

ಮದುವೆ ಬಂತು!

........ದೇವಸ್ಥಾನದಲ್ಲಿಯೇ ಮದುವೆ ಮದುವೆ ಎನ್ನುವುದಕ್ಕಿಂತ ಒಂದು ಕೂಟ ಎನ್ನಬಹುದು. ಹೆಣ್ಣಿನ ಕಡೆ ಬಂದಿದ್ದವರು ಒಬ್ಬಿಬ್ಬರು ಕೇವಲ ಸಮೀಪದ ಬಂಧುಗಳು. ಗಂಡಿನ ಕಡೆ ರಾಜ ಒಬ್ಬರೇ ಬಂಧು! ಇನ್ನು ಮದುವೆ ಎಷ್ಟು ಆಡಂಬರದಿಂದ ಜರಗಿರಬಹುದು!

ಮಾಂಗಲ್ಯ ಧಾರಣೆಯ ಕಾಲ ಬಂತು. ಮಾಂಗಲ್ಯವೇ ಇಲ್ಲ! ಮಾಂಗಲ್ಯ ತರಲು ಹೋದವರು ಬರಲೇ ಇಲ್ಲ! ಅತ್ತೆಮ್ಮನವರೂ ಮಾವನವರೂ "ತಾಳೀನೂ ಇಲ್ಲದ ಮದುವೆ. ಇದೇನು ಕಿರಸ್ತಾನರ ಮದುವೆ ಕೆಟ್ಟು ಹೋಯಿತೇ? ಅವರ ಮದುವೇಲಿ ಉಂಗುರ ಬದಲಾಯಿಸುತ್ತಾರೆ ಇಲ್ಲಿ ಅದೂ ಗತಿಯಿಲ್ಲ; ಅವನಿಷ್ಟ ಬಂದ ಹಾಗೆ ಅವನೇ ಮಾಡಿಕೊಳ್ಳಿ. ನಾವು ಹೋಗುತ್ತೇವೆ" ಎಂತ ಎದ್ದೇ ಬಿಟ್ಟರು.

ನಮ್ಮ ತಂದೆತಾಯಿಗಳ ಕಣ್ಣಲ್ಲಿ ನೀರಲ್ಲ ಆಗ ಬಂದುದು; ರಕ್ತ!

ಲಗ್ನದ ವೇಳೆ ಮೀರುವುದಕ್ಕೆ ಬಂತು! ಬೀಗರು ಎದ್ದು ನಿಂತಿದ್ದಾರೆ!

ಆಗ ರಾಜ ಎದ್ದು ಕಣ್ಣಸನ್ನೆಲೇ ಬೀಗರನ್ನು ಕೂಡಿಸಿ ಆಚೆ ಹೋಗ್ತಾ ನಮ್ಮ ತಾಯನ್ನು ಕರೆದರು. ಆಚೆ ಹೋದ ನಮ್ಮ ತಾಯಿ, ಒಂದು ಕ್ಷಣ ದಲ್ಲಿ, ಮಾಂಗಲ್ಯ ಕರಿಮಣಿ ಅರಸಿನ ದಾರದಲ್ಲಿ ಪೋಣಿಸಿದ್ದನ್ನು ತಂದಿಟ್ಟರು.

ಏಕ ಕಾಲದಲ್ಲಿ ನಮ್ಮೆಲ್ಲರ ಕಣ್ಣೂ ನಮ್ಮ ತಾಯಿಯ ಕುತ್ತಿಗೆಗೆ ಹೋಯಿತು. ಆಕೆ ಕುತ್ತಿಗೆಯಲ್ಲಿ ಕರಿಮಣಿ ಮಾತ್ರ ಇತ್ತು!

ಇಂದೂ ನನ್ನ ಕತ್ತಿನಲ್ಲಿರುವ ಮಾಂಗಲ್ಯ ನಮ್ಮ ತಾಯಿಯದು. ಈಗ ಅವರ ಕತ್ತಿನಲ್ಲಿರುವುದು ನನಗೆ ಮಾಡಿಸಿದ ಮಾಂಗಲ್ಯ!

ಮಾಂಗಲ್ಯಧಾರಣೆಗೆ ಇಷ್ಟಾಯಿತಲ್ಲ; ನಾವು ಪಾತ್ರಕ್ಕೆ ಅತ್ತೆಮ್ಮ ನವರೂ ಮಾವನವರೂ ಲಗ್ನಮಂಟಪದಲ್ಲಿದ್ದರು. ಹೇಗೆ ಗೊತ್ತೇ? ವಿಧಿ ಇಲ್ಲದೆ, ದೂರ ಸಂಬಂಧದವರ ಮದುವೆಮನೆಗೆ ಆಕ್ಷೇಪಣೆ ತಪ್ಪಿಸಿಕೊಳ್ಳಲು ಹೋಗಿದ್ದವರು ತೋರಿಸುವ ಶ್ರದ್ಧೆಯಿಂದ! ಅಷ್ಟಕ್ಕೇ ನಿಂತಿದ್ದರೆ ಎಷ್ಟೋ ಉಪಕಾರ. ಆ ಮುಖದ ಮೇಲಿನ ಅಸಮಾಧಾನ ಆಕ್ರೋಶ!

ಅದು ಯಾರಿಗೆ ಸಲ್ಲಬೇಕು?

ಮದುವೆಯೂ ಆಯಿತು! ಮಾಂಗಲ್ಯ ಕಟ್ಟಿದ ಮಾತ್ರಕ್ಕೆ ಅವರ ಕುತ್ತಿಗೆಗೆ ನಾನು ನೇಣುಬಿದ್ದೆ. ಅವರೇನೂ ನನ್ನನ್ನು ತ್ಯಜಿಸಲು ಸಾಧ್ಯ ವಿರಲಿಲ್ಲ. ಅತ್ತೆಮ್ಮ ಮಾವಂದಿರಿಗೆ ಸೊಸೆಯಾಗದಿರಲೂ ಸಾಧ್ಯವಿರಲಿಲ್ಲ.

ಆದರೂ ಅವರ ಕೋಪಕ್ಕೆ ಪಾತ್ರಳಾಗಬಹುದಲ್ಲ.

ಅತ್ತೆಮ್ಮ, ಮಾವಂದಿರು, ಮಕ್ಕಳು, ಎಲ್ಲರೂ ಮಾಂಗಲ್ಯಧಾರಣೆ ಆದೊಡನೆಯೋ ಅವರ ಮನೆಗೆ ಹೊರಟುಹೋದರು. ಎಷ್ಟು ಕರೆದರೂ ಊಟಕ್ಕೆ ಬರಲೇ ಇಲ್ಲ!

ವರನ ಪೈಕಿ ಊಟ ಮಾಡಿದವರು ವರನನ್ನು ಬಿಟ್ಟರೆ ರಾಜ ಒಬ್ಬರೆ.

* * * * *

ಮನೆಗೆ ಬಂದಾಯಿತು. ದೇವರಿಗೆ ನಮಸ್ಕಾರ ಮಾಡಲು ದೇವರ ಕೋಣೆಗೆ ಹೋದೆವು. ನನ್ನಿಚ್ಛೆಯಂತೆ ನನ್ನ ಕಡೆಯವರಾರೂ ದೇವರ ಮನೆಗೆ ಬಂದಿರಲಿಲ್ಲ. ಅತ್ತಿಗೆ ನಾದಿನಿಯರು ಬಾಗಿಲು ಕಟ್ಟಿ ಹೆಸರು ಹೇಳಿಸ

ಬೇಕು. ಅವರು ಬರಲು ಮಾವಂದಿರು ಅಪ್ಪಣೆ ಕೊಟ್ಟಿರಲಿಲ್ಲವಲ್ಲ!

ದೇವರಿಗೆ ನಮಸ್ಕಾರ ಮಾಡಿ, ನಾನು ಅವರ ಕಾಲಿಗೆ ಬಿದ್ದೆ. ಭದ್ರವಾಗಿ ಎರಡೂ ಕೈಗಳಿಂದ ಎರಡು ಕಾಲೂ ಹಿಡಿದೆ. ಕಣ್ಣೀರಿನಿಂದ ಅವರ ಕಾಲು ನೆನೆಯಿತು. ಅವರು ಬೆಚ್ಚಿ ಮೃದುವಾಗಿ ಕೈಹಿಡಿದು ನನ್ನನ್ನೆತ್ತಿ, 'ಯಾಕೆ'? ಎಂದರು. 'ಅನಾಥೆ, ನಿರ್ಗತಿಕಳು, ನಿಮ್ಮ ಪಾದವನ್ನು ನಂಬಿದ್ದೇನೆ. ಹಿಡಿದ ಕೈ ಬಿಡಬಾರದು' ಎಂದೆ.

ಅದಕ್ಕೆ ಅವರು ಗಲ್ಲವನ್ನು ಒಂದು ಬೆರಳಿನಲ್ಲಿ ಮುಟ್ಟಿ, 'ಹುಚ್ಚಿ, ಮತ್ತೆ ಬಿಡಲು ಕೈಹಿಡಿಯಲಿಲ್ಲ. ಅತ್ತೆಮಾವಂದಿರನ್ನು ನಿನ್ನ ಕಡೆಗೆ ಒಲಿಸಿಕೋ. ನನಗೆ ಅಷ್ಟೇ ಸಾಕು' ಎಂದರು.

*  *  *  *  *

ಒಂದೇ ದಿನದ ಮದುವೆ. ಅಂದೇ ಅವರ ಕೂಡ ಇದ್ದುದು. ಮದುವೆ ಆಗಿ ಎಂಟು ದಿನವಾದರೂ ಅವರು ನಮ್ಮ ಮನೆ ಕಡೆ ಬಂದಿರಲಿಲ್ಲ. ನಾವಾಗಿ ಹೋಗಲು ಧೈರ್ಯ ಎಲ್ಲಿಂದ ಬರಬೇಕು?

ಅಂದು ಸಂಜೆ ಮನೆಯಲ್ಲೇ ಕುಳಿತು ನನ್ನ ಮದುವೆಯ ವಿಷಯವನ್ನು ಆಲೋಚಿಸುತ್ತ ಕುಳಿತಿದ್ದೆ. ನಮ್ಮ ಸಮಾಜದ ರೀತಿನೀತಿಗಳು ಕಣ್ಣಮುಂದೆ ಭೀಕರ ನಗ್ನ ನೃತ್ಯವನ್ನು ನಡೆಸಿದ್ದುವು. ಜೊತೆಗೆ ಮನಸ್ಸು ಪ್ರಶ್ನೆಮಾಡುತ್ತಿತ್ತು. ಲಗ್ನವೇನೋ ಆಯಿತು. ಮುಂದೆ!....ಮುಂದೆ!.... ಈಗಿರುವಂತಾದರೆ ಶೂನ್ಯ!....ಏನಿದೆಯೋ ಯಾರು ಬಲ್ಲರು!

ಅಷ್ಟರಲ್ಲಿ ನಮ್ಮ ತಾಯಿ ಕೂಗಿದಂತೆ ಕೇಳಿಸಿತು. ಹೋಗಿ ನೋಡಿದೆ. ನಡುಮನೆಯಲ್ಲಿ ಅತ್ತೆಮ್ಮನವರೂ ಇಬ್ಬರು ಹುಡುಗರೂ ಕುಳಿತಿದ್ದರು. ಅವರ ಕಾಲು ಮುಟ್ಟಿ ನಮಸ್ಕಾರ ಮಾಡಿದೆ. ಎರಡು ತೊಟ್ಟು ಕಣ್ಣೀರು ಅವರ ಕಾಲ ಮೇಲೆ ಬಿತ್ತು. ಅತ್ತೆಮ್ಮನವರು ತಲೆಸವರಿ ಕೈ ಹಿಡಿದೆಳೆದು ಹತ್ತಿರ ಕೂಡಿಸಿಕೊಂಡರು. ಅವರ ಕಣ್ಣುಗಳಲ್ಲೂ ನೀರು ಮಿಡಿಯಿತು.

ಎಷ್ಟಾದರೂ ಮಕ್ಕಳನ್ನು ಹೆತ್ತ ಹೆಂಗರುಳಲ್ಲವೆ!

'ಅಚ್ಚಣ್ಣ ಇನ್ನೂ ಒಂದು ತಿಂಗಳು ರಜಬೇಕು ಎಂತ ಬರೆದು ಹಾಕಿಕೊಂಡಿದ್ದ; ಮದುವೆ ಮಾಡಿಕೋಬೇಕು, ಅದಕ್ಕೋಸ್ಕರ ಎಂತ. ಸಂಸಾರ ತರುವುದಕ್ಕೆ ಕ್ವಾರ್ಟರ್ಸ್ ಕೊಡಬೇಕೆಂದೂ ಬರೆದಿದ. ಎರಡೂ

ಆಗಬಹುದೆಂತ ಮದುವೆ ಆಗೋಕೆ ಮೊದಲು ಕಾಗದ ಬಂದಿತ್ತು.

'ಆದರೆ ಈಗ ತಂತಿ ಬಂದಿದೆ—ಹೊಸದಾಗಿ ಮಂಜೂರಾದ ರಜ ಕ್ಯಾನ್ಸಲ್ ಆಗಿದೆಯೆಂತ; ಸಿಂಗಪುರಕ್ಕೆ ಫ್ರಂಟ್‌ಗೆ ಹೋಗಬೇಕಾದ್ದರಿಂದ ಸಂಸಾರ ಕರೆದುಕೊಂಡು ಬರಕೂಡದೆಂತ. ಇನ್ನೂ ಎಂಟು ದಿವಸಮಾತ್ರ ಇರುತ್ತಾನೆ. ಬಂದುಬಿಡಮ್ಮ' ಎಂದರು.

ಅವರ ಹಿಂದೆಯೇ ಹೊರಟೆ.

ಅವರೊಡನಿದ್ದ ಆ ಮೊದಲ ಎಂಟುದಿನದ ಬಾಳನ್ನುನಾನು ಎಂದೂ ಮರೆಯಲಾರೆ.

ಇನ್ನು ಎಂಟು ದಿನಕ್ಕೆ ಯುದ್ಧರಂಗಕ್ಕೆ ಹೋಗುವ ಮಗ ಹಿಂತಿರುಗಿ ಬಂದರೂ ಬರಬಹುದು, ಬಾರದೆ ಹೋಗಲೂ ಬಹುದು. ಅಂತಹ ಅವರೊಡನೆ ಅತ್ತೆಮ್ಮನವರಾಗಲಿ ಮಾವನವರಾಗಲಿ ಮಾತನಾಡುತ್ತಿರಲಿಲ್ಲ.

* * * * *

ಇನ್ನೇನು, ಅವರು ಹೊರಡಬೇಕು, ಆಗ ಅವರೊಡನೆ ಮಾವನವರು ಹೇಳಿದರು-'ಇರುವ ಹಾಗಿದ್ದರೆ ನಿನ್ನ ಹೆಂಡತಿ ನಮ್ಮ ಮನೆಯಲ್ಲಿರಬೇಕು; ಇಲ್ಲದಿದ್ದರೆ ನಿಮಗೂ ನಮಗೂ ಸಂಬಂಧ ಹರಿಯಿತೆಂದು ತಿಳಿದುಕೊ. ನೀನು ಹಿಂತಿರುಗಿ ಬಂದ ಮೇಲೆ, ನಿನ್ನ ಮುಖ ಸಹ ತೋರಿಸಬೇಕಾಗಿಲ್ಲ'!

ಅದುವರೆಗೂ ನಾನು ಮಾವನವರೆದುರಿನಲ್ಲಿ ಮಾತನಾಡಿರಲಿಲ್ಲ. ಆದರೂ ಧೈರ್ಯವಾಗಿ ಹೇಳಿದೆ: "ಇದು ನಿಮ್ಮ ಮನೆ. ನಿಮ್ಮ ಮನೆಗೆ ನಾನು ಬಂದಾಗಿದೆ. ನೀವೇ ಕರೆತಂದಿರುತ್ತೀರಿ. ಹೋಗುವುದಕ್ಕೆ ನೀವು ಕರೆತರಲಿಲ್ಲ. ನಾನು ಹೋಗುವುದಕ್ಕೂ ಬಂದವಳಲ್ಲ. ನೀವು ನನ್ನನ್ನು ಇಲ್ಲಿಗೆ ತಂದಾಗಲೇ ಇದು ನನ್ನ ಮನೆಯಾಯಿತು. ಇರಲು ಬಂದಿದೇನೆ. ಇರಲು ಅಪ್ಪಣೆ ಕೊಡಬೇಕು. ನೀವು ಕತ್ತು ಹಿಡಿದು ತಳ್ಳಿದರೂ ನಾನು ಹೋಗುವವಳಲ್ಲ".

ಯಾರೂ ಮಾತನ್ನೇ ಆಡಲಿಲ್ಲ.

* * * * *

ಅವರು ಹೋದ ಮೇಲೆ ಒಂದು ವಾರವಾಗಿದ್ದರೂ ಕಾಗದ ಬಂದಿರಲಿಲ್ಲ. ಅದಕ್ಕಾಗಿ ಜೀವಕುದಿಯುತ್ತಿತ್ತು.

ಹತ್ತನೆಯ ದಿನ ಬಂತು. ಉತ್ತರ ಬರೆದೆ. ಆ ಮೇಲೆ ಪತ್ರಗಳು ಸರಿಯಾಗಿ ಬರುತ್ತಿದ್ದುವು. ನಾನೂ ಬರೆಯುತ್ತಿದ್ದೆನೆಂದು ಹೇಳಬೇಕಾಗಿಲ್ಲ. ಅವರಿಗೆ ನಾನು ಕಾಗದ ಬರೆಯಲು ಅತ್ತೆಮ್ಮನವರಾಗಲಿ ಮಾವನವರಾಗಲಿ ಅಡ್ಡಿ ಮಾಡಲಿಲ್ಲ. ಆದರೆ ಅವರು ನಮ್ಮವರಿಗೆ ಒಂದು ಪತ್ರವನ್ನೂ ಬರೆಯಲಿಲ್ಲ. ಅವರ ಪತ್ರಗಳಿಗೆ ಉತ್ತರ ಸಹ ಬರೆಯುತ್ತಿರಲಿಲ್ಲ. ಆದರೆ ಅವರು ಬರೆಯುವುದನ್ನು ಬಿಡಲೇ ಇಲ್ಲ. ತಿಂಗಳು ತಿಂಗಳಿಗೆ ಸರಿಯಾಗಿ ಅವರಿಗೂ ನನಗೂ ಹಣ ಬರುತ್ತಿತ್ತು. ನಾನು ತೆಗೆದುಕೊಳ್ಳುತ್ತಿದ್ದೆ. ಅವರು ಹಣವನ್ನು ಮುಟ್ಟುತ್ತಿರಲಿಲ್ಲ.

ಇತ್ತ ಅತ್ತೆಮ್ಮನವರಿಗೆ ಕಾಯಿಲೆ ಹೆಚ್ಚಾಗುತ್ತ ಬಂದು, ಆರು ತಿಂಗಳು ಎನ್ನುವ ವೇಳೆಗೆ, ಹಾಸಿಗೆ ಹಿಡಿದು ಮಲಗಿಯೇಬಿಟ್ಟರು.

ಮಗನು ಯುದ್ಧಕ್ಕೆ ಹೊರಟುಹೋದ ಸಂಕಟ, ತಮ್ಮಗಳಿಗೂ ಮಗನಿಗೂ ಮಧ್ಯೆ ಬಂದ ಮನಸ್ತಾಪ, ಇವೆರಡೂ ಕಾಯಿಲೆಯನ್ನು ಹೆಚ್ಚು ಮಾಡಿ ಅವರ ಆಯುಸ್ಸನ್ನು ಬೇಗ ತೀರಿಸಿಬಿಟ್ಟುವು.

ನಾನು ಮನೆಗೆ ಬಂದೊಡನೆಯೇ ಆ ದೊಡ್ಡ ಸಂಸಾರವನ್ನು ತೂಗಿಸುವ ಭಾರ ನನ್ನ ತಲೆಯ ಮೇಲೆಯೇ ಬಿದ್ದಿತು. ನನಗೂ ಅದೇ ಬೇಕಾಗಿದ್ದುದು. ಕೆಲಸ, ಕೆಲಸ! ನನಗೆ ಬೇಕಾಗಿದ್ದುದೂ ಅವರ ವಿಷಯವಾಗಿ ಎಷ್ಟು ಕಡಿಮೆ ಚಿಂತೆಮಾಡಲು ವಿರಾಮ ಸಾಧ್ಯವೋ ಅಷ್ಟೇ ವಿರಾಮ. ಅವರನ್ನು ಕುರಿತು ಯೋಚಿಸುತ್ತಿದ್ದರೆ ಕೆಲಸ ಹಿಂದಾಗುತ್ತಿತ್ತು. ಕೆಲಸ ಹಿಂದಾದರೆ ನಡೆಯುವುದು ಹೇಗೆ? ನನ್ನ ಹೆಸರು! 'ಕೆಲಸಕ್ಕೆ ಹಿಂದೆ, ಉಪಯೋಗವಿಲ್ಲ' ಎಂಬ ಬಿರುದೂ ಬಂದುಬಿಟ್ಟರೆ!

ನನ್ನ ಮನಸ್ಸಿನಲ್ಲಿ ಮೊದಲು ಸುಳಿದಾಡುತ್ತಿದ್ದುದು ಕೆಟ್ಟುದೇ. ಕೆಟ್ಟದನ್ನು ನೆನೆದುಕೊಳ್ಳುವುದು ನನಗೆ ಬೇಕಾಗಿರಲಿಲ್ಲ. ಅದರಿಂದ ಮನೋದೌರ್ಬಲ್ಯ ಹೆಚ್ಚುತ್ತಿತ್ತು. ಅಲ್ಲದೆ ಕೆಟ್ಟುದನ್ನು ಎಣಿಸುವ ಬದಲು ನೆನೆಯದಿರುವುದೇ ಒಳ್ಳೆಯದಲ್ಲವೆ!

ಹಗಲೆಲ್ಲ ದುಡಿಯುತ್ತಿದ್ದುದರಿಂದ ನನಗೆ ರಾತ್ರಿ ಮಲಗಿದ ಒಡನೆಯೇ ನಿದ್ದೆ ಬರುತ್ತಿತ್ತು. ಇದು ಸಾಧಾರಣವಾಗಿದ್ದರೂ ಎಷ್ಟೋ ದಿನ ಅವರನ್ನು ಮರೆಯಲು ಸಾಧ್ಯವಿಲ್ಲದೆ ರಾತ್ರಿಯೆಲ್ಲ ನಿದ್ದೆಬಾರದೆ ಮನಸ್ಸಿಗೆ ತಾಪತ್ರಯವಾಗುತ್ತಿತ್ತು. ನನ್ನಂತೆ ಅವರಿಗೆ ಸುಪ್ಪತ್ತಿಗೆ ಇದೆಯೇ? ಬೆಚ್ಚ

ಗಿರುವ ಹೊದಿಕೆ? ತಲೆದಿಂಬು? ಚಳಿಗಾಳಿ ಬಿಸಿಲು ಮಳೆಗಳಿಂದ ದೇಹ ವನ್ನು ಮರೆಮಾಡಿಕೊಳ್ಳಲು ಮನೆ ಇವೆಯೆ? ನನಗೆ ಸಿಗುತ್ತಿದ್ದಂತೆ ವೇಳೆ ವೇಳೆಗೆ ಮೃಷ್ಟಾನ್ನ ಭೋಜನ ಅವರಿಗೆ ಸಿಗುತ್ತದೆಯೆ? ರಾತ್ರಿ ನಿದ್ದೆ ಉಂಟೇ? ಟ್ರೆಂಚುಗಳಲ್ಲಿನ ವಾಸ ಸುಖವೆ? ಸುತ್ತಮುತ್ತ ಹೆಣಗಳ ಬಣವೆ ಗಳಿಲ್ಲದೆ ಉಂಟೇ? ಸಾಯುತ್ತಿರುವವರ, ನೋವಿನಿಂದ ನರಳುತ್ತಿರುವವರ ಆರ್ತನಾದದಿಂದ ಹುಚ್ಚು ಹಿಡಿಯಲಿಕ್ಕಿಲ್ಲವೆ? ಇಲ್ಲಿಯೇ ವಿಮಾನದ ಶಬ್ದ ಇಷ್ಟು ವಿಶೇಷವಿರುವಾಗ-ಯುದ್ಧ ರಂಗದಲ್ಲಿ ಅದಕ್ಕೆ ಮಿತಿಯುಂಟೆ? ಕಿವಿ ಕಿವುಡಾಗಲಿಕ್ಕಿಲ್ಲವೆ! ಕಿವಿ ಒಡೆದು ಗರ್ಭನಿರ್ಭೇದವಾಗುವಂತಹ ಮದ್ದಿನ ಸಿಡಿತದ ಶಬ್ದ; ಕ್ಷಣವೂ ವಿರಾಮವಿಲ್ಲದ ಹಾರುತ್ತಿರುವ ಬಂದೂಕಿನ ಶಬ್ದ! ಸಾವಿನದೂತರೆಂಬಂತೆ ಎಚ್ಚರಿಕೆಯೇ ಕೊಡದೆ, ವಿರಾಮ ಸಹ ಕೊಡದೆ ಸುತ್ತಲೂ ಬರುತ್ತಿರುವ ಗುಂಡಿನ ತಸ್, ಢಂ ಎಂಬ ಘರ್ಜನೆ........

ಮನಸ್ಸು ಎಷ್ಟು ತಡೆದರೂ ತರಂಗತರಂಗಗಳಾಗಿ ವಿರಾಮವಿಲ್ಲದೆ ಒಂದರ ಹಿಂದೊಂದರಂತೆ ಬರುತ್ತಿದ್ದ ಇವೇ ತರದ ಆಲೋಚನೆ ಸುತ್ತಿ ಟ್ಟಂತೆ ದಿನದಿನವೂ ಒಂದೇ ಯೋಚನೆ!

ಇಂದೂ ಅದನ್ನು ನೆನೆಸಿಕೊಂಡರೆ ಮೈಯಲ್ಲಿ ವಿದ್ಯುತ್ ಪ್ರವಾಹ ವಾದಂತಾಗುವುದು.

ಮನೆಯಲ್ಲಿ ನನ್ನ ನಡವಳಿಕೆಯನ್ನು ಅತ್ತೆಮ್ಮ ಮತ್ತು ಮಾವನ ವರು ಸುಮಾರು ಮೂರು ತಿಂಗಳಕಾಲ ಪರಿಶೀಲಿಸಿ ನೋಡಿದರು. ಅವರು ದೀರ್ಘಕಾಲ ನೋಡಿದಷ್ಟೂ ಅವರಿಗೆ ನನ್ನ ಮೇಲೆ ವಿಶ್ವಾಸ ಹೆಚ್ಚುತ್ತಾ ಬಂದು ಕೊನೆಗೆ ಮನೆಯ ಯಾವ ವಿಷಯವನ್ನಾಗಲಿ ನನ್ನನ್ನು ವಿಚಾರಿ ಸದೆ ಯಾರೂ ಮಾಡುತ್ತಿರಲಿಲ್ಲ

* * * * *

ಒಂದು ರಾತ್ರೆ; ಸುಮಾರು ಒಂದು ಗಂಟೆ ಸಮಯ. ಮನೆಯಲ್ಲಿ ಅತ್ತೆಮ್ಮನವರ ಮತ್ತು ನನ್ನ ವಿನಾ ಎಲ್ಲರೂ ನಿದ್ದೆ ಮಾಡುತ್ತಿದ್ದರು. ಅತ್ತೆಮ್ಮನವರು ನೋವಿನಿಂದ ಬಹಳ ಹಿಂಸೆಪಡುತ್ತಿದ್ದರು. ನಾನು ಅವರ ಬಳಿ ಕುಳಿತು ಕಾಲು ಒತ್ತುತ್ತಿದ್ದೆ.

ಅತ್ತೆಮ್ಮನವರು 'ಮಾಲತಿ' ಎಂದರು.

ಆಂ, ಏನು ಅತ್ತೆಮ್ಮ!

'ಹತ್ತಿರ ಬಾ, ಘಟ್ಟಿಯಾಗಿ ಹೇಳಲಾರೆ'

ಉಂ

"ಇನ್ನು ಬಹಳ ದಿನ ನಾನು ಬದುಕಲಾರೆ, ನಾನು ಹೋಗುವ ಕಾಲ ಬಂದಿದೆ. ಆದರೆ ಹೋಗುವ ಮೊದಲು ಸಾಧ್ಯವಾದರೆ ಒಂದು ಕಾರ್ಯ ವನ್ನು ಮಾಡಬೇಕೆನಿಸಿದೆ. ಅವರದು ಬಹಳ ಹಟ. ನಾನು ಹೋದ ಮೇಲೂ ಅವರು ಅಚ್ಚಣ್ಣನನ್ನು ಕ್ಷಮಿಸದೆಯೇ ಇದ್ದು, ಅವನೊಡನೆ ಮಾತನಾಡದೆ ಸಹ ಇರಬಹುದು. ತಂದೆ ಮಕ್ಕಳು ಹಾಗಿರುವುದು ಧರ್ಮ ವಲ್ಲ. ಇಬ್ಬರಲ್ಲಿ ಒಬ್ಬರಾದರೂ ತಗ್ಗಬೇಕು. ತಂದೆಗೆ ಮಗ ತಗ್ಗಿದರೆ ಅವ ನಿಗೇನೂ ಅವಮಾನವಾಗಲಾರದು. ಮಗನಿಗೆ ತಗ್ಗಲು ಹೆತ್ತ ತಂದೆಗೆ ಮನ ಒಪ್ಪಲಾರದು. ಅಷ್ಟೇ ಅಲ್ಲ. ತಪ್ಪು ತಂದೆಯದಾದರೂ ಅವರು ತಪ್ಪೆಂದು ಹೇಳಿಕೊಳ್ಳಲು ಅವಮಾನವೆಂತ ಭಾವಿಸುತ್ತಾರೆ. ಇಂದೋ ನಾಳೆಯೋ ಹೋಗುವ ನನಗಾಗಿ, ಅವರಲ್ಲಿ ತಪ್ಪಾಯಿತೆಂದು ಅವನು ಕೇಳಿಕೊಳ್ಳಲಿ. ಆಗಲಾದರೂ ತಂದೆ ಮಗನೊಂದಿಗೆ ಮಾತನಾಡುವ ರೇನೋ ನೋಡೋಣ. ಕಾಗದ ಕಡ್ಡಿ ತೆಗೆದುಕೊ. ಬರೆ........

"ಅಚ್ಚಣ್ಣನಿಗೆ ಆಶೀರ್ವಾದ.

"ಹೆಚ್ಚಿಗೆ ಬರೆಯಲು ಸಾಧ್ಯವೂ ಇಲ್ಲ, ವೇಳೆಯೂ ಅಲ್ಲ, ಅಗತ್ಯವೂ ಇಲ್ಲ. ನಾನು ಇನ್ನು ಹೆಚ್ಚು ದಿನ ಬದುಕಿರಲಾರೆ. ಇಂದೋ ನಾಳೆಯೋ ಹೋಗುವ ನನಗಾಗಿಯಾದರೂ ಅವರಿಗೆ ತಕ್ಷಣ ಒಂದು ಕಾಗದ ಬರೆದು ಅದರಲ್ಲಿ ಅವರ ಕ್ಷಮೆ ಬೇಡು. ತಪ್ಪು ಯಾರದೇ ಆಗಲಿ, ಮಗ ತಂದೆಯ ಕ್ಷಮೆಯನ್ನು ಬೇಡಿದರೆ ಮಗನಿಗೆ ಏನೂ ಅವಮಾನವಿಲ್ಲ. ನನ್ನಲ್ಲಿ ಆ ತಂದೆಯಿಂದ ನೀನು ಹುಟ್ಟಿದೆ. ನಿನಗೆ ಜನ್ಮವಿತ್ತವರು ಅವರು. ಅವರು ಇಲ್ಲದಿದ್ದರೆ ಇಂದು ನೀನಿರುತ್ತಿರಲಿಲ್ಲ. ಅದನ್ನು ಮರೆಯದೆ ಮತ್ತೊಮ್ಮೆ ಅವರ ಕ್ಷಮೆ ಬೇಡು. ತಂದೆ ಮಗನ ಮಧ್ಯೆ ಒಂದು ಹೆಣ್ಣಿಗಾಗಿ ಹುಟ್ಟಿದ ದ್ವೇಷ, ಒಬ್ಬರಿಂದ ಒಬ್ಬರನ್ನು ಹೆತ್ತು ಹೋಗುತ್ತಿರುವ ನನ್ನ ಹಿಂದೆ ನಾಶ ವಾಗಿ ಹೋಗಲಿ".

* * * * *

ನಾನೂ ಒಂದು ಕಾಗದ ಬರೆದೆ. ಅವರಿಂದ ಅವರ ತಾಯಿಗೆ ಒಂದು, ತಂದೆಗೆ ಒಂದು, ನನಗೊಂದು ಕಾಗದ ಬಂದುವು. ಅವರ ತಂದೆತಾಯಿಗೆ

ಅವರು ಏನು ಬರೆದಿದ್ದರೋ ನನಗೆ ಗೊತ್ತಾಗಲಿಲ್ಲ. ಆದರೆ ಅಂದಿನಿಂದ ಮಾವನವರು ಕಾಗದ ಬರೆಯಲಾರಂಭಿಸಿದರು.

*     *     *     *     *

ಅವರು ಹೊರಟುಹೋದ ಎಂಟು ತಿಂಗಳ ಹೊತ್ತಿಗೆ ಅತ್ತೆಮ್ಮನವರು ಇನ್ನು ಹೆಚ್ಚುಕಾಲ ಉಳಿಯಲಾರರೆಂಬುದು ನಿಶ್ಚಯವಾಗಿ ಹೋಯಿತು. ಅವರಿಗೆ ತಂತಿ ಕಳಿಸಿದೆವು.

ಆದರೇನು, ಅವರು ಬರಲಿಲ್ಲ. ಬರಲಾಗಲಿಲ್ಲ. ಬರುವ ಕೆಲಸವೆ! ತಾವು ಬರಲು ಸಾಧ್ಯವಿಲ್ಲವೆಂತ ಅವರಿಂದ ಮರು ತಂತಿ ಬಂತು. ಆ ಮೇಲೆ ಸುಮಾರು ಹದಿನೈದು ದಿನದ ಮೇಲೆ ಅತ್ತೆಮ್ಮನವರು ಹೋಗಿಬಿಟ್ಟರು.

ಆ ವಿಚಾರ ಅವರಿಗೆ ತಂತಿ ಮೂಲಕ ತಿಳಿಸಿದೆವು. ಉತ್ತರಬರಲಿಲ್ಲ.

ಅಷ್ಟುಹೊತ್ತಿಗೆ ಸಿಂಗಪುರವನ್ನು ಜಪಾನೀಯರು ಆಕ್ರಮಿಸಿರುವರೆಂಬ ವರ್ತಮಾನ ಬಂದಿತು. ಇದಾದ ಸ್ವಲ್ಪ ದಿನದ ಮೇಲೆ ಅವರಿಂದ ಕಾಗದಗಳು ಬರುವುದು ನಿಂತುಹೋಯಿತು!

ಸುಮಾರು ಆರು ತಿಂಗಳಾದ ಮೇಲೆ ವಾರ್ ಆಫೀಸಿನಿಂದ, ಅವರ ವಿಚಾರ ಪತ್ತೆ ಹಚ್ಚಲು ಸಾಧ್ಯವಾಗಿಲ್ಲವೆಂದೂ ಆದರೆ ಅವರು ಮರಣ ಹೊಂದಿರುವರೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲವೆಂದೂ, ಬಹುಶಃ ಶತ್ರುಗಳಿಗೆ ಸೆರೆ ಸಿಕ್ಕಿರಬಹುದೆಂದೂ ವರ್ತಮಾನ ಬಂತು.

ನನಗೆ ಪ್ರಪಂಚದಲ್ಲಿ ಎಲ್ಲವೂ ಶೂನ್ಯವಾದಂತೆ ತೋರಿತು. ನನ್ನ ದೇಹ ಮಾತ್ರ ಈ ಜಗತ್ತಿನ ಮೇಲಿದ್ದು ಯಂತ್ರದಂತೆ ಕೆಲಸ ಮಾಡುತ್ತಿತ್ತು.

ಮನಸ್ಸೋ! ಶೂನ್ಯವೂ ಅಲ್ಲ, ಸ್ಥಿರವೂ ಅಲ್ಲ, ಅಸ್ಥಿರವೂ ಅಲ್ಲದ ರೀತಿಯಲ್ಲಿ ಯಾವುದೋ ಪ್ರಪಂಚದಲ್ಲಿ ಹೇಗೋ ಇದ್ದ ಹಾಗೆ ತೋರುತ್ತಿತ್ತು.

ಇಂತಹ ಸ್ಥಿತಿ ಸುಮಾರು ಎರಡು ವರ್ಷಗಳ ಕಾಲ ಉಳಿದಿತ್ತು. ಆ ಕಾಲವು ಹೇಗೆ ಕಳೆಯಿತೋ ದೇವರೇ ಬಲ್ಲ!

ಆ ಮೇಲೆ ಅವರಿಂದ ಬಂತು ತಂತಿ; ಅನಂತರ ಈ ಕತೆ.

## 11. ಯಾರು ಹೆಚ್ಚು?

ಮೂಡಣ ದಿಕ್ಕಿನಲ್ಲಿ ಇನ್ನೂ ಅರುಣಚ್ಛಾಯೆ ಪೂರ್ಣವಾಗಿ ಆರಿರಲಿಲ್ಲ. ಸೂರ್ಯನು ಉರಿಯುವ ಕೆಂಡದಂತೆ ಇನ್ನೂ ಅದೇ ತಾನೆ ಉದಯಿಸುವುದರಲ್ಲಿದ್ದನು. ಕಾವೇರಿಯು ಶ್ರೀರಂಗನನ್ನು ತನ್ನ ಬಾಹುಗಳಲ್ಲಿ ಆಲಿಂಗಿಸಿದ್ದುದರಿಂದ ತೃಪ್ತಿಹೊಂದಿರುವಳಲ್ಲ ಎಂಬಂತೆ ಪ್ರಶಾಂತಳಾಗಿ ಶಿವನ ಸಮುದ್ರದಲ್ಲಿ ಹರಿಯುತ್ತಿದ್ದಳು. ಅಲ್ಲಿನ ಜನರಾಗಲೇ-ಹೆಣ್ಣು, ಗಂಡು, ದೊಡ್ಡವರು, ಸಣ್ಣವರು ಎಂಬ ಬೇಧವಿಲ್ಲದೆ ಎದ್ದು ತಮ್ಮ ಕಾರ್ಯಗಳಲ್ಲಿ ತೊಡಗಿದ್ದರು.

ಇಂತಹ ಸಮಯದಲ್ಲಿ ಮನೆಯ ಮುಂದೆ ದನದಡಿ ಹಾಕಿದ್ದ ಗೊಬ್ಬರವನ್ನು ಹರವುತ್ತಿದ್ದ ಒಬ್ಬಾಕೆ, ಅಷ್ಟು ಹೊತ್ತಿಗಾಗಲೇ ನಿತ್ಯವಿಧಿಗಳನ್ನು ತೀರಿಸಿಕೊಂಡು ಕಾಲೊನಿಗೆ ಹೋಗಲು ಕಾವೇರಿ ಕಡೇನೆ ಹೋಗುತ್ತಿದ್ದ ದೇವಸ್ಥಾನದ ಅರ್ಚಕರನ್ನು ಕಂಡು 'ಅಯ್ನೋರು ಆಗಲೇ ಹೊರಟರು ಕೇಂಪಿಗೆ' ಎಂದಳು.

ಹತ್ತಿರದಲ್ಲೇ ಕೆಲಸಮಾಡುತ್ತಿದ್ದವರೆಲ್ಲ ಕೆಲಸ ನಿಲ್ಲಿಸಿ ಅವರಿಗೆ ಕೈ ಮುಗಿದು ದೋಣಿ ಕಡೆ ಹೋಗುತ್ತಿದ್ದ, ಅವರನ್ನೇ ನೋಡುತ್ತ ನಿಂತರು.

ಮೇಲೆ ಹೇಳಿದುದನ್ನು ಕೇಳಿಸಿಕೊಂಡ ಆಕೆಯ ಮಗಳು 'ಅದೇನು, ಅಯ್ನೋರು ಅಲ್ಲಿಗೆ ಹೋಗೋದು? ಈ ನಡುವೆ ದೂರಾ ಹೋಗ್ತಿರಲಿಲ್ಲ' ಎಂದಳು.

'ಮೊನ್ನೆ ಹೊಸದಾಗಿ ಸೂಪ್ರೆಂಟ್ರು ಬಂದವ್ರಲ್ಲಾ. ಅವರಿಗೊಬ್ಬನೇ ಮಗನಂತೆ. ಅವರಿಗೆ ಬಲು ಕಾಯಿಲೆ ಬಂದು ಮಲಗಿ ಈಗಲೋ ಆಗಲೋ ಅನ್ನೋಹಾಂಗೆ ಆಗಿಹೋಯ್ತಂತೆ. ಆಗ ಅವರ ಹೆಂಡ್ತಿ ರಂಗಪ್ಪನಿಗೆ ಹರಕೆಹೇಳಿಕೊಂಡಳಂತೆ-ಮಗನಿಗೆ ವಾಶಿಮಾಡು; ನಮ್ಮಪ್ಪ, ನಿನಗೆ ವಜ್ರಾಂಗಿ ಮಾಡಿಸಿಕೊಡುತ್ತೇವೆ-ಅಂತ. ಆ ಹುಡುಗಂಗೆ ವಾಶಿಯಾಗಿ ಹೋಯಿತಂತೆ. ಆಯಮ್ಮ ಹರಕೆ ತೀರಿಸೋಕೆ ಅಯ್ನೋರಿಗೆ ಹೇಳಿಕಳುಹಿಸಿದರಂತೆ. ವಜ್ರಾಂಗಿ ಮಾಡಿಸಿರಂತ ಅವರು ಓಡಾಡೋದು.'

ಅರ್ಚಕರು ನದಿಯ ತೀರವನ್ನು ಸೇರಿದರು. ಸೋಮಣ್ಣನ ತೆಪ್ಪ ಸಿದ್ಧವಾಗಿತ್ತು.

'ಏನು ಸೋಮಣ್ಣ, ಹೋಗೋಣವೇ? ಈಕಡೆ ನೋಡ ಏಳ್ತಾ ಇದೆ. ಮಳೆ ಬರೋಲ್ಲ ತಾನೆ.'

'ಮೂಡಲಾಗೆ ಇಲ್ಲ, ಬರೋದು ಅಪರೂಪ.'

'ಹಂಗಾರ ಹೊರಡಪ್ಪ. ನಂಗೆ ಹೊತ್ತಾಗಿ ಹೋಗ್ತದೆ.'

ಸೋಮಣ್ಣ ಇನ್ನೇನು ಜಲ್ಲೆ ಹಾಕಿ ನೋಡಬೇಕು. ಅಷ್ಟರಲ್ಲೇ ಹಾಗೇ ಹಾದಿಯ ಕಡೆ ನೋಡುತ್ತಾ ನಿಂತ. ಪುಟ್ಟನ ಮೇಲೆ ಗೂಡೆಯನ್ನು ಹೊತ್ತುಕೊಂಡು ಒಬ್ಬ ಹುಡುಗಿ ಬೇಗ ಬೇಗ ಬರುತ್ತ ಇದ್ದಳು. ಉಟ್ಟಿದ್ದೇನೋ ಹರಕು ಮಾಸಲು ಸೀರೆಯಾದರೂ ಅವಳ ನಡಿಗೆಯಲ್ಲಿ ಅಪೊಂದು ಠೀವಿ ಕಾಣುತ್ತಾ ಇತ್ತು.

'ಯಾಕೆ ಸೋಮಣ್ಣ—ಇನ್ನು ತಡ?'

'ಕೇಂಪಿಗೆ ಹೋಗೋಕೆ ರಂಗಮ್ಮನ ಮಗಳು ಬರ್ತಾ ಅವ್ಳೆ. ಇನ್ನೇನು ಬಂದೇ ಬಿಟ್ಲು ಅಯ್ನೋರ. ನಾನೇನು ಒಂದೇ ಕ್ಷಣದಾಗ ಹುಟ್ಟು ಹೊಡೀತೀನಿ. ನನ್ನ ಹರವಿ ಒಂಟಿ. ಆಕೆ ಇನ್ನೂ ಶಾನೆ ಹೊತ್ತು ಕಾಯಬೇಕು'.

ಅಷ್ಟು ಹೊತ್ತಿಗೆ ಆ ಹುಡುಗಿ ಅಲ್ಲಿಗೇ ಬಂದುಬಿಟ್ಟಳು. ಆಕೆಯನ್ನು ಕಂಡು ಅರ್ಚಕರು 'ಓ ಚಿನ್ನಮ್ಮನೇ, ಈಯಮ್ಮನಿಗೆ ಏನು ಕೆಲಸ ಕೇಂಪಿನಲ್ಲಿ?' ಎಂದರು.

ಸೋಮಣ್ಣ ಏನೂ ಉತ್ತರ ಹೇಳಲಿಲ್ಲ. ಚಿನ್ನಮ್ಮನು ಅತ್ತಿತ್ತ ನೋಡದೆ ಒಂದೇ ಉಸಿರಿನಲ್ಲಿ ದೋಣಿಯ ಕಡೆ ಓಡುತ್ತ ಬಂದಿದ್ದಳು.

ಅತ್ತಿತ್ತ ಓಡಾಡುತ್ತಿದ್ದ ಒಬ್ಬರಿಬ್ಬರು ಪಡ್ಡೆ ಹುಡುಗರು 'ಓಹೋ, ಏನು ಪಾರಮ್ಮ' ಎಂತ ಆಕೆಯನ್ನು ಮೂದಲಿಸಿದರು. ಆಕೆ ಮೂತಿ ತಿರುವಿದ್ದನ್ನು ಕಂಡು, ಇನ್ನೂ ಗೇಲಿ ಎಬ್ಬಿಸಬೇಕೆಂದು ಅವರು ಇಷ್ಟಪಟ್ಟರಾದರೂ, ಅರ್ಚಕರಿದ್ದ ಕಾರಣ, ಹೆಚ್ಚು ಮಾತನಾಡಲು ಯಾರಿಗೂ ಧೈರ್ಯವಿರಲಿಲ್ಲ. ಆಕೆಯನ್ನು ಕಂಡು ಅರ್ಚಕರು 'ಏನು ಚಿನ್ನಮ್ಮ, ಚೆನ್ನಾಗಿದ್ದೀಯ. ನೀನೂ ಕೇಂಪಿಗೆ ಬರ್ತೀಯಾ' ಎಂದರು.

'ಕರಕೊಂಡು ಹೋದರೆ ಬರ್ತೀನಿ ಅಯ್ನೋರ.'

'ಕರಕೊಂಡು ಹೋಗೋಕೆ ನಾನ್ಯಾರು. ತೆಪ್ಪ ಸೋಮಣ್ಣಂದು; ಅವನು ಖುಷಿ.'

ಅವನ ಕಡೆ ಸಹ ನೋಡದೆ ಚಿನ್ನಮ್ಮ ಹೇಳಿದಳು. 'ಕರಕೊಂಡು

ಹೋದರೆ ಎಲ್ಲಾ ಕೊಟ್ಟಂಗೆ ನಾನೂ ಒಂದಾಣೆ ಕೊಡ್ತೀನಿ' ಎಂದಳು.

'ನಿನ್ನ ಒಂದಾಣೆಯಿಂದ ನಾನೇನು ಬದುಕೋದಿಲ್ಲ'ಎಂತ ಗೊಣಗುತ್ತ ಸೋಮಣ್ಣ ದೋಣಿಯಲ್ಲಿದ್ದ ನಿಂಬೆ ಅಂಜೂರ ಮತ್ತು ದ್ರಾಕ್ಷಿ ಹಣ್ಣಿನ ಬುಟ್ಟಿಗಳನ್ನು ಒತ್ತಟ್ಟಿಗೆ ಸರಕಿಸಿ ಜಾಗಮಾಡಿದ.

'ದುಡ್ಡು ತಗೋಳ್ದೆ ಇದ್ದರೆ ನಾನು ಬರೋದೇ ಇಲ್ಲ' ಎಂದು ಸಿಡುಕಿದಳು ಚಿನ್ನಮ್ಮ.

'ಚಿನ್ನಮ್ಮ, ಏನು ಸೀನು ಹೇಳೋ ಮಾತು! ನಿನ್ನ ಒಂದಾಣೆ ಇಲ್ಲದಿದ್ದರೆ ಸೋಮಣ್ಣ ಕೆಟ್ಟು ಹೋಗುತ್ತಾನೋ? ನಿನ್ನಂತಹ ಬಡವರ ಹತ್ತಿರ ಅವನು ಹಣ ತೆಗೊಂಡು ಸಾಹುಕಾರನಾಗಬೇಕೇ? ಹಂಗೆಲ್ಲಾ ಪಟ್ಟು ಹಿಡೀಬಾರದು. ಸೋಮಣ್ಣ ಅಂಥ ಅಯೋಗ್ಯನೇನೂ ಅಲ್ಲ. ನೋಡು, ನಿಂಗೆ ಅಂತ ಜಾಗ ಸರಿಮಾಡಿ ತನ್ನ ಅಂಗಿ ಹಾಸಿದಾನೆ; ನಿನಗೆ ಕೂತುಕೊಳ್ಳೋಕೆ ಮೆತ್ತಗಿರಲಿ ಅಂತ. ಎಷ್ಟಾದರೂ ಈಗಿನ ಕಾಲದವರೇ ಹಾಗೆ. ನೋಡು, ನಿನ್ನಂತ ಹರೆಯದ ಚೆಲುವೆಗೆ ಎಷ್ಟು ಉಪಚಾರ ಮಾಡ್ತಾರೆ. ನಂಗೇನಾದರೂ ಕೂತುಕೊಳ್ಳೋಕೆ ಅವನ ಅಂಗಿ ತೆಗೆದುಹಾಕಿದನಾ? ನೀನೇನು ಮುಖ ತಿರುವ ಬೇಡ-ಚಿನ್ನಮ್ಮ, ಇವೆಲ್ಲಾ ದೇವರ ಮಾಯ.'

ಇಷ್ಟು ಹೊತ್ತಿಗೆ ಚಿನ್ನಮ್ಮ ದೋಣಿ ಹತ್ತಿ, ಅರ್ಚಕರ ಬಳಿ, ಒತ್ತಟ್ಟಿಗೆ ಸೋಮಣ್ಣನ ಅಂಗಿ ಸುರುಕಿಸಿ ಕುಳಿತಳು. ಇದನ್ನು ಸೋಮಣ್ಣ ನೋಡುತ್ತಿದ್ದನಾದರೂ ಮಾತಾಡಲಿಲ್ಲ. ಅವಳು ಕೂತುಕೊಂಡ ಒಡನೆಯೇ ಶಿವೆಹಾಕಿ ತಳ್ಳಲು,ನದಿಯೊಳಕ್ಕೆ ದೋಣಿ ಹೊರಟುಹೋಯಿತು.

'ಏನು ಚಿನ್ನಮ್ಮ, ಬಹಳ ಇದ್ದ ಹಾಗೆ ಇದೆ ಕುಕ್ಕೆಯೊಳಗೆ.'

'ಏನು ಇಲ್ಲ ಅಯ್ನೋರಾ. ನಮ್ಮ ಎಮ್ಮೆ ಮೊಸರು; ಸಣ್ಣ ಕುಡಿಕೆಯಲ್ಲಿ ಬೆಣ್ಣೆ. ನಮ್ಮ ಗಿಡದಲ್ಲಿ ಬಿಟ್ಟ ಸೀಬೇಹಣ್ಣು, ಅಂಜೂರ, ದ್ರಾಕ್ಷಿ.'

'ಯಾಕೆ? ಮಾರೋಕಾ?'

'ಊಂ. ಸೂಪ್ರೆಂಟ್ರ ಮನೇಲಿ,ಇನ್ನು ಒಂದೆರಡು ಮನೇಲಿ ಮೊಸರು ಹಾಕುತ್ತೇನೆ. ಹಾಗೆ ಬೆಣ್ಣೆಗೂ ಹೇಳಿದ್ರು. ಜೊತೆಗೆ ಆ ಹಣ್ಣು ಮಾರಿ ಬಂದ ದುಡ್ಡು ತೆಗೆದುಕೊಂಡಾದ್ರು ಹೋಗೋಣಾ ಅಂತ.'

'ಅದೇನು ನಿಮ್ಮ ತಾಯಿ ಕಾಣೋಕಿಲ್ಲ.'

'ಅಯಮ್ಮನಿಗೆ ಜ್ವರ ಬಿಡದೆ ಬರ್ತಾಯಿದೆ ಸ್ವಾಮಿ. ನಾವು ಬಡವರು;

ನಮಗಾರೂ ದಿಕ್ಕಿಲ್ಲ. ನಮಗೆ ಇದರಿಂದಲೇ ಜೀವನ. ಇದರಿಂದಲೇ ಮುದ್ದು ಮಾರು ಸಹ ಆಗಬೇಕು.'

'ಏನು ಜ್ವರ ಅದು? ಈಗ್ಗೆ ೫ ದಿನಗಳ ಕೆಳಗೆ ಚೆನ್ನಾಗಿದ್ದಾಳಲ್ಲಾ?'

'ನೀವು ನೋಡಿದ ಲಾಗಾಯ್ತು ಹಾಸಿಗೆ ಹಿಡಿದು ಮಲಗಿದ್ದಾಳೆ. ಬಿಟ್ಟು ಎದ್ದಿದ್ದೇ ಇಲ್ಲ.'

'ಏನೋ ಪಾಪ, ನಿಮಗೂ ಬಹಳ ತೊಂದರೆ ಅಲ್ಲವೇ? ಆ ರಂಗಪ್ಪನೇ ಹುಶಾರುಮಾಡಬೇಕು. ಹೋಗಲಿ. ಅದೇನೆ? ಆ ಹುಡುಗರು ನಿನ್ನ ಮಾರಮ್ಮಾ ಅಂತ ಕೂಗಿದರು! ನಿನ್ನ ಹೆಸರೇನು, ಅವರು ಕೂಗೋದೇನು!'

ಒಂದೇ ಕ್ಷಣ ಅವಳ ಕಣ್ಣು ಬೆಂಕಿಯನ್ನು ಕಾರಿದವು 'ನನ್ನ ಕಂಡರೆ ಅವರಿಗೆ ಹಾಸ್ಯ. ನಾನು ಮಿಕ್ಕವರ ಹಾಗೆ ಅವರ ಸಂಗಡ ನಿಂತು ಲಲ್ಲೇ ಹೊಡೊಯೊಲ್ಲ; ಅಡಿಕೆಲೆ ಹಾಕೊಲ್ಲ; ಕಡ್ಡಿ ಪುಡಿ ಕೇಳೊಲ್ಲ. ಅದಕ್ಕೆ ನನ್ನ ಮೇಲೆ ಹೊಟ್ಟೆ ಉರಿ. ನಾನು ಅವರ ತಂಟೆಗೆ ಹೋಗದಿದ್ರೂ ನಾಯಿಗಳ ಹಾಗೆ ಮೇಲೆ ಬೀಳ್ತಾರೆ.'

'ನೀನೇನು ಅವರ ಜೊತೇಲಿ ಚಕ್ಕಂದವಾಡಬೇಕಿಲ್ಲ. ಕೇಳಿದ ಪ್ರಶ್ನೆಗೆ ನಯವಾಗಿ ಆದರೂ, ಉತ್ತರ ಕೊಡೋದು ಬೇಡವೆ?'

ಆ ಮಾತು ಕೇಳಿ ಚಿನ್ನಮ್ಮ ಏನೂ ಉತ್ತರ ಹೇಳಲಿಲ್ಲ. ಆದರೆ ಹುಬ್ಬು ಗಂಟಿಕ್ಕಿದಳು. ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ. ದೋಣಿ ನಡು ಕಾವೇರಿಗೆ ಬಂದಿತ್ತು. ಹೊತ್ತು ಏರಿ ಮಂಜೆಲ್ಲಾ ಮಾಯವಾಗುತ್ತಾ ಬಂದಿತ್ತು.

'ಚಿನ್ನಮ್ಮ, ರಾಮಯ್ಯನ ವರ್ತಮಾನ ಈಚೀಚೆಗೆ ಏನಾದರೂ ಉಂಟೋ! ಅವ ನಿನ್ನ ಲಗ್ನವಾಗಬೇಕು ಅಂತ ಬಲು ಭ್ರಮೆಯಾಗಿದ್ದ. ಯೋಗ್ಯನಾಗಿಯೂ ಇದ್ದ. ಕಂಪ್ನೀಲಿ ಸಂಬಳಾನೂ ಸಹ ಸಿಕ್ಕುತಿತ್ತು.'

'ನನಗಿಂತ ಚೆಂದುಳ್ಳ ಚೆಲುವೇರು ಅವನಿಗೆ ಇನ್ನೂ ಬೇಕಾದಷ್ಟು ಮಂದಿ ಸಿಕ್ಕೋರು. ನಾನೇ ಆಗತ್ತೇನೆ ಎಂತ ಬರಕೊಟ್ಟಿದ್ದೇನಾ!'

'ನೀನೇನು ಬರಕೊಟ್ಟಿರಲಿಲ್ಲಾ, ಅನ್ನು. ಆದ್ರೂ ನಿನ್ನ ಮೇಲೆ ಬಲು ಭ್ರಮೆಯಾಗಿದ್ದ. ನಿನ್ನ ಲಗ್ನವಾಗಿ ಊರಿಗೆ ಕೊಂಡೊಯ್ತೀನಿ ಎಂತ ಹೇಳ್ತಾ ಇದ್ದ.'

'ಅವನ ಭ್ರಮೆ ಅವನಿಗಿರಲಿ. ನಾವು ಬಡವರು. ನನ್ನ ಬಿಟ್ಟರೆ

ನಮ್ಮ ತಾಯಿಗೆ ಇನ್ನಾರು ದಿಕ್ಕು? ನಾನು ಅವಳ ಈ ವಯಸ್ಸಿಗೆ, ಈ ಸ್ಥಿತಿಯಲ್ಲಿ ಬಿಟ್ಟು ಹೊರಟುಹೋದರೆ, ಅವಳನ್ನ ನೋಡಿಕೊಳ್ಳೋರು ಯಾರು? ಅವನು ಮದುವೆ ಯಾಗುತ್ತಿದ್ದದು ನನ್ನ. ನನ್ನ ಕೈಹಿಡಿದು, ನಮ್ಮ ತಾಯೀನೂ ಸಾಕೋ ಸ್ಥಿತಿ ಬಂದಾಗ, ಅವನಿಗೆ ನನ್ನ ತಾಯೀನೂ ಭಾರ ಆಗ್ತಾ ಇದ್ದಳು. ಅಳಿಯನ ಮನೆ ಅನ್ನ ತಿನ್ನೋಕೆ ಅಮ್ಮನಿಗೂ ನಾಚಿಕೆ ಆಗ್ತಾ ಇತ್ತು.'

'ಅಂಗೆ ಹೇಳಬಿಟ್ಟಿದ್ಯಾ ನೀನು! ಅವನು ಒಳ್ಳೆಯವನಲ್ಲವೇ. ದೇಶ, ಜನ ಕಾಣದವನಾ?'

'ನಂಗೆ ಮದುವೇನೂ ಬೇಡ, ಗಿದುವೇನೂ ಬೇಡ. ನಾನು ಮಾಡಿಕೊಳ್ಳೊದೂ ಇಲ್ಲ' ಎಂತ ಅರ್ಥಂಬರ್ಥ ಕೇಳಿಸುವ ಹಾಗೆ ಚಿನ್ನಮ್ಮ ಗೊಣಗುಟ್ಟಿದಳು.

'ಅಂಗೇನೆ ಶಪಥ ಮಾಡಿದ್ದೀಯಾ?'

ಚಿನ್ನಮ್ಮ ತಲೆ ಅಲ್ಲಾಡಿಸಿದಳು.

'ಮಾರಮ್ಮ ಅಂತ ಸೀಮೆ ಜನ ನಿನ್ನ ಕರೆಯೋದು ಅನ್ಯಾಯವಾದರೂ, ಅವರು ಅಂಗೆ ಕರೆಯೋದರಲ್ಲಿ ಏನು ತಪ್ಪಿಲ್ಲ ಅಂತೀನಿ. ಇಂಗೆ ನೀನು ಮುರಾಡ ಹಾಕ್ಕೊಂಡು ಕುಳಿತರೆ, ನಿಮ್ಮ ಅಮ್ಮನಿಗೆ ಅದರಿಂದ ವ್ಯಸನ ಆಗೋಕಿಲ್ಲವೇ? ಅಲ್ಲ, ಅದಾವನಾದರೂ ಯೋಗ್ಯ ಬಂದು–ನಿನ್ನ ಕೈ ಹಿಡಿತೇನೆ, ನಿನಗೂ ನಿಮ್ಮ ತಾಯಿಗೂ ಅನ್ನಬಟ್ಟೆ ಕೊಡ್ತೇನೆ, ಅಂತ ಅಂದರೆ, ತಳ್ಳಿ ಹಾಕೋಕೆ ನಿನ್ನ ಸಮಜಾಯಿಷಿಯಾದ್ರೂ ಏನಿದ್ದೀತು?'

'ಅಯ್ನೋರ, ಕಾರಣ ಇಲ್ದೇ ಇಲ್ಲ ಆದರೆ ಅದನ್ನ ಒಬ್ಬರಿಗೆ ಯಾಕೆ ಹೇಳಬೇಕು.'

'ನಂಗೂ ಹೇಳದಂತಹ ಕಾರಣವೇ? ನಿಮ್ಮ ಕಷ್ಟ ಸುಖ ನಾನು ಕೇಳೋಕಿಲ್ಲವೇ? ನಾನು ನಿಮ್ಮ ಕಷ್ಟಸುಖ ನಿವಾರಿಸುತ್ತೇನೆ ಅನ್ನೋದು ಸುಳ್ಳೋ?'

'ನೀವು ವಿಚಾರಿಸೋದಿಲ್ಲ ಎಂದನೇ?'

'ಹಂಗಾರೆ ಹೇಳು; ಕೇಳೋಣ. ನಿನ್ನ ಕಾರಣ ಸಮಂಜಸವಾಗಿದ್ದರೆ ನಾನು ಒಪ್ಪಿಕೊಳ್ಳುತ್ತೇನೆ. ನೀನು ಇನ್ನೂ ಹುಡುಗಿ, ಪ್ರಪಂಚ ಏನು ತಾನೆ ನೀನು ಕಂಡಿದ್ದೀಯ? ಹೀಗೆ ನೀನು ಕಾಲ ತಳ್ಳಿದರೆ ಆ ಮೇಲೆ

ನಿನಗೆ ವಯಸ್ಸು ಮೀರಿದರೆ ಯಾರು ಮದುವೆ ಆಗ್ತಾರೆ?'

ದ್ರೋಣಿಯು ಆ ಕೊನೆಯಲ್ಲಿ ಇವರಿಗೆ ಬೆನ್ನು ತಿರುಗಿಸಿ ಕುಳಿತು, ಹುಟ್ಟು ಹಾಕುವುದರಲ್ಲೇ ತಲ್ಲೀನವಾದಂತೆ ಕುಳಿತು, ಇವರ ಮಾತೊಂದೂ ಕಿವಿಯ ಮೇಲೆ ಬೀಳದಂತೆ ತೋರ್ಪಡಿಸಿಕೊಳ್ಳುತ್ತಿದ್ದ ಸೋಮಣ್ಣನ ಕಡೆ, ಚಿನ್ನಮ್ಮ ಒಂದು ಕಣ್ಣು ನೋಟವನ್ನು ಬೀರಿದಳು.

ಇದನ್ನು ಕಂಡ ಅರ್ಚಕರು ಕಣ್ಣು ಸನ್ನೆಮಾಡಿ, ಕಿವಿ ಅವಳ ಕಡೆಗೆ ತಿರುಗಿಸಿದರು.

'ನಮ್ಮ ಅಪ್ಪನನ್ನು ನೀವು ಸರಿಯಾಗಿ ಕಾಣಿ'ರೆಂತ ಆಕೆ ನುಡಿದಳು.

'ನಿಮ್ಮ ತಂದೆ! ಆತ ಕಾಲವಾದಾಗ ನಿನಗೆ ಇನ್ನೂ ೮-೧೦ ವರ್ಷ ಇರಬಹುದು. ಕಾಲವಾಗಿ ಹೋದ ಅವನಿಗೂ ನೀನು ಮದುವೆಮಾಡಿ ಕೊಳ್ಳುವುದಿಲ್ಲವೆನ್ನುವುದಕ್ಕೂ ಏನು ಸಂಬಂಧ!'

'ನೀವು ಅವನನ್ನು ಕಾಣಿರಿ. ಅಯ್ನೋರಾ, ನಮ್ಮ ತಾಯಿಯ ಇಂದಿನ ದುರವಸ್ಥೆಗೆ ಅವನೇ ಕಾರಣ'.

'ಅದು ಹೇಗೆ!'

'ನಮ್ಮ ಅಜ್ಜಿ ನಮ್ಮಂತೆಯೇ ಕಾಲೋನಿಯವರಿಗೆ ಹಾಲು ಮೊಸರು ಮಾರಿ ಜೀವಿಸುತ್ತಿದ್ದಳು. ಆಕೆಗೂ ಚಿಕ್ಕ ವಯಸ್ಸಿನಲ್ಲೇ ಗಂಡ ಹೋಗಿ ನಮ್ಮ ತಾಯಿ ಒಬ್ಬಳೇ ಮಗಳಿದ್ದಳು. ಅಲ್ಲಿಗೆ ಹೋಗುತ್ತಿದ್ದಾಗ ಒಮ್ಮೆ, ನಮ್ಮ ಅಜ್ಜಿ ನನ್ನ ತಾಯನ್ನು ಸಂಗಡ ಕರದೊಯ್ಯುತ್ತಿದ್ದಳು. ಒಮ್ಮೊಮ್ಮೆ ತಾಯಿ ಒಬ್ಬಳೇ ಹೋಗುತ್ತಿದ್ದಳು. ನಮ್ಮ ಅಜ್ಜಿಯು ಸೂಪ್ರೆಂಟ್ರ ಮನೆಯಲ್ಲೇ ಮೊಸರು ಹಾಕುತ್ತಿದ್ದಳು. ಎಷ್ಟೋ ಸೂಪ್ರೆಂಟ್ರು ಮಾರು ಹೋದರು. ಸೂಪ್ರೆಂಟ್ರ ಮನೆ ಮೊಸರು ಹಾಕುವ ಅಕ್ಕಮ್ಮನಾಗಲಿ ಸೂಪ್ರೆಂಟ್ರ ಮನೆಯಲ್ಲಿ ಜವಾನ ಕೆಲಸದಲ್ಲಿದ್ದ ನಮ್ಮ ತಂದೆಯಾಗಲಿ ಬದಲಾಗಲಿಲ್ಲ. ನಮ್ಮ ತಂದೆ ನನ್ನ ತಾಯಿಯನ್ನು ಮದುವೆಮಾಡಿಕೊಳ್ಳಬೇಕೆಂತ ಇಷ್ಟ ಪಟ್ಟನು. ನಮ್ಮ ಅಜ್ಜಿ ಮೊದಮೊದಲು ಒಪ್ಪಲಿಲ್ಲ. ಆದರೂ ಸರ್ಕಾರಿ ನೌಕರಿಯಲ್ಲಿದ್ದ ನಮ್ಮ ತಂದೆಯ ಚಾಕರಿಗೂ, ಅವನ ರೂಪಕ್ಕೂ, ಬಿನ್ನಾಣದ ಮಾತಿಗೂ ಮರುಳಾಗಿ, ಕಟ್ಟಕಡೆಗೆ ನನ್ನ ತಂದೆಗೆ ನನ್ನ ತಾಯಿಯನ್ನು ಕೊಟ್ಟು ಲಗ್ನಮಾಡಿದಳು. ಕೆಲ ದಿನ ಎಲ್ಲಾ ಸರಿಯಾಗಿತ್ತು. ಆ ಮೇಲೆ ಅಜ್ಜಿ ಸತ್ತು ಹೋದಳು.

'ಅಪ್ಪ ಅಮ್ಮನನ್ನು ಅನಾದರಣೆ ಮಾಡಿದ. ಆಕೆಯನ್ನು ಬಡಿಯುತ್ತಿದ್ದ. ನಾನಾವಿಧವಾಗಿ ಹಿಂಸಿಸುತ್ತಿದ್ದ. ತಾನು ಬದುಕಿಗೆ ಹೋಗಿದ್ದವನು, ಅಲ್ಲಿ ಯಾವ ಕಾರಣದಿಂದಲೋ ಸಿಟ್ಟಾಗುತ್ತಿದ್ದವನು, ಬಡವೆಯಾದ ನನ್ನ ತಾಯಿಯ ಮೇಲೆ ಆ ಸಿಟ್ಟನ್ನೆಲ್ಲಾ ತಾನು ಮನೆಗೆ ಬಂದ ಮೇಲೆ ಕಾರುತ್ತಿದ್ದುದನ್ನು, ನಾನು ಮರೆಯಲು ಸಾಧ್ಯವೇ? ಆಕೆ ತುಟಿ ಸಹ ಎರಡು ಮಾಡದೆ ಅವನು ಹೇಳಿದಂತೆ ನಡೆಯುತ್ತಿದ್ದಳು. ಅವನು ಕುಣಿ ಎಂದಂತೆಲ್ಲಾ ಕುಣಿಯುತ್ತಿದ್ದಳು. ಆದರೂ ಅವನು ಅವಳನ್ನು ದನ ಬಡಿಯುವಂತೆ ಬಡಿಯುತ್ತಿದ್ದನು. ಅದನ್ನು ಸಹಿಸಲು ಸಾಧ್ಯವಿಲ್ಲದೆ ಹೋಗುತ್ತಿತ್ತು. ಆದರೆ ನಾನು ಹುಡುಗಿ. ಏನು ಮಾಡಬಲ್ಲೆ! ಆದರೂ ಆ ನೋಟ ನನ್ನ ಕಣ್ಣಿಂದ ಮರೆಯಾಗಿಲ್ಲ. ನಾನು ಮಲಗಿದಂತೆ ನಟಿಸುತ್ತಿದ್ದರೂ ಮುಸುಕಿನೊಳಗೇ ನಿಶ್ಶಬ್ದವಾಗಿ ಅಳುತ್ತಿದ್ದೆ.

'ಇಷ್ಟೆಯೇ! ಆಕೆ ಸ್ಮೃತಿ ತಪ್ಪಿ ನೆಲದ ಮೇಲೆ ಬಿದ್ದು ಹೋದಾಗ ಇದ್ದಕ್ಕಿದ್ದಂತೆ ಅವನ ನಡತೆ ಬದಲಾಯಿಸಿಬಿಡುತ್ತಿತ್ತು. ಆಕೆಯನ್ನು ಎತ್ತಿ, ಮುದ್ದಿಸಿ, ತಬ್ಬಿಕೊಂಡು, ಉಪಚರಿಸಿ, ಎಲ್ಲಿಯೂ ಇಡಲಾರದವನಂತೆ ಆಡುತ್ತಿದ್ದನು.'

'ಇದನ್ನು ಯಾರಿಗೂ ಹೇಳಕೂಡದೆಂದು ನನ್ನ ತಾಯಿಯು ನನಗೆ ಕಟ್ಟಪ್ಪಣೆ ಮಾಡಿದ್ದಳು. ಆ ವಿಧವಾದ ವರ್ತನೆಯಿಂದಲೇ ನಮ್ಮ ತಾಯಿ ಈ ಹೀನಸ್ಥಿತಿಗೆ ಬಂದಿರುವುದು. ತಂದೆ ಸತ್ತು ಬಹಳ ದಿನವಾದರೂ, ಅವಳು ಇನ್ನೂ ಚೇತರಿಸಿಕೊಳ್ಳಲು ಸಾಧ್ಯವಿಲ್ಲದಂತೆ ಆಗಿರುವುದು.

'ನಾವು ಗಂಡಸರನ್ನು ಮದುವೆಯಾಗಿ, ಅವರ ಮರ್ಜಿಯನ್ನನುಸರಿಸಿ, ಅವರು ಬಡಿದಾಗ ಬಡಿಸಿಕೊಂಡು, ಮುದ್ದಿಸಿದಾಗ ಮುದ್ದಿಸಿಕೊಳ್ಳುವುದಕ್ಕೆ ಸೃಷ್ಟಿಯಾಗಿರುವವರೇ? ಅವರಂತೆ ನಾವೇನು ಮನುಷ್ಯರಲ್ಲವೇ? ಅವರೇನು ಹೆಚ್ಚು, ನಾವೇನು ಕಡಿಮೆ?'

ಅರ್ಚಕರು, 'ತಾಳ್ಮೆ ತಂದುಕೋ ಚಿನ್ನಮ್ಮ. ಹಳೆಯ ಚಿಕ್ಕಂದಿನ ನೆನಪು ನಿನ್ನ ಮನಸ್ಸಿನಲ್ಲಿ ಇಷ್ಟು ಸ್ಥಿರವಾಗಿ ಬೇರೂರಿದೆ, ಎಂದು ನಾನು ತಿಳಿದಿರಲಿಲ್ಲ. ಅದನ್ನೆಲ್ಲಾ ನೀನು ಮನಸ್ಸಿನಾಗೆ ಬಹಳ ಹಚ್ಚಿಕೊಳ್ಳಕೂಡದು. ಕಾಲ ಯಾವಾಗಲೂ ಒಂದೇ ರೀತಿಯಲ್ಲಿರುತ್ತದೆಯೇ? ಒಳ್ಳೆ ದಿನ ಬರಬಹುದು. ನಿನ್ನ ಹಳೆಯ ಕತೆಯನ್ನು ನೀನು ಮರೆಯಬಹುದು'.

'ಅಯ್ನೋರಾ' ಅದನ್ನು ಹೇಗೆ ಮರೆಯೋದಕ್ಕೆ ಆಗುತ್ತೆ? ಅದಕ್ಕೇ ನಾನು ಮದುವೆ ಒಲ್ಲೆನೆನ್ನುವುದು. ನಾನು ಒಬ್ಬ ಗಂಡಸಿಗೆ ಎಂದಿಗೂ ತಲೆ ಬಗ್ಗಿಸಲಾರೆ. ನಾನು ಒಬ್ಬನ್ನ ಲಗ್ನವಾದರೆ ಅವನು ನನ್ನನ್ನು ಮುದ್ದಿಸ ಬಹುದು. ಮತ್ತೆ ದನ ಬಡಿಯುವಂತೆ ಬಡಿಯಲೂಬಹುದು. ಈಗ ನಾನು ಯಾರ ಹಂಗಿನಲ್ಲೂ ಇಲ್ಲ. ಯಾರೂ ನನ್ನನ್ನು ಮುದ್ದಿಸಲು ಬಾರರು. ಬಡಿಯಲೂಬಾರರು. ಯಾರಾದರೂ ಹಾಗೆ ಮಾಡಬೇಕೆಂತ ಬಂದರೆ, ನಾನು ಅವರಲ್ಲಿ ಸರಿಯಾಗಿ ನಿಂತು ಕಚ್ಚಾಡಬಹುದು. ಮದುವೆ ಆದ ಮೇಲೇನಿದೆ! ಅವರನ್ನು ನಾವು ಪ್ರೀತಿಸಿದೆವೆಂದರೆ ಅವರ ಕೈ ಬೊಂಬೆಗಳೇ ನಾವು. ಇದಕ್ಕೆ ಎಡೆ ಕೊಡಲು ನನಗೆ ಇಷ್ಟವೇ ಇಲ್ಲಾ'.

'ಅಯ್ಯೋ, ಹುಚ್ಚು ಹುಡುಗಿ! ನೀನೆಲ್ಲಾ ಪ್ರಪಂಚವನ್ನೇ ತಿಳಿದ ವಳಂತೆ! ಏನೂ ತಿಳಿಯದ ಹುಡುಗಿಯ ಹಾಗೆ ಮಾತನಾಡುತ್ತಿದ್ದೀಯ. ಹಾಗೆಯೇ ಮಾಡುತ್ತಾರೆಯೇ? ಒಳ್ಳೆಯ ಗಂಡಂದಿರೇ ಇಲ್ಲವೇ? ಒಳ್ಳೆಯ ಹೆಂಡಂದಿರೇ ಇಲ್ಲವೇ?'

'ಆದರೆ ಅಮ್ಮ ಅಪ್ಪನ ಮೇಲೆ ಎಷ್ಟು ವಿಶ್ವಾಸವಾಗಿದ್ದಳು ಅಂತ ನೀವು ಬಲ್ಲಿರಾ? ಅವಳು ಅವನಿಗಾಗಿ ಸಾಯೋಕೆ ಸಿದ್ಧವಾಗಿದ್ದಾಳೆಯೋ ಹೊರತು, ಅವ ಬಡಿದ್ದಾ ಎಂತ ಎಂದಾದರೂ ಹೇಳೋವಳು ಅಂತ ತಿಳ ಕೊಂಡಿರಾ? ನಮ್ಮ-ಪ್ರೀತಿ-ವಿಶ್ವಾಸ. ಮದುವೆ ಎಂದರೆ ನಮಗೆ ಎಷ್ಟು ಹಿಂಸೆಯಾದರೂ, ಸಹಾಯಕ್ಕೂ ಯಾರನ್ನೂ ಕೂಗದೆ, ಬಾಯಿಮುಚ್ಚಿ ಕೊಂಡು, ನಮ್ಮ ಶತ್ರು ಕೊಡೋ ನೋವಿಗಿಂತ ಹೆಚ್ಚಿನ ನೋವು ಅನು ಭವಿಸೋದು ಎಂದರೆ ಅಂತಹ ಮದುವೇನೆ ಬೇಡ ನಮ್ಮಪ್ಪಾ".

'ಚಿನ್ನಮ್ಮ, ಇನ್ನೂ ನೀನು ಪ್ರಪಂಚ ಕಾಣೆ. ಆ ಕಾಲ ಬಂದಾಗ ಯಾವ ಸ್ಥಿತಿ ಬಂದೀತು ಎಂತ ಹೇಳೋಕೆ ಸಾಧ್ಯವಿರೋದಿಲ್ಲ. ನೀನೇ ಒಂದು ಸಲ ರಕ್ತ ಹೀರಿದೆ ಎನ್ನು. ಮರುಕ್ಷಣ ಕೈಕಾಲಿಗೆ ಬಿದ್ದೀಯೇ. ನಿನ್ನ ಮೈಮೇಲೆ ಪ್ರಜ್ಞೆ ಇಲ್ಲದೆ ಅದನ್ನೂ, ಇದನ್ನೂ ಮಾಡುತಿರ್ತೀಯಾ?'

ಚಿನ್ನಮ್ಮ ಇದಕ್ಕೆ ಪ್ರತಿ ಹೇಳಲಿಲ್ಲ. ಇಷ್ಟು ಹೊತ್ತಿಗೆ ದಡವೂ ಬಂದಿತು. ಸೋಮಣ್ಣ ಅಯ್ನೋರನ್ನ ಎತ್ತಿಕೊಂಡು ಹೋಗಿ ದಡ ಸೇರಿಸಿ ಬಿಟ್ಟು ಬರುವುದರೊಳಗಾಗಿ ಚಿನ್ನಮ್ಮ ಕುಕ್ಕೆಯನ್ನು ತಲೆ ಮೇಲೆ ಎತ್ತಿ ಕೊಂಡು ಸರಿಮಾಡಿಕೊಂಡು ದಡಕ್ಕೆ ನಡೆದೇಬಿಟ್ಟಳು

ಅಯ್ನೋರು ಸೋಮಣ್ಣನ ಕಡೆ ತಿರುಗಿ 'ನಂಗೆ ಕಾಯಬೇಡ ಸೋಮಣ್ಣ. ಸಾಯಂಕಾಲ ಯಾರದ್ದಾದರೂ ತೆಪ್ಪ ಸಿಕ್ಕಿದರೆ ಅವರಲ್ಲಿ ಬಂದು ಬಿಡ್ತೇನೆ. ನಂಗೆ ಪೂರಾ ಕೆಲಸ ಇದೆ' ಎಂತ ಹೇಳಿ 'ಚಿನ್ನಮ್ಮಾ, ನಾನು ಬರಲೋ. ನಾನು ಹೇಳಿದ್ದಕ್ಕೆ ಕೋಪಮಾಡಿಕೊಳ್ಳಬೇಡ. ನೀನು ಇನ್ನೂ ಹುಡುಗಿ. ಆಲೋಚನೆ ಮಾಡಿ ನೋಡು. ನಿಮ್ಮ ತಾಯೀನ ಕೇಳಿದೆ ಎಂತ ಹೇಳು. ನೀನೇನು ಬಹಳ ಹೊತ್ತು ಇಲ್ಲಿ ಇರೋವಳಲ್ಲ ತಾನೆ?' ಎಂದರು

'ನಾನು ಇರೋಕೆ ಇಲ್ಲ ಅಯ್ನೋರಾ. ಅಮ್ಮನಿಗೆ ಮೈಯ್ಯಲ್ಲಿ ಚೆನ್ನಾಗಿಲ್ಲ ಮಧ್ಯಾಹ್ನದೊಳಗೆ ಹೋಗೇಬಿಡಬೇಕು' ಎಂದಳು.

ತನಗೇನು ಹೆಚ್ಚಿಗೆ ಸಂಬಂಧವಿಲ್ಲದವನಂತೆ ನಟಿಸುತ್ತಾ 'ನಾನೂ ಮಧ್ಯಾಹ್ನದ ಹೊತ್ತಿಗೆ ವಾಪಾಸು ಹೋಗಬೇಕು. ಬಂದರೆ ಬರಬಹುದು' ಎಂದ ಸೋಮಣ್ಣ.

ಚಿನ್ನಮ್ಮ ಉತ್ತರ ಹೇಳಲೇ ಇಲ್ಲ. ದೋಣಿಯನ್ನು, ಸೋಮಣ್ಣ ಗೂಟಕ್ಕೆ ಕಟ್ಟಿ, ಅವಳು ಹೋಗುವುದನ್ನು ನೋಡುತ್ತ ನಿಂತುಕೊಂಡ.

ದಡ ದಾಟಿ ರಸ್ತೆ ಸೇರಿದೊಡನೆಯೇ-ಚಿನ್ನಮ್ಮ ಹಿಂತಿರುಗಿ ನೋಡಿದಳು. ವಿಶಾಲವಾದ ನಿಶ್ಶಬ್ದವಾಗಿ ಪ್ರವಹಿಸುತ್ತಿದ್ದ ಕಾವೇರಿ. ಅದರಾಚೆ ದೂರದಲ್ಲಿ ಕಾಣುತ್ತಿದ್ದ ದ್ವೀಪ ಅದರ ಹಿಂದೆ ನೀಲಾಕಾಶ. ಹಾಗೆಯೇ ಅವಳ ನೋಟ ಹಿಂದಿರುಗುತ್ತಾ ತೀರದಲ್ಲಿದ್ದ ದೋಣಿಗೂ, ಅಲ್ಲಿಂದ ಹಿಂದಕ್ಕೆ ಮರಳಿನ ಮೇಲೆ ಮೇಲೆ ನಿಂತಿದ್ದ ಸೋಮಣ್ಣನ ಮೇಲೂ ಬಿದ್ದು, ನಾಲ್ಕು ಕಣ್ಣುಗಳೂ ಒಂದುಗೂಡಿದುವು.

ಚಿನ್ನಮ್ಮ ತಲೆ ಸೊಟ್ಟಗೆ ಮಾಡಿ ಮುಂದಕ್ಕೆ ನಡೆದಳು. ಸೋಮಣ್ಣ ಒಂದು ನಿಟ್ಟುಸಿರುಬಿಟ್ಟ.

* * * * *

ಸೂರ್ಯ ನಡು ನೆತ್ತಿಯ ಮೇಲೆ ಬರುವುದರೊಳಗಾಗಿ ಸೋಮಣ್ಣ ತನ್ನ ಕೆಲಸ ಪೂರೈಸಿಕೊಂಡು ದೋಣಿಯ ಬಳಿಗೆ ಬಂದ ದೋಣಿಯಲ್ಲಿ ಯಾರೂ ಇರಲಿಲ್ಲ. ನದಿಯ ಮೇಲಾಗಲಿ, ಆಚೆಯ ದಡದಲ್ಲಾಗಲಿ, ಯಾವ ದೋಣಿಯೂ ಇರಲಿಲ್ಲ. ದಡದಲ್ಲಿ ಒಬ್ಬಿಬ್ಬರು ಬೆಸ್ತರು ಇದ್ದವರು 'ಚಿನ್ನಮ್ಮ ಇನ್ನೂ ಬರಲಿಲ್ಲ'ವೆಂತ ಹೇಳಿದರು. ಅಷ್ಟರಲ್ಲೇ ಚಿನ್ನಮ್ಮ ಸಹ ಅಲ್ಲಿಗೆ ಬಂದಳು. ಅವಳನ್ನು ಕಂಡು ಸೋಮಣ್ಣ ಗೂಟಕ್ಕೆ ಕಟ್ಟಿದ್ದ ದೋಣಿ

ಯನ್ನು ಬಿಚ್ಚಿ, ಅವಳಿಗಾಗಿ ಕಾಯುತ್ತ ನಿಂತ.

ಚಿನ್ನಮ್ಮ ದೋಣಿಯಲ್ಲಿ ಬೇರಾರೂ ಇಲ್ಲದಿದ್ದುದನ್ನು ಕಂಡು ಅತ್ತಿತ್ತ ನೋಡುತ್ತ ನಿಂತುಕೊಂಡಳು. ದ್ವೀಪಕ್ಕೆ ಯಾರೂ ಬರುವ ಚಿಹ್ನೆ ಕಂಡು ಬರಲಿಲ್ಲ ಪಡದಲ್ಲಿದ್ದ ಒಬ್ಬಿಬ್ಬರು ಅವರ ಕೆಲಸದಲ್ಲಿದ್ದರು. ಚಿನ್ನಮ್ಮ ದೋಣಿಯೊಳಗೆ ಬರಲು ಹಿಂದೆಮುಂದೆ ನೋಡುತ್ತಿದ್ದುದನ್ನು ನೋಡಿ ಸೋಮಣ್ಣ ಪಡಕ್ಕೆ ಬಂದು-ತಾನು ಏನು ಮಾಡುತ್ತಿದ್ದೆ—ಎಂಬುದನ್ನು ಚಿನ್ನಮ್ಮ ಅರಿಯುವುದಕ್ಕೆ ಮೊದಲೇ, ಅವಳ ತಲೆಯ ಮೇಲಿಟ್ಟು ಕೊಂಡಿದ್ದ ಗೂಡೆಯನ್ನು ತೆಗೆದು ಕೆಳಗಿಟ್ಟು, ಅವಳನ್ನೆತ್ತಿಕೊಂಡುಹೋಗಿ ದೋಣಿಯಲ್ಲಿ ಬಿಟ್ಟು ಗೂಡೆಯನ್ನೂ ಒಯ್ದು, ಶಿವೆಯಿಂದ ದೋಣಿಯನ್ನು ತಳ್ಳಿದನು. ದೋಣಿಯು ನದಿಯೊಳಗೆ ಹೊರಟಿತು

ದೋಣಿಯ ಒಂದು ಕೊನೆಯಲ್ಲಿ ಚಿನ್ನಮ್ಮ ಕುಳಿತಿದ್ದಳು. ಅವಳ ಅರ್ಧ ಬೆನ್ನು ದೋಣಿಯ ಇನ್ನೊಂದು ಕೊನೆಯಲ್ಲಿ ಕುಳಿತು ಹುಟ್ಟು ಹಾಕುತ್ತಿದ್ದ ಸೋಮಣ್ಣನಿಗೆ ಕಾಣಿಸುತ್ತಿತ್ತು.

ಬೆಳಿಗ್ಗೆಗಿಂತಲೂ ಆಗ ಅವಳ ಮುಖ ಹೆಚ್ಚು ಸಿಡುಕಾಗಿತ್ತು. ತಾಂಬೂಲ ಚರ್ವಣದಿಂದ ರಂಗೇರಿದ ತುಟಿಗಳನ್ನು ಭದ್ರವಾಗಿ ಅದುಮಿ ಕೊಂಡು ಮಾತಾಡದೆ ಕುಳಿತಿದ್ದಳು, ಚಿನ್ನಮ್ಮ.

ಸ್ವಲ್ಪ ಹೊತ್ತು ಇಬ್ಬರೂ ನಿಶ್ಶಬ್ದವಾಗಿ ಅಲುಗಾಡದೆ ಕುಳಿತಿದ್ದರು. ಆದರೆ ಚಿನ್ನಮ್ಮ ನಡು ನೆತ್ತಿಯ ಮೇಲಿದ್ದ ಸೂರ್ಯನ ಬೇಗೆಯನ್ನು ತಡೆಯಲಾರದೆ, ತಲೆಯ ಮೇಲೆ ತನ್ನ ಸೆರಗನ್ನು ಎಳೆದುಕೊಂಡು, ತನ್ನ ಕುಕ್ಕೆಯಲ್ಲಿದ್ದ ರೊಟ್ಟಿ ಬೆಣ್ಣೆಯನ್ನು ತಿನ್ನಲಾರಂಭಿಸಿದಳು.

ಇದನ್ನು ಕಂಡ ಸೋಮಣ್ಣ, ಬೆಳಿಗ್ಗೆ ಬುಟ್ಟಿಯಲ್ಲಿ ತಂದಿದ್ದ ಹಣ್ಣು ಗಳ ಪೈಕಿ ಕೆಲವು ಒಳ್ಳೆಯ ಅಂಜೂರ, ದ್ರಾಕ್ಷೆ, ಸೀಬೆಹಣ್ಣನ್ನು ಅವಳ ಮುಂದಿಟ್ಟು, 'ರೊಟ್ಟಿಯ ಜತೆಗೆ ಸಂಜಿಕೊ ಚಿನ್ನಮ್ಮ' ಎಂದ.

'ನೀನೇ ತಿನ್ನು; ನನಗೆ ಬೇಡ. ನನಗೆ ರೊಟ್ಟಿಯೊಂದೇ ಸಾಕು.'

'ಈ ಬೇಗೆಗೆ ಅವು ತಂಪುಕೊಡುತ್ತಾವೆ. ಬಾಯಾರೋಲ್ಲ. ಬೆಳಗಿ ನಿಂದ ಸುತ್ತಿದ್ದೀಯಾ.'

'ಸೂಪ್ರೆಂಟ್ರು ಮನೇಲಿ ನೀರು ಕುಡಿದೆ. ನನಗೇನೇನು ಬಾಯಾ ರೋಲ್ಲ.'

'ನಿನ್ನಿಷ್ಟ' ಎಂತ ಹೇಳಿ ಸೋಮಣ್ಣ ಅವುಗಳನ್ನು ಬುಟ್ಟಿಯಲ್ಲಿಯೇ ಹಾಕಿದ.

ಸ್ವಲ್ಪ ಹೊತ್ತು ನಿಶ್ಶಬ್ದ. ಗಾಳಿ ಹೆಚ್ಚಾಗಿ ಬೀಸುತ್ತಿರಲಿಲ್ಲ. ದೋಣಿ ಮೆಲ್ಲಮೆಲ್ಲನೆ ಹೋಗುತ್ತಿತ್ತು.

ಸೋಮಣ್ಣ ಪುನಃ ಪ್ರಾರಂಭಿಸಿದ 'ಅವನ್ನು ನಿಮ್ಮ ತಾಯಿಗಾದರೂ ಕೊಡು.'

'ಮನೆಯಲ್ಲಿ ಬೇಕಾದಷ್ಟು ಇದೆ. ಆಗಿಹೋದರೆ ಎಲ್ಲಿಯಾದರೂ ಕೊಂಡು ತರ್ತೇನೆ.'

'ನಾನು ಕೊಟ್ಟಿದ್ದೆಂತ ಹೇಳಿ ನಿಮ್ಮ ತಾಯಿಗೆ ಕೊಡು.'

'ನೀನು ಯಾವೂರು ದಾಸಯ್ಯ? ಅಮ್ಮನೇನು ನಿನ್ನನ್ನು ಕಂಡಿದ್ದಾಳೆಯೋ?'

'ನಾನು ಯಾರೆಂತ ನೀನು ಹೇಳು.'

'ನೀನು ಯಾರೋ ನನಗೇನು ಗೊತ್ತು.'

ಈ ರೀತಿ ಅವಳು-ಅವನು ಯಾರೋ ನನಗೆ ಗೊತ್ತಿಲ್ಲವಂತ ಹೇಳಿದುದು ಇದೇ ಮೊದಲನೆಯ ಸಲವಲ್ಲ.

ಸುಮಾರು ಒಂದು ವರ್ಷದ ಕೆಳಗೆ, ಒಂದು ದಿನ ಸಂಜೆ ಸೋಮಣ್ಣ ಜೊತೆಗಾರರ ಸಂಗಡ ಲಗ್ಗೆಚೆಂಡು ಆಡ್ತಾ ಇದ್ದ. ಅಂದೇ ರಾಮಯ್ಯ ಚಿನ್ನಮ್ಮನನ್ನು ಮೊಟ್ಟಮೊದಲು ಕಂಡದ್ದು. ಚಿನ್ನಮ್ಮ ನದಿಯಿಂದ ನೀರು ಹೊತ್ತುಕೊಂಡು ಹೋಗುತ್ತಾ ಇದ್ದವಳನ್ನು ರಾಮಯ್ಯ ಕಣ್ಣು ಬಿಟ್ಟು ನೋಡಿ ಅವಳು ಹೋಗುತ್ತಿದ್ದ ಕಡೆಗೇನೆ ನೋಡಿದ. ತನ್ನ ಸುತ್ತ ಜನರಿದ್ದಾರೆ. ಅವರು ಏನೋ ಆಟ ಆಡ್ತಾ ಇದ್ದಾರೆ. ತಾವೊಂದೆರಡೆಜ್ಜೆ ಅತ್ತ ಹೋದರೆ, ಅವರ ಆಟದ ಎಲ್ಲೆ ಕಟ್ಟು ಬಿಟ್ಟು ಹೋಗೇನೆಂಬ ಅರಿವು ಸಹ ಇಲ್ಲದೆ, ಅವರೇನೆಂದುಕೊಂಡಾರು ಎಂಬುದನ್ನೂ ಗಮನಿಸಿದೆ, ನೋಡುತ್ತಾ ನಿಂತುಬಿಟ್ಟಾಗ, ಬೆನ್ನ ಮೇಲೆ ಲಗ್ಗೆ ಚೆಂಡಿನ ಏಟು ಫಟ್ ಎಂತ ಬಿದ್ದಾಗ, ಹಿಂತಿರುಗಿ ನೋಡಲು, 'ಕಂಡವರ ಹೆಣ್ಣುಮಕ್ಕಳನ್ನು ಹಾಗೆ ದುರುಗುಟ್ಟಿ ರೀತಿ, ರಂಗು ಇಲ್ಲದೆ ನೋಡೋದು ಒಳ್ಳೆ ಲಕ್ಷಣವಲ್ಲ' ಎಂತ ಸೋಮಣ್ಣನಿಂದ ಹೀಯಾಳಿಸಲ್ಪಟ್ಟಿದ್ದ. ತನ್ನನ್ನು ಮದುವೆಯಾಗುವುದಿಲ್ಲವೆಂತ ಚಿನ್ನಮ್ಮ ಪಟ್ಟುಹಿಡಿಯಲು, ತನಗೆ ಲಗ್ಗೆ ಚೆಂಡಿನಿಂದ

ಹೊಡೆದವನು, ಏನಾದರೂ, ಆಕೆ ಮನಸ್ಸಿಗೆ ಒಪ್ಪಿದವನೇ ಎಂತ ರಾಮಯ್ಯ ಕೇಳಲು, ಈ ವಿಚಾರವನ್ನೆಲ್ಲಾ ಕೂಲಂಕುಶವಾಗಿ ತಿಳಿದಿದ್ದರೂ, ಚಿನ್ನಮ್ಮ 'ಅವನಾರೋ, ನನಗೇನು ಗೊತ್ತು' ಎಂದಿದ್ದಳು.

ಅಂದು ಒಬ್ಬ ಹೆಣ್ಣು ಮಗಳನ್ನು ಆ ರೀತಿ ನೋಡುವುದು ಯುಕ್ತವಲ್ಲೆಂದು ಎಚ್ಚರಿಸಿದ ಸೋಮಣ್ಣನೂ, ಅಂದು ಯಾರ ವಿಷಯವಾಗಿ ಆ ಮಾತು ಬಂತೋ,ಆಕೆಯೂ,ಇಂದು ಪರಸ್ಪರ ಅಪರಿಚಯಸ್ಥರಂತೆ, ಬದ್ಧದ್ವೇಷಿಗಳಂತೆ ಕುಳಿತಿದ್ದರು. ಆದರೆ ಅವರ ಹೃದಯವೋ? ಯಾವಾಗಲೂ ನಗುಮೊಗನಾಗಿರುತ್ತಿದ್ದ ಸೋಮಣ್ಣನ ಮುಖ ಸಹ ಗಂಭೀರವಾಗಿತ್ತು. ಆದರೆ ಅವನ ಹೃದಯದ ಆಂದೋಳನವನ್ನು ಅವನ ಕೈಗಳು ತೋರಿಸುತ್ತಿದ್ದುವು. ಅವನು ಹುಟ್ಟುಹಾಕುವ ಜೋರಿನಿಂದ ನೀರು ಬುಗ್ಗೆ ಬುಗ್ಗೆಯಾಗಿ, ನೊರೆ ನೊರೆಯಾಗಿ, ಹಾರಿ ಹಾರಿ, ಚಿನ್ನಮ್ಮನ ಮೇಲೆ ಬೀಳುತ್ತಿತ್ತು. ಆಕೆಯೋ? ಇದನ್ನಾವುದನ್ನೂ ಗಮನಿಸದವಳಂತೆ ಕುಳಿತಿದ್ದರೂ ನೀರಲ್ಲಿ ಕೈಯದ್ದಿ ಸುಡುತ್ತಿದ್ದ ತನ್ನ ಕೆನ್ನೆಗಳನ್ನು ಒರಸಿಕೊಳ್ಳಲು ಯತ್ನಿಸುತಿದ್ದಳಾದರೂ ಆಕೆಯ ಹೃದಯವು ಕುಣಿಯುತ್ತಿತ್ತು.

ಇಷ್ಟು ಹೊತ್ತಿಗೆ ನಡು ನದಿಗೆ ದೋಣಿ ಬಂದಿತ್ತು. ನದಿಯಲ್ಲಿ ಬೇರೆ ಯಾವ ದೋಣಿಯೂ ಇರಲಿಲ್ಲ.

ಇದ್ದಕ್ಕಿದ್ದಂತೆ ಸೋಮಣ್ಣ ಹುಟ್ಟುಗಳನ್ನು ಬಿಟ್ಟುಬಿಟ್ಟ. ಚಿನ್ನಮ್ಮ ತಿರುಗಿ ಅವನ ಕಡೆಗೆ ನಿರ್ಭಯದಿಂದ ನೋಡಿದಳು.

'ಇನ್ನು ನಾನು ಹೆಚ್ಚು ತಡೆಯಲಾರೆ. ಇದುವರೆಗೆ ನಾನು ಸಾಯದಿರುವುದೇ ನನಗೆ ಆಶ್ಚರ್ಯ ಉಂಟುಮಾಡುತ್ತಿದೆ. ನಾನಾರೋ? ನನಗೇನು ಗೊತ್ತು-ಎಂದು ಹೇಳುತ್ತೀಯಲ್ಲಾ. ನಾನು ಯಾರು ಗೊತ್ತಿಲ್ಲವೇ ನಿನಗೆ! ನಾನು ದಿಕ್ಕಿಲ್ಲದ ಪರದೇಶಿಯೋ? ಮನೆಮಠ ಇಲ್ಲವೋ. ನಿನ್ನಂತೆ ಇದೇ ದ್ವೀಪದಲ್ಲಿ ಹುಟ್ಟಿಬೆಳೆದವನಲ್ಲವೇ? ನಿನ್ನ ಬಳಿ ನಾನು ಎಷ್ಟು ಬಾರಿ ಮಾತನಾಡಬೇಕೆಂದು ಬಂದಿಲ್ಲ. ನಾನು ಬಂದಾಗಲೆಲ್ಲಾ ನಿನ್ನ ಮೂತಿಯನ್ನು ತಿರುವಿ, ಮಾತನಾಡಲು ಸಹ ಅವಕಾಶಕೊಡದೆ, ಈಗ ನಾನಾರೆನ್ನುತ್ತೀಯಾ?'

'ನೀನೇನೋ ನನ್ನ ಕೂಡೆ ಮಾತನಾಡಲು ಇಷ್ಟಪಟ್ಟಿರಬಹುದು. ಆದರೆ ನಾನೋ? ಅಷ್ಟೇ ಅಲ್ಲ....ಆಡಿಕೊಳ್ಳುವವರ ಬಾಯಿಗೆ ಅಗ್ಗಕ್ಕೆ

ನಾನು ಸಿಕ್ಕಬೇಕೆಂದೂ ನನ್ನ ಇಚ್ಛೆ ಇಲ್ಲ. ನಾನು ನಿನ್ನ ಮದುವೆಯಾಗ ಲೊಲ್ಲೆ. ನಾನು ಮದುವೇನೇ ಒಲ್ಲೆ.'

'ಮದುವೇನೇ ಬೇಡ! ಹೀಗೆ ಹೇಳಿದ ಮಹರಾಯರು ಪುರಾಣದಲ್ಲಿ ಯಾಗಲೀ, ಇತಿಹಾಸದಲ್ಲಿಯಾಗಲೀ, ಶಾಸ್ತ್ರಗಳಲ್ಲಾಗಲೀ, ಇದುವರೆಗೆ ಯಾರೂ ಇಲ್ಲ. ರಾಮಯ್ಯ ಬೇಡವಾಗಿತ್ತು; ಬೇಡ-ಎಂದೆ. ಒಪ್ಪಿಕೊಳ್ಳು ತ್ತೇನೆ. ಆದರೆ ಎಷ್ಟು ದಿನ ಹೀಗೆ ನಡೆದೀತು. ಬುಧಾ ತಿರುಗಿದಾಗ ಯಾರು ಸಿಕ್ಕಿದರೆ ಅವರೇ ಸರಿಯೇನೋ.'

'ಅದೆಲ್ಲ ನಿನಗೇಕೆ? ಮುಂದೆ ನಡೆಯೋದನ್ನು ಕಂಡವರಾರು?'

'ಅದೆಲ್ಲಾ ನನಗೇಕೆ! ಅದೇನು ಹಾಗೆ ಹೇಳ್ತೀಯಾ! ನಿನಗೇನು ಗೊತ್ತಿಲ್ವಾ? ನನಗಿಂತ ಹೆಚ್ಚು ವಿಶ್ವಾಸ ಯಾರ ಮೇಲಾರೂ ನೀನಿಟ್ಟಿ-ಅವನ ರಕ್ತ ಕುಡಿಯದಿದ್ದರೆ ನಾನು ಯಾಕಾದೇನು?' ಎಂತ ಸೋಮಣ್ಣ ಎದ್ದು ನಿಂತ.

'ನಾನೇನು ನಿನ್ನ ಮದುವೆಯಾಗ್ತೇನೆ ಎಂತ ಮಾತು ಕೊಟ್ಟಿದ್ದೇ ನೆಯೇ? ನಿನಗೆ ನನ್ನ ಹುಚ್ಚು ಹಿಡಿದರೆ ನಾನು ಹೊಣೆಯೇ? ನನ್ನ ಮೇಲೆ ನಿನ್ನ ಅಧಿಕಾರ ಏನು ನಡಿತದೆ?'

'ಅದೆಲ್ಲಾ ನನಗೂ ಗೊತ್ತಿದೆ. ನನ್ನ ಹಕ್ಕು ಎಲ್ಲೂ ಬರೆದಿಲ್ಲ. ಆದರೆ ತಿಳಕೋ, ಪ್ರಪಂಚದಲ್ಲಿ ನಿನ್ನ ಕೈ ಹಿಡಿಯೋಕೆ ಇನ್ನೊಬ್ಬನಿಗೆ ಎಷ್ಟು ಅಧಿಕಾರ ಇದೆ, ಅಷ್ಟು ನನಗೂ ಇದೆ. ನಾನೇನು ತಲೆಗೆ ಬಟ್ಟೆ ಇಲ್ಲದ ವನೇ? ಪುಂಡನೇ? ಪೋಕರಿಯೆ? ಹೇಡಿಯೆ? ನೀನು ಇನ್ನೊಬ್ಬನ ಕೈ ಹಿಡಿ ಯೋದನ್ನ ನಾನು ನೋಡಿಕೊಂಡು ಸಹಿಸ್ತೇನೆ-ಎಂತ ತಿಳಿದೆಯಾ?'

'ನಿನ್ನ ಗೊಡ್ಡು ಬೆದರಿಕೆಗೆ ನಾನು ಹೆದರುತ್ತೇನೆ ಅಂತ ಅಂದು ಕೊಂಡಿದೀಯ. ನಾನು ಮನಸ್ಸು ಮಾಡಿದೇನೆ. ನಾನು ಮದುವೆಯಾಗೋ ದಿಲ್ಲ ಎಂತ.'

'ಚಿನ್ನ, ನನ್ನ ಹೆಚ್ಚು ರೇಗಿಸಬೇಡ. ನಿನ್ನಂಥ ಹುಡುಗಿಯಿಂದ ನನ್ನ ಜೀವನವೆಲ್ಲಾ ಹಾಳಾಗುವುದಕ್ಕೆ ನಾನು ಅವಕಾಶ ಕೊಡುತ್ತೇನೆ ಎಂತಾ ಅಂದುಕೊಂಡೆಯೋ. ನೋಡು ನನ್ನ ಕೈಲಿದ್ದೀಯ ಇಲ್ಲಿ. ನಾನು ಹೇಳಿದ ಹಾಗೆ ಕೇಳುವ ಹಾಗೆ ಮಾಡ್ತೇನೆ.'

ಆಕೆಯ ಹೃದಯದಲ್ಲಿ ಭಯ ಚಲನವಾಯಿತು. ಆದರೂ ಧೈರ್ಯ

ತಂದುಕೊಂಡು ಹೇಳಿದಳು-'ಕೈಲಾಗದ ಸ್ತ್ರೀಯರನ್ನು ಹೆದರಿಸಿ ಮಾನ ತೆಗೆಯುವ ಗಂಡಸರು ಎಷ್ಟು ನೀಚರೆಂಬುದನ್ನು ನೀನೇ ನೋಡಿಕೋ. ಹೆಂಗಸರು ಮನಸ್ಸು ಮಾಡಿದರೆ ಅವರಿಗೆ ಪ್ರಾಣ ಹುಲ್ಲು ಕಡ್ಡಿಗಿಂತ ಕಡೆ-ತಿಳಕೋ. ಇಲ್ಲಿ ಸಹಾಯಕ್ಕೆ ಯಾರೂ ಇಲ್ಲ. ಬಾಯಿಗೆ ಬಂದ ಹಾಗೆ ಆಡ್ತೀಯಾ.'

'ಇನ್ನು ನನ್ನ ಕೆಣಕಬೇಡ. ನಿನ್ನ ಮೇಲೆ ನನ್ನ ಮನಸ್ಸು ನಟ್ಟು ಹೋಗಿದೆ. ನೀನು ಮಾತ್ರ ಪ್ರಾಣಬಿಡುವುದಕ್ಕೆ ಸಿದ್ಧವಾಗಿರುವಂತೆಯೂ, ನನಗೆ ಅದರಲ್ಲಿ ಹೆಚ್ಚು ಆಸಕ್ತಿ ಇದೆ ಎಂದೂ ತಿಳಿದಿಯಾ? ನೀನಿಲ್ಲದ ಜೀವ ನಿರ್ಜೀವ. ಈ ಕಾವೇರಿ ತಾಯಲ್ಲಿ ಇಬ್ಬರಿಗೂ ಜಾಗ ಇದೆ ಬಾ' ಎಂತ ಸೋಮಣ್ಣ ಹೇಳಿ, ಅವಳನ್ನು ಬಾಚಿ ತಬ್ಬಿಕೊಂಡ. ಆದರೆ ತಕ್ಷಣ ತನ್ನ ಬಲಗೈ ಹಿಂದಕ್ಕೆಳಕೊಂಡ. ರಕ್ತ ಚಿಮ್ಮುವುದಕ್ಕೆ ಪ್ರಾರಂಭವಾಯ್ತು. ಚಿನ್ನಮ್ಮ ಅವನ ಕೈಯನ್ನು ಬಲವಾಗಿ ಕಚ್ಚಿ ಕಿತ್ತುಬಿಟ್ಟಿದ್ದಳು.

'ಹಾ! ನಾನು ನೀನು ಹೇಳಿದಂತೆ ಕೇಳಬೇಕೆ?' ಎಂತ ಹೇಳಿ ಅವನನ್ನು ತಳ್ಳಿ, 'ನಾನು ನಿನ್ನ ಅಧೀನದಲ್ಲಿ ಇರುತ್ತೇನೆಂದು ತಿಳಿದೆಯಾ' ಎಂತ ಒಂದೇ ಹಾರಿಗೆ ನದಿಗೆ ನೆಗೆದು ಮುಳುಗಿದಳು. ಆದರೆ ಒಡನೆಯೇ ಮೇಲೆದ್ದಳು. ತಲೆಕೂದಲು ಬಿಚ್ಚಿ ಮೈಮೇಲೆಲ್ಲಾ ಹರಡಿತ್ತು. ಸೀರೆ ನೆನೆದು ಭಾರ ಹೆಚ್ಚಾಗಿ ಈಜಲು ತೊಂದರೆಯಾದರೂ ಸಹ ನೋಡದೆ, ಮರುಮಾತಾಡದೆ ಹಿಂದಿರುಗದೆ ದ್ವೀಪಕ್ಕೆ ಈಜಲು ಆರಂಭಿಸಿದಳು.

ಭಯದಿಂದ ಭ್ರಮೆಹಿಡಿದ ಸೋಮಣ್ಣ ಒಂದು ಕ್ಷಣಕಾಲ ಹಾಗೇ ನಿಂತಿದ್ದ. ತಕ್ಷಣ ಜ್ಞಾನತಂದುಕೊಂಡು, ತನ್ನ ಶಕ್ತಿಯನ್ನೆಲ್ಲಾ ಮೀರಿಸಿ ಹುಟ್ಟು ಹೊಡೆದು, ಒಂದು ಕ್ಷಣದಲ್ಲಿ ಅವಳ ಬಳಿ ಹೋದನು.

'ಚಿನ್ನಮ್ಮಾ, ದೇವರಾಣೆ: ನಿನ್ನ ಪಾದದಾಣೆ. ನಾನು ಏನೂ ಮಾಡೋಲ್ಲ. ದೋಣಿ ಹತ್ತು. ನನಗೆ ಬುದ್ಧಿ ಇಲ್ಲದೆ ಹಾಗೆ ಮಾಡಿದೆ. ನಿನ್ನ ತಂಟೆಗೆ ನಾನಿನ್ನು ಬರುವುದಿಲ್ಲ. ನಾನು ಮಾಡಿದ್ದು ತಪ್ಪು ನನ್ನನ್ನು ಕ್ಷಮಿಸು ಎಂತ ನಾನು ಕೇಳಿಕೊಳ್ಳುವುದಕ್ಕೂ ನಾಲಿಗೆ ಇಲ್ಲದ ಹಾಗೆ ಮಾಡಿಕೊಂಡೆ. ನಿನ್ನ ಕಾಲಿಗೆ ಬೀಳ್ತೀನಿ ಬಾ. ನಿನ್ನ ಮಾನ ನಾನು ಕಳೆಯೋಕೆ ಹೋದ ಹಾಗೆ, ನನ್ನ ಮೊಗ ನೀ ಕಳೀಬೇಡ'.

ಚಿನ್ನಮ್ಮ ತನಗೆ ಈ ಮಾತು ಕೇಳಿಸದ ಹಾಗೆ ಈಜುತ್ತಿದ್ದಳು.

'ನಿನ್ನಾಣೆ ಚಿನ್ನಮ್ಮ, ದಡ ಬಹಳ ದೂರ ಇದೆ. ನೀನು ಈಜಲಾರೆ. ನಿಮ್ಮ ತಾಯಿಯನ್ನು ನೆನಸಿಕೊ. ನೀನು ದೋಣಿ ಹತ್ತದಿದ್ದರೆ ನಾನೂ ಬಿದ್ದು ಪ್ರಾಣ ಬಿಡುತ್ತೇನೆ'.

ಚಿನ್ನಮ್ಮ ದಡ ನೋಡಿ ದೂರವನ್ನು ಅಳತೆ ಮಾಡಿ ಅವನ ನುಡಿಯ ಧ್ವನಿಯಿಂದ ಅದರ ನಿಜಾಂಶವನ್ನರಿತು, ಮರುಮಾತಾಡದೆ ದೋಣಿಯ ಪಕ್ಕಕ್ಕೆ ಬಂದು ಅಂಚನ್ನು ಹಿಡಿದುಕೊಂಡಳು. ಅವನು ಅವಳಿಗೆ ಸಹಾಯ ಮಾಡಲು ಏಳುವುದರೊಳಗೆ ಅವಳ ಭಾರದಿಂದ ದೋಣಿ ವಾಲಿ ಹಲಗೆಯ ಮೇಲಿದ್ದ ಅವನ ಅಂಗಿ, ಅದರ ಒಳಜೇಬಿನ ದುಡ್ಡು ಸಮೇತ ನದಿಯ ಪಾಲಾಯಿತು. ಅವನು ಸಹಾಯ ಮಾಡುವ ಮೊದಲೇ ದೋಣಿಯೊಳಗೆ ಬಂದು, ತಾನು ಮೊದಲು ಕುಳಿತಿದ್ದ ಕಡೆ ಕುಳಿತಳು. ಆಕೆ ಕುಳಿತ ಒಡನೆ ಸೋಮಣ್ಣ ಹುಟ್ಟು ಹಾಕಲಾರಂಭಿಸಿದ. ಆಕೆ ತನ್ನ ತಲೆ, ಬಟ್ಟೆಗಳನ್ನು ಹಿಂಡಿಕೊಳ್ಳುತ್ತಾ ದೋಣಿಯಲ್ಲಿ ನೋಡುತ್ತಾಳೆ—ರಕ್ತ ಪ್ರವಾಹ, ತಾನು ಕಚ್ಚಿದ ಅವನ ಕೈಯನ್ನೂ ನೋಡಿದಳು. ಕೈಗೆ ಏನೂ ಅಪಾಯವಾಗಿಲ್ಲ ದವನಂತೆ ಸೋಮಣ್ಣ ಹುಟ್ಟು ಹೊಡೆಯುತ್ತಿದ್ದ. ಅವನ ಗಾಯವನ್ನು ನೋಡಿ 'ಇದನ್ನು ತೆಗೆದುಕೊ' ಎಂದು ತನ್ನ ಸಿಂಬಿ ಚೌಕವನ್ನು ಅವನ ಕಡೆ ನೀಡಿದಳು.

ಸೋಮಣ್ಣ ತಿರುಗಿ ಸಹ ನೋಡಲಿಲ್ಲ. ತಲೆ ಅಲ್ಲಾಡಿಸಿ ಎಂದಿನಂತೆ ಹುಟ್ಟು ಹೊಡೆಯುತ್ತಿದ್ದ. ಒಂದೊಂದು ಬಾರಿ ಹುಟ್ಟನ್ನೂ ಎಳೆದಾಗಲೂ ರಕ್ತ ಚಿಮ್ಮುತಿತ್ತು. ಇದನ್ನು ನೋಡಿ ಚಿನ್ನಮ್ಮ ಎದ್ದು ಅವನ ಬಳಿ ಹೋಗಿ ಅವನು ಬೇಡವೆಂತ ಅಡ್ಡಿ ಮಾಡಿದರೂ, ಒದ್ದೆ ಮಾಡಿದ ತನ್ನ ಬಟ್ಟೆಯನ್ನು ಅವನ ಕೈಗೆ ಬಿಗಿಯಾಗಿ ಸುತ್ತಿ, ಅವನು ತಡೆದರೂ ಬಿಡದೆ, ಅವನ ರಕ್ತ ದಿಂದ ತೊಯ್ದು ಹುಟ್ಟನ್ನೇ ಹಿಡಿದು, ಅವನಿಗೆ ಎದುರಾಗಿ ಕುಳಿತು, ಅವನ ಕಡೆ ನೋಡದೆ ರಕ್ತವಾಗಿದ್ದ ಹುಟ್ಟನ್ನೇ ನೋಡುತ್ತಿದ್ದಳು.

ದಡದ ಬಳಿಗೆ ಬರುವಾಗ ಪೇಟೆ ಸಮೀಪದಲ್ಲಿದ್ದ ಜನರು ಇವರನ್ನು ಕಂಡು ಹಾಸ್ಯಮಾಡಲಾರಂಭಿಸಿದರು. ಆದರೆ ಅವರಿಬ್ಬರೂ ಮರುಮಾತಾ ಡದೆ ದೋಣಿಯಿಂದ ದಡಕ್ಕೆ ಬಂದರು.

ಸೋಮಣ್ಣ ತನ್ನ ಮನೆಗೆ ಬಂದನು. ಅವನ ಪಾಲಿನ ಪ್ರಪಂಚವೇ ಶೂನ್ಯವಾಗಿತ್ತು. ಅವನು ಮಾಡಿದ ವಿಚಾರಹೀನತೆಯ ಕಾರ್ಯದಿಂದ

ಚಿನ್ನಮ್ಮನನ್ನು ತಾನು ಪಡೆಯುವ ವಿಷಯ ಕನಸಿನ ಗಂಟಿನಂತೆ ಆಗಿತ್ತು.

ಆ ಮಧ್ಯೆ ಕೈಬಾಧೆ ಕೊಡುತ್ತಿತ್ತು. ಮೆಲ್ಲನೆ ತನ್ನ ಎಡಗೈಯಿಂದ ಗಾಯದ ಕಟ್ಟನ್ನು ಬಿಚ್ಚಲು, ಪುನಃ ರಕ್ತ ಚಿಮ್ಮಲು ಪ್ರಾರಂಭವಾಯ್ತು. ಕೈನಾಡಿ ನೀಲಿ ಬಣ್ಣಕ್ಕೆ ಬಂದಿತ್ತು.

ಗಾಯವನ್ನು ಪುನಃ ತೊಳೆದು ನೋಡುತ್ತಾನೆ. ಚಿನ್ನಮ್ಮನ ಹಲ್ಲುಗಳು, ಸಿಂಹದ ಕೋರೆದಾಡೆಗಳಿಗಿಂತ ಅತಿಶಯವಾಗಿ ಕೆಳಗೆ, ಮೇಲೆ, ನಾಲ್ಕು ನಾಲ್ಕು ಬಿದ್ದಿದ್ದವು. ಒಂದಷ್ಟು ಮಾಂಸವೇ ಕಿತ್ತುಬಂದಿತ್ತು.

'ಚಿನ್ನಮ್ಮ ಮಾಡಿದುದುದು ಸರಿ. ನಾನು ಪಶುವಿನಂತೆ ವರ್ತಿಸಿದ್ದೆ. ಅದಕ್ಕೆ ಇದು ಸರಿಯಾದ ಶಿಕ್ಷೆ. ಅಸಹಾಯಕಳಾದ ಮನೆತನದ ಹೆಣ್ಣು ಮಗಳ ಮೇಲೆ, ನನ್ನ ರಕ್ಷಣೆಯಲ್ಲಿದ್ದಾಗ, ನಾನು ಜ್ಞಾನಶೂನ್ಯನಾಗಿ ವರ್ತಿಸಿದುದಕ್ಕೆ ಸಾಯುವವರೆಗೂ ಗುರುತು ಬಿದ್ದು ಹೋಗುವಂತೆ ಸರಿಯಾದ ಶಿಕ್ಷೆ ವಿಧಿಸಿದಾಳೆ'—ಎಂತ ಹೇಳಿಕೊಂಡು, ಸಿಂಬಿಗಾಗಿ ಸುತ್ತಿದ್ದ ವಸ್ತ್ರವನ್ನು ನಾಳೆ ಕಳುಹಿಸುತ್ತೀನಿ ಎಂತ ಹೇಳಿ ಎಡಗೈಯಲ್ಲಿ ಒಗೆದುಹಾಕಿದ.

ಆ ಮೇಲೆ ತನ್ನ ಕೈಯಲ್ಲಿ ಸಾಧ್ಯವಾದ ಮಟ್ಟಿಗೆ ಗಾಯವನ್ನು ಕಟ್ಟಿಕೊಂಡ. ಅಸಡ್ಡೆಯಾಗಿ ಕಾಣದಿರುವಷ್ಟು ರಕ್ತ ಸ್ರಾವವಾದುದರಿಂದ ಆಯಾಸ ಉಂಟಾಗಿ, ಹಾಗೆಯೇ ಮತ್ತು ಬಂದವನಂತೆ ನಿದ್ರಿಸಿದ.

ನೋವಿನ ಭರದಿಂದ ಎಚ್ಚರಿಕೆ ಆಯಿತು. ನೋಡುತ್ತಾನೆ-ಚಿನ್ನಮ್ಮ ಮುಂದೆ ನಿಂತಿದಾಳೆ. ಚಂದ್ರೋದಯವಾಗಿದೆ.

ಚಿನ್ನಮ್ಮ ಮಾತಾಡದೆ ಅವನಲ್ಲಿಗೆ ಬಂದು, ತಾನು ತಂದಿದ್ದ ಬುಟ್ಟಿಯನ್ನು ಅವನ ಬಳಿ ಇಟ್ಟಳು.

'ಬುಟ್ಟಿಯನ್ನು ಕೊಂಡೊಯ್ಯಲು ನೀನು ಬರಬೇಕಾದ ಪ್ರಮೇಯವಿರಲಿಲ್ಲ. ನಾನು ಚೌಕವನ್ನೂ ಒಗೆದು ಒಣಗಿ ಹಾಕೀದೇನೆ. ನಾಳೆ ನಾನೇ ಕೊಟ್ಟು ಕಳುಹಿಸುತ್ತಿದ್ದೆ.

ನಾನು ಬಟ್ಟೆಗಾಗಿ ಬರಲಿಲ್ಲ. ಗಾಯಕ್ಕೆ ಮದ್ದುಸೊಪ್ಪು ತರಲು ಅಡವಿಗೆ ಹೋಗಿದ್ದೆ. ಇಲ್ಲಿ ನೋಡು ಎಂತ ಬುಟ್ಟಿಯಲ್ಲಿರುವ ಮಚ್ಚಳ ಓರೆಮಾಡಿದಳು, ಚಿನ್ನಮ್ಮ!

ದೈನ್ಯ ಧ್ವನಿಯಿಂದ ಸೋಮಣ್ಣ ಹೇಳಿದನು, 'ಇಷ್ಟು ಶ್ರಮವನ್ನು ನನಗಾಗಿ ನೀನು ತೆಗೆದುಕೊಳ್ಳಬೇಕಾಗಿದ್ದಿಲ್ಲ. ಚಿನ್ನಮ್ಮಾ, ನಾನು ಅದಕ್ಕೆ

ಅಯೋಗ್ಯ. ನನಗೆ ಗುಣವಾಗಲಿಲ್ಲವೆಂತ ಇಟ್ಟುಕೊ. ಅದು ನನಗೆ ಸರಿಯಾದ ಪ್ರಾಯಶ್ಚಿತ್ತ-ನಾನು ಇಂದು ಮಾಡಿದುದು ತಪ್ಪು. ಬುದ್ಧಿ ಇಲ್ಲದೆ ಮಾಡಿದೆ, ಕ್ಷಮಿಸು. ಇಷ್ಟು ಹೊತ್ತಿನಲ್ಲಿ ಬಂದಿದೀಯಲ್ಲ. ಇಲ್ಲಿ ಯಾರಾದರೂ ನಿನ್ನನ್ನು ಕಂಡರೆ ಅವರ ಬಾಯಿಗೆ ಹದ್ದೇ ಇಲ್ಲವೆಂದು ನಿಂಗೆ ತಿಳಿಯದೇ?'

'ಯಾರು ಏನಾದರೂ ಹೇಳಿಕೊಳ್ಳಲಿ. ನನಗೇನು? ನಾನು ನಿನ್ನ ಕೈ ನೋಡಲು ಬಂದೆ. ಔಷಧಿ ಹಾಕುತ್ತೇನೆ. ಎಡಗೈಯಲ್ಲಿ ನೀನು ಔಷಧಿ ಕಟ್ಟಿಕೊಳ್ಳಲು ಸಾಧ್ಯವೇ?''

'ಬೇಡ, ಅದಕ್ಕೆ ಅಷ್ಟು ಉಪಚಾರಬೇಡ; ಗಾಯ ಬಹಳವಾಗಿಲ್ಲ.

'ಹಾಗಾದರೆ ನಾನು ನೋಡಿ ಗಾಯ ಹೆಚ್ಚಾಗಿಲ್ಲದಿದ್ದರೆ ಹೊರಟು ಹೋಗುತ್ತೇನೆ'

ಬಲವಂತದಿಂದ ಅವನ ಕೈ ಎಳೆದು, ಕಟ್ಟುಬಿಚ್ಚಿ ನೋಡುತ್ತಾಳೆ- ಕೈ ಪೂರಾ ಊದಿ, ಗಾಯ ವಿಪರೀತವಾಗಿತ್ತು! ಕಂದು ಬಣ್ಣಕ್ಕೆ ತಿರುಗಿ, ನೋಡಲು ಭಯಂಕರವಾಗಿತ್ತು.

'ಅಬ್ಬಾ! ಅಬ್ಬಾ'

'ಏನೂ ಇಲ್ಲ. ಎಲ್ಲೋ ಸ್ವಲ್ಪ ಗಾಯವಾಗಿದೆ, ನಾಳೆ ವಾಸಿಯಾಗುತ್ತೆ.

ಚಿನ್ನಮ್ಮ ತಲೆ ಅಲ್ಲಾಡಿಸಿದಳು. ಇನ್ನೊಂದು ವಾರಕ್ಕೆ ಮೊದಲು ಅವನು ಹುಟ್ಟು ಹಿಡಿಯಲಾರನೆಂದು ಅವನ ಗಾಯವನ್ನು ಬಿಚ್ಚಿ, ತೊಳೆದ ಸೊಪ್ಪನ್ನು ಅರೆದು ರಸವನ್ನು ಲೇಪಿಸಿ ಕಟ್ಟುಕಟ್ಟಿದಳು. ಗಾಯದ ಉರಿ, ನೋವು ಸ್ವಲ್ಪ ಕಡಿಮೆಯಾಯಿತು. ಗಾಯ ಕಟ್ಟಿ ಆದಮೇಲೆ ಸೋಮಣ್ಣ 'ಚಿನ್ನಮ್ಮಾ, ನೀನು ನನ್ನಿಂದ ಅವಮಾನ ಹೊಂದಿದ್ದರೂ ಪುನಃ ನನ್ನ ಮನೆಗೆ ಬಂದು ನನಗೆ ಉಪಕಾರಮಾಡಿದೀಯ; ನಿನ್ನದು ದೊಡ್ಡ ತರಹ. ನನ್ನ ತಪ್ಪು ಮನ್ನಿಸು ಎಂತ ಪುನಃ ಕೇಳಿಕೊಳ್ಳುತ್ತೇನೆ. ನನಗೆ ಆಗ ಹುಚ್ಚು ಹಿಡಿದಂತೆ ಆಗಿಬಿಟ್ಟಿತ್ತು. ಅದು ಹೇಗೆ ಆಯಿತೋ ನನಗೇನೆ ಗೊತ್ತಿಲ್ಲ. ನನ್ನನ್ನು ನಾನೇ ಮರೆತುಬಿಟ್ಟೆ. ಇನ್ನುಮೇಲೆ ಎಂದೂ ಹಾಗೆ ಮಾಡೋಲ್ಲ. ನಿನ್ನ ಸಂಗಡ ಮಾತನ್ನು ಆಡಿ ನಿನ್ನ ಸಂಕಟ ಪಡಿಸೋದಿಲ್ಲ.'

ಚಿನ್ನಮ್ಮ ನಡುವೆ ಬಾಯಿಹಾಕಿದಳು. 'ತಪ್ಪು ತೀರ ನನ್ನದು. ನಾನು ಕ್ಷಮೆಕೇಳಬೇಕು. ನಾನು ಹಾಗೆ ಒರಟಾಗಿ ಉತ್ತರಹೇಳಿ, ನಿನಗೆ ಕೋಪ

ಬರುವಂತೆ ಮಾಡಬಾರದಾಗಿತ್ತು.'

'ನನ್ನ ಕೈ ಕಚ್ಚಿದೆ. ಅದು ನಿನ್ನ ಮಾನ ಸಂರಕ್ಷಣೆಗೆ ಮಾಡಿದ ಉಪಾಯ; ಅದೇ ನನ್ನ ಕಣ್ಣು ತೆರೆಯಿತು. ನಿನಗೆ ನಾನು ಋಣಿ. ನಿನ್ನ ಬಟ್ಟೆ ತೆಗೆದುಕೊಂಡುಹೋಗು'.

ಆದರೂ ಆಕೆ ಅದನ್ನೂ ತೆಗೆದುಕೊಳ್ಳಲಿಲ್ಲ. ಆಕೆಯ ಮನಸ್ಸಿನಲ್ಲಿ ಇನ್ನೂ ಏನೋ ಹೇಳುವ ವಿಷಯ ಉಳಿದಿದ್ದಂತೆ ತೋರಿತು. ಕೊನೆಗೆಂದಳು 'ನಿನ್ನ ಅಂಗಿ ಮತ್ತು ಅದರಲ್ಲಿನ ದುಡ್ಡು ಸಹ ಹೊರಟುಹೋಯಿತು. ಅದು ನನ್ನ ತಪ್ಪು ಅದು ನನಗೆ ಆ ಮೇಲೆ ನೆನಪಿಗೆ ಬಂತು. ಆ ಹಣ ನಾನೀಗ ಕೊಡಲಾರೆ. ನನ್ನಲ್ಲಿ ಇಲ್ಲ. ಇದ್ದದೂ ನನ್ನದಲ್ಲ. ಆದರೆ ಈ ಗುಂಡಿನ ಸರ ತೆಗೆದುಕೊ. ನಿನ್ನ ಕಳೆದು ಹೋದ ಹಣ ಇದಕ್ಕೆ ಸರಿಹೋಗಬಹುದು. ನಮ್ಮ ತಾಯಿ ಕೇಳಿದರೆ ಕಳೆದುಹೋಯಿತು ಎನ್ನುತ್ತೇನೆ. ಸರಿಹೋಗದಿದ್ದರೆ, ನಿನ್ನ ಋಣ ಎಂದಾದರೂ ತೀರಿಸುತ್ತೇನೆ.'

'ನಾನು ಒಲ್ಲೆ.'

'ನೀನು ತೆಗೆದುಕೊಳ್ಳಲೇಬೇಕು.'

'ಹೂಂ, ಊ'

'ಇದು ನಿನಗೆ. ನನ್ನಿಂದ ಸಲಬೇಕಾದ ಋಣಕ್ಕೆ ನಿನ್ನಿಂದ ನನಗೇನೂ ಬಾಕಿ ಇಲ್ಲ ಇನ್ನೊಂದು ಬೇಡುತ್ತೇನೆ-ಇನ್ನು ಮೇಲೆ ನನ್ನನ್ನು ನೀನು ಬೀದಿಯಲ್ಲಿ ಕಂಡರೆ ನನ್ನ ಕಡೆ ನೋಡಬ್ಯಾಡ. ನನ್ನ ಕಡೆ ನೋಡಿದರೆ ನಾನು ಮಾಡಿದ ಅಪರಾಧವನ್ನು ಜ್ಞಾಪಿಸಿಕೊಟ್ಟಂತಾಗುತ್ತೆ. ನನ್ನನ್ನು ಮನ್ನಿಸು; ಹೋಗು'.

ಚಿನ್ನಮ್ಮ ಬಟ್ಟೆಯನ್ನೂ ಗುಂಡನ್ನೂ ಬುಟ್ಟಿಯಲ್ಲಿಟ್ಟಳು. ಆದರೆ ಸೋಮಣ್ಣ ಅವಳ ಮುಖವನ್ನು ನೋಡುತ್ತಾನೆ. ಅವಳ ಕಣ್ಣುಗಳಲ್ಲಿ ನೀರು ಹರಿಯುತ್ತಿದ.'

'ಯಾಕೆ ಚಿನ್ನಾ, ನನ್ನನ್ನು ಕ್ಷಮಿಸಲಾರೆಯಾ. ಇನ್ನೂ ಕೋಪವೇ?'

ಚಿನ್ನಮ್ಮನಿಗೆ ಬಾಯಲ್ಲಿ ಮಾತೇ ಹೊರಡದಾಯಿತು. ಅವಳು ತಡೆದರೂ ನಿಲ್ಲದೆ ಮೇಲಿಂದ ಮೇಲೆ ಬರುತ್ತಿತ್ತು. ತಾನು ಬೆಳಿಗ್ಗೆ ಅಯ್ನೋರಿಗೆ ಹೇಳಿದ ವಿಚಾರವೆಲ್ಲಾ ತನ್ನ ಕಣ್ಣು ಮುಂದೆ ಕಟ್ಟಿದಂತಾಗಿತ್ತು. ಗಂಡಸರು ಕೆಟ್ಟವರು, ಅವರು ಹೆಂಗಸರನ್ನು ದನ ಬಡಿದಂತೆ ಬಡಿಯುತ್ತಾರೆ, ಇಷ್ಟ

ಬಂದಂತೆ ಪೀಡಿಸುತ್ತಾರೆ, ಎಂತ ತಾನು ಹೇಳಿದುದು-ಈಗ ತನ್ನ ಮೇಲೆಯೇ ತಿರುಗಿಕೊಂಡಿತ್ತು. ತನ್ನ ಕಡೆಯೇ ನೋಡುತ್ತಾ ನಿಂತಿದ್ದ ರಾಮಯ್ಯನಿಗೆ ಬುದ್ಧಿ ಕಲಿಸಿದಾಗ, ಸೋಮಣ್ಣನ ಕಡೆ ತನ್ನ ಮನ ಒಲಿದಿತ್ತು. ಅಂದು ಮದುವೆ ಮಾಡಿಕೊ, ಎಂತ ಕೇಳಿದಾಗ ಅದೇ ಮನ ಅವನ ಕಡೆ ಎಳೆದಿತ್ತಾದರೂ, ತನ್ನ ತಾಯಿಯ ಸ್ಥಿತಿ ನೋಡಿ ಆಗದೆಂತ ಒರಟಾಗಿ ಉತ್ತರ ಕೊಟ್ಟಿದ್ದಳು. ತಾನು ಮಾಡಿದ ತಪ್ಪಿಗೆ ಕೈ ಕಚ್ಚಿದಳಲ್ಲಾ ಎಂದು ಇನ್ನೂ ಹೆಚ್ಚು ರೋಷಗೊಳ್ಳದೆ, ಸಲಸಲಕ್ಕೂ ಅವನು ತಪ್ಪಾಯಿತೆಂದು ಹೇಳಿ ಕ್ಷಮೆ ಬೇಡುತ್ತಿದ್ದ. ತಾನು ಉಪಚರಿಸುವುದಕ್ಕೂ ಬಿಡದೆ, ಅಡ್ಡಿ ಬರುತ್ತಿದ್ದ. ಇದೆಲ್ಲಾ ಅವನು ಮಾಡಬೇಕಾದರೆ ಕಾರಣ! ಅವನು ತನ್ನನ್ನು ಪ್ರೀತಿಸುತ್ತಿದ್ದುದರಿಂದಲಲ್ಲವೆ—ಅದರಿಂದಲೇ ಅಲ್ಲವೇ ತನಗೆ ತೊಂದರೆಯಾದರೂ, ಆಕೆಯನ್ನು ನಿಂದಿಸದೆ, ಆಕೆಯ ಕ್ಷಮೆಬೇಡಿ ಆಕೆಯ ಮಾನ ಮರ್ಯಾದೆಗಳಿಗೆ ಕುಂದು ಬರಕೂಡದೆಂತ, ಜನಗಳ ಬಾಯಿಗೆ ಆಕೆ ಸಿಕ್ಕಬಾರದೆಂತ, ತನ್ನನ್ನು ಅವನು ಹೋಗೆನ್ನುತ್ತಿದ್ದುದು-ಎನಿಸಿತು

ಚಿನ್ನಮ್ಮನಿಗೆ ಒಂದು ಕ್ಷಣದಲ್ಲಿ ಜ್ಞಾನೋದಯವಾಯ್ತು. ಪರಸ್ಪರ ಪ್ರೀತಿಸಿದಲ್ಲಿ ಅವರ ಸಹಸ್ರಾರು ಅಪರಾಧಗಳು ಪ್ರೀತಿಯಲ್ಲಿ ಐಕ್ಯವಾಗಿ ಬಿಡುತ್ತದೆಂತ ಆಗ ತಿಳಿಯಿತು. ಅದಕ್ಕೇನೆ ಆಕೆಯ ತಾಯಿ ಗಂಡ ಬಡಿದರೂ ಬಾಯಿಬಿಡದಿದ್ದದ್ದು. ಯಾರಿಗೂ ಹೇಳಕೂಡದೆಂತ ತನಗೆ ಕಟ್ಟಪ್ಪಣೆ ಮಾಡುತ್ತಿದ್ದುದು 'ಸೋಮಣ್ಣ, ನಾನು ನಿನ್ನನ್ನು ಕ್ಷಮಿಸೆಂತ ಕೇಳಿಕೊಳ್ಳಬೇಕು. ನನ್ನದು ತಪ್ಪು. ನಿನ್ನ ಒಳ್ಳೆಯ ಮಾತಿನಿಂದ ನನ್ನನ್ನು ಈ ರೀತಿ ಕೊಲ್ಲಬೇಡ. ನಿನ್ನ ದೈನ್ಯ-ಧ್ವನಿ ನನ್ನ ಹೃದಯವನ್ನು ಇರಿಯುತ್ತಿವೆ. ಇಗೋ ನಿನ್ನ ಮುಂದೆ ಈ ದೇಹ ಒಡ್ಡಿದ್ದೇನೆ. ಇದನ್ನು ನಿನ್ನ ಇಷ್ಟ ಬಂದಂತೆ ಮಾಡಿಕೊ. ನಿನಗೆ ಅಡ್ಡಿ ಇಲ್ಲ. ಇಂದಿನಿಂದ ನೀನೇ ಈ ದೇಹಕ್ಕೆ ಒಡೆಯ' ಎಂದಳು.

'ನಿನ್ನ ದೇಹಕ್ಕೆ ನಾನು ಒಡೆಯನೇ! ಊಂ, ಹೂಂ, ಮನಸ್ಸಿಲ್ಲದ ದೇಹವೂ ಮಣ್ಣುಬೊಂಬೆಯೂ ಒಂದೇ. ನನ್ನನ್ನು ತೃಪ್ತಿಪಡಿಸಲು ನೀನು ಹೀಗೆ ಹೇಳಬೇಕಾಗಿಲ್ಲ. ನೀನು ಹೋಗು, ನನ್ನ ತಪ್ಪು ಮರೆತುಬಿಡು'.

'ಇಲ್ಲ ಸೋಮಣ್ಣ. ದೇಹ ನಮ್ಮ ಕಣ್ಣಿಗೆ ಕಾಣುವ ವಸ್ತು. ಮನಸ್ಸು ಕಾಣುವಂಥದಲ್ಲ. ಇವನ್ನು ತೆಗೆದುಕೋ; ಇದರೊಡನೆ ಅದೂ ಬಂದೇ

ಬರುತ್ತೆ.

'ನಿಜವಾಗಿಯೂ'

'ನಿಜವಾಗಿಯೂ'

'ನನ್ನನ್ನು ಮನ್ನಿಸಿದೆ ಎನ್ನು'

'ನನ್ನನ್ನೋ?'

'ನಿನ್ನನ್ನೇನು ಚಿನ್ನ ನಾನು ಮನ್ನಿಸುವುದು! ಈಗ್ಗೆ ಸ್ವಲ್ಪ ಹೊತ್ತಿಗೆ ಮುಂಚೆ ನಿಸ್ಸಹಾಯಕಳಾಗಿ ನನ್ನ ಕೈಯಲ್ಲಿ ಯಾರೂಇಲ್ಲದೆಡೆ ಸಿಕ್ಕಿದಾಗ ಪಶುವರ್ತಿಸಿದಂತೆ ವರ್ತಿಸಲು ಪ್ರಯತ್ನಿಸಿದ ನನ್ನನ್ನು ಮನ್ನಿಸಬೇಕು!'

'ಹಾಗಾದರೆ ಇದಕ್ಕೆ ಕೊನೆಯೆಲ್ಲಿ?'

'ಕೊನೆಯೇ ಇಲ್ಲ, ನನ್ನ ನೂರಾರು ತಪ್ಪು ನೀನು ಕ್ಷಮಿಸಬೇಕಾಗ ಬಹುದು.'

'ನಾನೂ ಅದನ್ನೂ ಹೇಳಿಕೊಳ್ಳಬಹುದಲ್ಲಾ'.

'ಹೇಳಿಕೊ, ಒಬ್ಬರನ್ನೊಬ್ಬರು ಕ್ಷಮಿಸುವ. ದೇಹಕ್ಕಿಂತ ಹೆಚ್ಚಾಗಿ ಮನಸ್ಸು ಕಲೆತು ಒಂದಾಗಿ ಬೇರ್ಪಡಿಸದಂತೆ ಬೆರೆತುಹೋಗಲಿ.'

'ಹಾಗೆ ಮನ ಹೃದಯ ಬೆರೆತರೆ–ಹೆಚ್ಚುಕಡಿಮೆ ಏನುಉಳಿಯುತ್ತೆ, ನಮ್ಮಿಬ್ಬರಲ್ಲಿ?'

---

# 12. ಯಾರು ಬಲ್ಲರು!

ನಾನು ಹೇಳುತ್ತಾ ಇರೋದು ಈಗ್ಗೆ ೧೫-೨೦ ವರ್ಷಗಳ ಮಾತು. ಆಗ ಇನ್ನೂ ಮೆಜೆಸ್ಟಿಕ್ ಥಿಯೇಟರ್ ಬಳಿ ಇರುವ ಚೌಕ ಈಗಿರುವ ಹಾಗೆ ಇರಲಿಲ್ಲ. ಇನ್ನೂ ಆ ಭಾರಿ ಅಶ್ವತ್ಥ ಕಟ್ಟೆ ಹಾಗೆಯೇ ಇತ್ತು. ತುಲಸೀ ವನಂ ಹಾಸ್ಟೆಲ್ ಈಗಿರುವ ಜಾಗದಲ್ಲೇ ಇತ್ತಾದರೂ ಶ್ರೀ ವೈಷ್ಣವರಿಗೆಲ್ಲ ಅದರಲ್ಲಿ ಪ್ರವೇಶ ಸಿಕ್ಕುತ್ತಿದ್ದು, ಈಗಿರುವಂತೆ ಹೆಬ್ಬಾರ್ ಐಯ್ಯಂಗಾರ್‍ರು ಗಳಿಗೆ ಮಾತ್ರ ಮೀಸಲಾಗಿರಲಿಲ್ಲ. ಈಗ ಮಾಡರ್ನ ಹಿಂದೂ ಹೋಟಲ್ ಇರುವ ಕಡೆ ಎಂಜಿನಿಯರಿಂಗ್ ಕಾಲೇಜ್ ಹಾಸ್ಟೆಲ್ ಇತ್ತು. ನಮ್ಮ 'ಈ ದಿನ ಸೋಮವಾರ, ದಯವಿಟ್ಟು ಮೂರು ಕಾಸು ಕೊಡಿ' ಗೋಪಾಲ ರಾವ್‌ನ ಕತೆಯನ್ನು ಚೆನ್ನಾಗಿ ತಿಳಿದುಕೊಳ್ಳಬೇಕಾದರೆ, ಈ ಸನ್ನಿವೇಶ ಗಳೆಲ್ಲ ಜ್ಞಾಪಕದಲ್ಲಿದ್ದರೆ ಒಳ್ಳೆಯದು.

ಆ ಕಾಲದ ಕಾಲೇಜ್ ವಿದ್ಯಾರ್ಥಿಗಳಾರೂ ಸದರಿ ಗೋಪಾಲರಾಯ ನನ್ನು ಕಾಣದವರೇ ಇಲ್ಲವೆಂದು ಧಾರಾಳವಾಗಿ ಹೇಳಬಹುದು. ಸೆಂಟ್ರಲ್ ಕಾಲೇಜ್ ಅಶ್ವತ್ಥಕಟ್ಟೆ, ಮೆಜೆಸ್ಟಿಕ್ ಥಿಯೇಟರ್ ಅಶ್ವತ್ಥ ಕಟ್ಟೆ, ಆಗಿನ ಎಂಜಿನಿಯರಿಂಗ್ ಕಾಲೇಜ್ ಹಾಸ್ಟೆಲಿನ ಬಳಿ ಇರುವ ಮಾವಿನ ಮರ (ಈಗ ಮಾಡರ್ನ ಹಿಂದೂ ಹೋಟಲ್ ಬಳಿ ಮಾವಿನ ಮರಗಳಿಲ್ಲ.) ಇವುಗಳ ಬಳಿ ಅಥವಾ ಹೆಬ್ಬಾರ್ ಹಾಸ್ಟೆಲ್ ಬಳಿ ಗೋಪಾಲರಾಯ ಹಾಜ ರಿರುತ್ತಿದ್ದ. ಯಾರೇ ಬರಲಿ, ಅವರು ಸ್ವಲ್ಪ ಧಾರಾಳಿಗಳ ಹಾಗೆ ಕಂಡು ಬಂದ ತಕ್ಷಣ, ಗೋಪಾಲರಾಯ ಅವರ ದಾರಿಗೆ ಅಡ್ಡ ಬಂದು ನಿಂತು ಎಡ ಹಸ್ತದ ಮೇಲೆ ಬಲ ಮೊಣ ಕೈಯನ್ನು ಘಟ್ಟಿಂದು ಬಡಿದು, 'ನಮಃ ಸ್ಕಾರ ಸಾರ್, ಈ ದಿನ ಸೋಮವಾರ. ದಯವಿಟ್ಟು ಮೂರು ಕಾಸು ಕೊಡಿ ಸಾರ್' ಎಂತ ಕೇಳುತ್ತಾ ಇದ್ದ. ತಾನು ಯಾರ ಮುಂದೆ ನಿಂತುಕೊಳ್ಳು ತ್ತಿದ್ದನೋ ಅವರ ದೃಷ್ಟಿಯು ತನ್ನ ಕಡೆಗೇ ಇರಲೆಂದು ಅವನು ಕೈಯನ್ನು ಆ ರೀತಿಯಲ್ಲಿ ಬಡಿಯುತ್ತಿದ್ದುದು.

ಕುಳ್ಳಲ್ಲದಿದ್ದರೂ ಬಹಳ ಎತ್ತರವಲ್ಲದ, ತೆಳುವಾದ, ಕೆಂಪನೆಯ ಬಣ್ಣವಾದರೂ ಬಿಸಿಲಿನಲ್ಲಿ ಅಲೆದಲೆದು ಕರ್‍ರಗಾಗಿದ್ದ ಮುಖವುಳ್ಳ, ಎದೆ ಬಿಟ್ಟುಕೊಂಡಿರುವ ಷರ್ಟು, ಹರಕಲು ಕೋಟು, ಪಂಚೆಗಳನ್ನುಟ್ಟಿದ್ದ,

ವಿಶಾಲವಾದ, ಮಗುವಿನಂತಹ ನಗೆಮೊಗವುಳ್ಳ ಅವನನ್ನು ನೋಡಿದ ಒಡನೆಯೇ ಯಾರಿಗಾದರೂ ಮನಕರಗಿ, ತಕ್ಷಣವೇ ಮೂರು ಕಾಸು, ಆರು ಕಾಸು ಕೊಟ್ಟುಬಿಡುತ್ತಿದ್ದರು. ನಗುಮೊಗವಾದರೂ ಕೋಪ ಬಂದಾಗ ಸಿಟ್ಟಿಗೆದ್ದ ಗೂಳಿಯಂತೆ ಕಾಣಿಸುತ್ತಿದ್ದ. ಒಂದು ಕಡೆಗೆ ಸ್ವಲ್ಪ ವಾಲಿಸಿದ ತಲೆ, ಸ್ವಲ್ಪ ಬಾಗಿಸಿದ ಬೆನ್ನು, ಥಳಥಳನೆ ಹೊಳೆಯುತ್ತಿದ್ದ ಕಣ್ಣು, ಕೆದರಿದ ತಲೆ, ಬೆಳೆದ ಗಡ್ಡ, ಇವುಗಳನ್ನುಳ್ಳ ಗೋಪಾಲರಾಯನನ್ನು ಕಂಡರೆ ಎಲ್ಲರೂ ಹೆದರುತ್ತಿದ್ದರು.

ಆತನನ್ನು ಮೊದಲು ಕಂಡಾಗ, ನಾನು ಅವೇ ತಾನೆ ಬೆಂಗಳೂರಿಗೆ ಓದಲು ಬಂದು, ಹೆಬ್ಬಾರ್ ಹಾಸ್ಟೆಲ್‌ನಲ್ಲಿದ್ದೆ. ಜೂನ್ ತಿಂಗಳ ಬೇಸಿಗೆಯಲ್ಲಿ ಗೋಪಾಲರಾಯನು ಚಿಕ್ಕ ಲಾಲ್‌ಬಾಗಿನಲ್ಲಿ ಗಿಡಗಳ ನೆರಳಿನಲ್ಲಿ ಹಾಯಾಗಿ ಮಲಗಿರುತ್ತಿದ್ದನು. ಅವನ ಸುತ್ತಲೂ ನಾಲ್ಕಾರು ನಾಯಿಗಳು ಬಿದ್ದಿರುತ್ತಿದ್ದವು. ಹಾಗೆಯೇ ಮಲಗಿರುತ್ತಿದ್ದವನು ಎದ್ದು, ಅತ್ತ ಇತ್ತ ಓಡಾಡಿ, ಒಂದು ಸಣ್ಣ ಕಲ್ಲು ತೆಗೆದು ಒಂದು ನಾಯ ಮೇಲೆ ಎಸೆಯುವನು. ಅದು ಗಾಬರಿಯಿಂದ ಏಳುವುದು. ಅದರ ಶಬ್ದದಿಂದ ಮಿಕ್ಕ ನಾಯಿಗಳು! ಆದರೆ ಗೋಪಾಲರಾಯನ ನಗುಮೊಗವನ್ನು ಕಂಡು ಅವು ಬಾಲವಾಡಿಸಿ ಪುನಃ ಮಲಗುವುವು.

ನನ್ನ ಕೊಠಡಿ ಇದ್ದುದು ಮಹಡಿಯ ಮೇಲೆ. ಉತ್ತರ ದಿಕ್ಕಿನದು. ಅದರ ಕಿಟಕಿಯಿಂದ ಇದೆಲ್ಲ ನನಗೆ ಚೆನ್ನಾಗಿ ಕಾಣಿಸುತ್ತಿತ್ತು.

ನಾನು ನೋಡಿ ಒಂದೊಂದು ಸಲ ನಗುತ್ತಿದ್ದೆ.

ಒಂದೊಂದು ಸಲ ಆಲೋಚನೆಯಲ್ಲಿ ಮುಳುಗುತ್ತಿದ್ದೆ.

ಆಗ–ಗೋಪಾಲರಾಯ ನಿಜವಾಗಿ ಹುಚ್ಚನೇ, ಅಥವ ಹುಚ್ಚನಂತೆ ಆಡುತ್ತಿದ್ದ ಆತ್ಮ ಸಾಕ್ಷಾತ್ಕಾರ ಮಾಡಿಕೊಂಡ ಮಹಾನುಭಾವನೇ ಎಂಬ ಸಂಶಯ ನನಗೆ ಬರುತ್ತಿತ್ತು. ಆತನು ನಿತ್ಯ ತೃಪ್ತನಾಗಿದ್ದನು. ಬಾಹ್ಯ ಪ್ರಪಂಚದ ಅರಿವೇ ಆತನಿಗಿರಲಿಲ್ಲ. ಹುಚ್ಚನಂತೆ ತಿರುಗುತ್ತಿದ್ದನಾದರೂ ಯಾರಲ್ಲಿಯೂ ಹೆಚ್ಚು ಮಾತನಾಡುತ್ತಿರಲಿಲ್ಲ. ಒಮ್ಮೆ ಅಳುತ್ತಾನೆ, ಮತ್ತೆ ಒಮ್ಮೆ ನಗುತ್ತಿದ್ದನು. ಮಗುದೊಮ್ಮೆ ಆಲೋಚನಾಸಕ್ತನಾಗಿರುತ್ತಾನೆ ನಮ್ಮಲ್ಲಿ ಭೇದ ಭಾವವಿದ್ದಂತೆ ಆತನಲ್ಲಿರಲಿಲ್ಲ. ಆತನು ತಿರಿದು ತಂದ ತಿಂಡಿಯಲ್ಲಿ, ವಂಚನೆಯಿಲ್ಲದೆ ತನ್ನ ಸುತ್ತಲೂ ಇದ್ದ ನಾಯಿ, ಕತ್ತೆ, ಕಾಗೆ

ಇವುಗಳಿಗೆ ಹಂಚುತ್ತಾ ತಿನ್ನುತ್ತಿದ್ದನು. ಅವನ ಸಂಗಡವಿದ್ದರೆ ಅವಾವುವೂ ಜಾತಿವೈರದಿಂದ ಕಚ್ಚಾಡುತ್ತಿರಲಿಲ್ಲ. ಮನುಷ್ಯನನ್ನು ಕಂಡೊಡನೆಯೇ ಮೂರು ಮೈಲಿ ಹಾರಿಹೋಗುವ ಕಾಗೆಗಳೂ ಅವನ ಕೈಯಿಂದ ಅನ್ನವನ್ನು ಕಸಿದುಕೊಳ್ಳುತ್ತಿದ್ದುವು.

ಆತನು ಒಂದೊಂದುಸಲ ಕುಳಿತ ಜಾಗದಿಂದ ಬೆಳಗಿನಿಂದ ಸಂಜೆಯ ವರೆಗೂ ಅಲುಗುತ್ತಿರಲಿಲ್ಲ. ಏನನ್ನೋ ಕುರಿತು ಧ್ಯಾನಿಸುವಂತೆ ತೋರುತ್ತಿತ್ತು.

ಒಂದು ದಿನ ನಾನು ಧೈರ್ಯಮಾಡಿ ಅವನು ಬರುವ ಸಮಯವನ್ನೇ ಕಾದಿದ್ದು, ಅವನ ಕಾಲ ಬಳಿ ಬೀಳುವಂತೆ ಕಿಟಕಿಯಿಂದ ಒಂದು ಎಂಟಾಣೆ ನಾಣ್ಯವನ್ನು ಎಸೆದೆನು. ಅವನು ನನ್ನನ್ನು ತಲೆಯೆತ್ತಿ ನೋಡಿದಾಗ, 'ಏನು ಗೋಪಾಲರಾವ್!' ಎಂದೆ.

ಅಂದಿನಿಂದ ನಾವಿಬ್ಬರೂ ಮಿತ್ರರಾದೆವು.

ಒಂದು ದಿನ ಭಾನುವಾರ ಸಂಜೆಯ ಸಮಯದಲ್ಲಿ ಗವಿಗಂಗಾಧರೇಶ್ವರನ ಗುಡ್ಡದ ಮೇಲೆ ಕುಳಿತು ಸೂರ್ಯನು ಮುಳುಗುವುದನ್ನೇ ನೋಡುತ್ತಿದ್ದೆ. ಮೊದಲು ದೃಷ್ಟಿಸಲು ಸಾಧ್ಯವಿಲ್ಲದ ಜ್ಯೋತಿರ್ಮೂರ್ತಿಯಾದ ಸೂರ್ಯ; ನೀಲಾಕಾಶ. ಅನಂತರ ಒಂದು ತಟ್ಟೆಯಾಕಾರದ ಕೆಂಪನೆಯ ಗುಂಡು; ಅದರ ಫಲವಾಗಿ ಸಹಸ್ರಾರು ಬಣ್ಣಗಳಿಂದ ವಿಧವಿಧವಾಗಿ ಚಿತ್ರಿಸಲ್ಪಟ್ಟ ಆಕಾಶ; ಅನಂತರ ಮಬ್ಬೆಳಕು. ಆ ಮೇಲೆ ಕತ್ತಲು!........

ನನ್ನ ಹಿಂದೆ ನುಡಿದದ್ದು ಕೇಳಿಸಿತು. "ಪ್ರಪಂಚವೆಲ್ಲವೂ ಬದಲಾವಣೆ ಹೊಂದುತ್ತದೆ. ಎಲ್ಲವೂ ಶಾಶ್ವತವೆಂದು ನಾವು ನಂಬಿ ಮೋಸಹೋಗುತ್ತೇವೆ. ಎಲ್ಲ ಅಶಾಶ್ವತ! ಎಲ್ಲಕ್ಕೂ ಚ್ಯುತಿಯುಂಟು! ಎಲ್ಲವೂ ಮಿಥ್ಯ! ಚ್ಯುತಿಯಿಲ್ಲದುದು ಅಚ್ಯುತ! ಅದೊಂದೇ".

ನಾನು ಬೆಚ್ಚಿಬಿದ್ದು ತಿರುಗಿ ನೋಡಿದೆ. ಕತ್ತಲಲ್ಲಿ ಅಸ್ಪಷ್ಟವಾಗಿ ಗೋಪಾಲರಾಯನ ಮೂರ್ತಿ ಕಾಣಿಸಿತು.

'ಏನು, ಗೋಪಾಲರಾವ್' ಎಂದೆ.

'ಏನೂ ಇಲ್ಲ; ನನ್ನ ಮಾತೇನು. ಹುಚ್ಚನ ಮಾತು! ಅದರಲ್ಲಿ ಅರ್ಥವಿಲ್ಲ'!

ಸ್ವಲ್ಪ ಹೊತ್ತು ಆತನು ಸುಮ್ಮನಿದ್ದು ಪುನಃ 'ನಾನು ಯಾವಾಗಲೂ

ಹೀಗೆಯೇ ಇದ್ದೆನೇ? ನಾನು ಎಲ್ಲರ ಹಾಗೆಯೇ ಇದ್ದೆ. ಆ ಮೇಲೆ ಹೀಗೆ ಆದೆ. ನನಗೆ ಹುಚ್ಚು ಹಿಡಿದಿದೆ ಎನ್ನುತ್ತಾರೆ. ನನಗೇ ಹುಚ್ಚು ಹಿಡಿದಿದೆಯೋ, ಅಥವ ನನಗೆ ಹುಚ್ಚೆಂದು ಹೇಳುವವರಿಗೆ ಹುಚ್ಚೋ; ಅಥವ ನನ್ನ ದೃಷ್ಟಿಯಿಂದ ಇತರರು ನೋಡದೆ ಇರುವುದರಿಂದ ಅವರಿಗೂ, ಇತರರ ಕಣ್ಣಿನಿಂದ ನಾನು ನೋಡದೆ ಇರುವುದರಿಂದ ನನಗೂ ಹುಚ್ಚೋ!'

'ನಿನಗೆ ಹುಚ್ಚೇ? ಯಾತರಿಂದ ಹಿಡಿಯಿತು! ಯಾವ ಹುಚ್ಚು!'

'ನಿರಾಶೆಯಾದ್ದರಿಂದ ವೈರಾಗ್ಯದ ಹುಚ್ಚು. ನನಗೆ ಈಗ ನಿಶ್ಚಯವಾಗಿ ಹುಚ್ಚೇ ಹಿಡಿದಿದೆಯೋ ಅಥವ ಪ್ರಪಂಚವೇ ಬೇಡವಾಗಿದೆಯೋ ನಾನು ಹೇಳಲಾರೆ. ವಿರಾಗಿಗೆ ಪ್ರಪಂಚದಲ್ಲಿ ಇರುವುದರಿಂದ ಹುಟ್ಟುವ ಆಸಕ್ತಿಯೇನು? ತ್ಯಜಿಸುವುದರಿಂದ ಆಗುವ ಅನಾನುಕೂಲವೇನು'?

"ನಮ್ಮ ತಂದೆ ತಾಯಿಗೆ ನಾವು ಇಬ್ಬರು ಹುಟ್ಟಿದೆವು. ನಮ್ಮ ತಂದೆ ಐಶ್ವರ್ಯವಂತರಲ್ಲದಿದ್ದರೂ ಬಡವರಾಗಿರಲಿಲ್ಲ. ಅವರಿದ್ದುದು ಒಂದು ಹಳ್ಳಿಯಲ್ಲಿ. ನಾವು ಉಂಡು ಉಟ್ಟು ಒಂದು ನಾಲ್ಕು ಜನಕ್ಕೆ ಹಾಕುವಷ್ಟು ಇತ್ತು. ನಮ್ಮ ಹಳ್ಳಿಯಲ್ಲಿ ವಿದ್ಯಾಭ್ಯಾಸ ಮುಗಿದ ಮೇಲೆ ತಾಲೂಕಿನಲ್ಲಿ ಲೋವರ್ ಸೆಂಕೆಂಡರಿ ಪರೀಕ್ಷೆ ಮಾಡಿದೆವು. ಅಲ್ಲಿಂದ ಬೆಂಗಳೂರು ಕೋಟೆ ಹೈಸ್ಕೂಲಿಗೆ ಹೋದೆವು. ನಮ್ಮ ಸೋದರತ್ತೆಯ ಮನೆಯಲ್ಲಿ ಊಟ. ಹೈಸ್ಕೂಲು ದಾಟಿದ್ದಾಯಿತು. ಕಾಲೇಜಿಗೆ ಸೇರಿದೆವು.

ನಮ್ಮ ಸೋದರತ್ತೆಗೆ ಲಲಿತ ಎಂಬ ಮಗಳಿದ್ದಳು. ಆಕೆಗೆ ೧೨ ವರ್ಷ ನನಗೆ ೧೭ ವರ್ಷ. ಆಕೆಯನ್ನೂ ಕಾಲೇಜಿಗೆ ಸೇರಿಸಿದ್ದರು. ಆಕೆಗೆ ಮನೆಯಲ್ಲಿ ನಾನೇ ಪಾಠ ಹೇಳಿಕೊಡುತ್ತಿದ್ದೆ. ಆಕೆಯೂ ಒಂದೊಂದು ಕ್ಲಾಸನ್ನು ದಾಟುತ್ತ ಬರುತ್ತಾ ಇದ್ದಳು. ಆಕೆಯನ್ನು ಲಗ್ನವಾಗಬೇಕೆಂದು ನನಗೆ ಆಶೆಯಾಯಿತು. ನಾನು ಈ ವಿಷಯವನ್ನು ನಮ್ಮ ಅತ್ತೆಯವರಿಗೆ ತಿಳಿಸಿದೆ. ಅವರು 'ಆಗಲಪ್ಪ ನೋಡೋಣ, ಆಕೆಯನ್ನೂ ಒಂದು ಮಾತು ಕೇಳೋಣ' ಅಂತ ಅಂದರು. ಆಕೆಯನ್ನು ನಾನೇ ಕೇಳಿದೆ. 'ನಾನು ಬಿ. ಎ. ಪಾಸಾದವನನ್ನು ಮದುವೆಮಾಡಿಕೊಳ್ಳುವುದು' ಎಂದುಬಿಟ್ಟಳು.

ನಾನು ಏನಾದರೂ ಮಾಡಿ ಬಿ. ಎ. ಪಾಸ್ ಮಾಡಬೇಕೆಂತ ನಿಶ್ಚಯ ಮಾಡಿ ಬಹಳ ಶ್ರದ್ಧೆಯಿಂದ ಓದಿದೆ. ಎಂಟ್ರೆನ್ಸ್ ಕ್ಲಾಸಿನಲ್ಲಿ ನಾನು ಫಿಸಿಕ್ಸ್ ತೆಗೆದುಕೊಂಡಿದ್ದೆ. ಅದೇಕೋ ಆ ಭಾಗ ತಲೆಗೇ ಹತ್ತುತ್ತಿರಲಿಲ್ಲ.

ಪರೀಕ್ಷೆಯಾಯಿತು. ಫಲಿತಾಂಶವನ್ನು ಎದುರುನೋಡುತ್ತಿದ್ದೆ. ತೇರ್ಗಡೆ ಯಾಗಿರಲಿಲ್ಲ. ನನ್ನ ಜೀವವೇ ಭೂಮಿಗೆ ಇಳಿದುಹೋಯಿತು. ಧೈರ್ಯ ಗೆಡಬಾರದು ಎಂತ ಪುನಃ ಕಟ್ಟಿದೆ. ಪುನಃ ಅದೇ ಪರಿಣಾಮ; ಪುನಃ ಕಟ್ಟಿ ದರೂ ಅದೇ ಫಲಿತಾಂಶ!

'ಇಷ್ಟು ಹೊತ್ತಿಗೆ ನಾನು ಪದೇ ಪದೇ ಅನುತ್ತೀರ್ಣನಾದುದರಿಂದ ನನಗೆ ಉತ್ತೀರ್ಣನಾಗಲಿಲ್ಲವಲ್ಲ ಎಂಬುವ ಒಂದು ಹುಚ್ಚು ಹಿಡಿದಿತ್ತು. ಇದಕ್ಕೆ ಮೊದಲೇನೆ ಲಲಿತಳನ್ನು ವಿವಾಹವಾಗಬೇಕೆಂಬ ಹಂಬಲದ ಹುಚ್ಚೂ ಇತ್ತು. ನಾನು ಮನಸ್ಸಿಟ್ಟು ಪ್ರಯತ್ನಪಟ್ಟರೂ ಏಕೆ ಸಾಧ್ಯ ವಾಗಲಿಲ್ಲ? ಅದಕ್ಕೆ ಯಾವುದು ಅಥವ ಯಾರು ಕಾರಣ ಎಂಬುದನ್ನು ಅರಿತುಕೊಳ್ಳಬೇಕೆಂಬ ಮತ್ತೊಂದು ಹುಚ್ಚು ಹಿಡಿಯಿತು. ಆ ಹುಚ್ಚಿನ ದಾಹವನ್ನು ಅಡಗಿಸಲು ಪುಸ್ತಕಗಳನ್ನೋದಲು ಪ್ರಾರಂಭಿಸಿದೆ. ಅದು ನನ್ನನ್ನು ಎಲ್ಲಿಗೂ ಒಯ್ಯಲಿಲ್ಲ. ಮನಸ್ಸಿನಲ್ಲಿ ತಿಳಿದು ಕೊಳ್ಳಬೇಕೆಂಬ ಅಶಾಂತಿ ನೆಲೆಸಿತ್ತು.

"ಈ ಮಧ್ಯೆ ಮೊದಲನೆಯ ಬಾರಿ ನಾನು ಅನುತ್ತೀರ್ಣನಾದೊಡನೆ ಯೇ, ಲಲಿತ ನನ್ನನ್ನು ಅಲಕ್ಷ್ಯಮಾಡುವುದಕ್ಕೆ ಪ್ರಾರಂಭಿಸಿದಳು. ಎರಡ ನೆಯ ಸಲವೂ ತೇರ್ಗಡೆ ಹೊಂದದಿದ್ದುದರಿಂದ ಹೀನವಾಗಿ ಕಾಣುವುದಕ್ಕೆ ಪ್ರಾರಂಭಿಸಿದಳು. ಮೂರನೆಯ ಸಲವೂ ತೇರ್ಗಡೆ ಯಾಗದಿದ್ದುದರಿಂದ ನಾನು ಭೂಮಿಯಲ್ಲಿ ಒಬ್ಬ ಇದ್ದೇನೆ ಎಂಬ ವಿಷಯವೇ ಆಕೆಗೆ ಮರೆತು ಹೋಯಿತು. ಆ ಕಾಲಕ್ಕೆ ಆಕೆಗೂ ಮದುವೆಯ ಏರ್ಪಾಡು ಮಾಡುತ್ತಿ ದ್ದಾರೆ–ಎನ್ನುವ ವಿಷಯ ನನಗೆ ತಿಳಿಯಿತು. ಈ ವೇಳೆಗೆ ನಾನು ನಮ್ಮ ಅತ್ತೆಯವರ ಮನೆಬಿಟ್ಟು ಬೇರೆಕಡೆ ವಾಸಮಾಡುತ್ತಾ ಓದಿಕೊಳ್ಳುತ್ತಿದ್ದೆ. ಲಲಿತೆಯ ಮದುವೆಯ ಪ್ರಸ್ತಾಪದ ವಿಷಯ ಗೊತ್ತಾದೊಡನೆ, ನಾನು ನಮ್ಮ ಅತ್ತೆಯವರಲ್ಲಿ ತೀರ ಮೊದಲು ಮಾಡಿಕೊಂಡಿದ್ದ ಪ್ರಾರ್ಥನೆ ಯನ್ನುಜ್ಞಾಪಿಸಿದೆ. 'ಅವರು ನಿಮ್ಮ ಮಾವನನ್ನು ಕೇಳು' ಎಂದುಬಿಟ್ಟರು. ಆದರೆ ಲಲಿತೆಯು ಒಪ್ಪುವುದಿಲ್ಲವೆಂತ ನನಗೆ ಗೊತ್ತಿತ್ತು. ಲಲಿತೆಯ ನಿಶ್ಚಯ ನನಗೆ ಮೊದಲೇ ತಿಳಿದಿದ್ದರೂ, ಆಕೆಯನ್ನು ಕೇಳೋಣವೆಂತ ಒಂದು ದಿನವೆಲ್ಲ ಕಾದೆ, ಸಾಧ್ಯವಾಗಲಿಲ್ಲ. ಆಕೆಯಿದ್ದ ಕಡೆ ನಾನು ಹೋ ದರೆ ಆಕೆ ಆ ಜಾಗ ಬಿಟ್ಟುಹೊರಟು ಹೋಗುತ್ತಿದ್ದಳು. ಕಡೆಗೆ ಆಕೆಯನ್ನು

ಆಕೆಯ ಕೊಠಡಿಯಲ್ಲಿಯೇ ನಿಲೆಹಾಕಿ ಕೇಳಿದೆ. ಆಕೆ ಮೊದಲು ಏನನ್ನೂ ಹೇಳಲು ಇಷ್ಟಪಡಲಿಲ್ಲ. ಆಕೆ ಹೇಳದಿದ್ದರೆ ನಾನು ಬಿಡಬೇಕಲ್ಲ! ಕೊನೆಗೆ ನಾನು ಬಹಳವಾಗಿ ಪೀಡಿಸಲು, 'ನಿನ್ನನ್ನು ಮದುವೆಯಾಗಲು ನಿನಗೆ ಬಿ. ಎ. ಪ್ಯಾಸಾಗಿದೆಯೇ?' ಎಂತ ಕೇಳಿಬಿಟ್ಟಳು. ನನಗೆ ಆಕೆಯಿಂದ ಆದ ಅವಮಾನವೇ ಸಾಲದೆಂತ ನಾನು ಸುಮ್ಮನಾಗದೆ ನನ್ನ ಅಭಿಲಾಷೆಯನ್ನು ನಮ್ಮ ತಂದೆ ತಾಯಿಗಳಿಗೆ ತಿಳಿಸಿದೆ. ಅವರೂ ಹೇಳಿನೋಡಿದರು. ಏನೂ ಸಾಧ್ಯವಾಗಲಿಲ್ಲ."

ಆಕೆಯ ಲಗ್ನ ಗೊತ್ತಾಗಿಯೇ ಹೋಯಿತು!

ಲಗ್ನದ ದಿನವೂ ಬಂತು. ಅಂದು ನಾನು ಮದುವೆ ಮನೆ ಬಳಿಗೆ ಹೋಗಿ ಗಲಾಟೆ ಮಾಡಲು, ನನ್ನನ್ನು ಹುಚ್ಚರ ಆಸ್ಪತ್ರೆಗೆ ಸೇರಿಸಿದರು. ಅಲ್ಲಿ ನಾನು ಕೆಲಕಾಲ ಇದ್ದೆ.

'ನನಗೆ ಹುಚ್ಚು ಹಿಡಿದಿಲ್ಲ ಎಂತ ಬಿಟ್ಟುಬಿಟ್ಟರು! ಆದರೂ ಪ್ರಪಂಚ ವೆಲ್ಲ ನನ್ನನ್ನು ಹುಚ್ಚನೆನ್ನುತ್ತಿತ್ತು! ಪುನಃ ಲಲಿತಳನ್ನು ನೋಡಬೇಕೆಂದೆ ನಿಸಿತು. ಉಡುಪನ್ನು ಧರಿಸಿದೆ. ಸ್ವರೂಪವನ್ನು ನೋಡಿಕೊಳ್ಳೋಣ ವೆಂತ ಮೇಜಿನ ಮೇಲಿದ್ದ ಕನ್ನಡಿಯನ್ನು ಮುಂದಕ್ಕೆಳೆದೆ. ಯಾವುದೋ ಪುಸ್ತಕ ಅರ್ಧ ತೆರೆದು ಮುಖ ಅಡಿಯಾಗಿ ನೆಲದ ಮೇಲೆ ಬಿತ್ತು. ಅತ್ತ ಕಡೆ ನೋಡಿದೆ. ಅದು ಭಗವದ್ಗೀತೆಯಾಗಿತ್ತು. ತೆರೆದಿದ್ದುದನ್ನು ಹಾಗೆ ಯೇ ಮೇಲಕ್ಕೆತ್ತಿಕೊಂಡು ನೋಡಿದೆ. ೧೮ನೆಯ ಅಧ್ಯಾಯದ 'ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ' ಎಂಬುದರಿಂದ ಪ್ರಾರಂಭ ವಾಗುವ ೩೬ನೇಯ ಶ್ಲೋಕ ಕಣ್ಣಿಗೆ ಬಿತ್ತು.

ಅರ್ಧ ಯೋಚಿಸುತ್ತಾ, ಅರ್ಧ ಅನ್ಯ ಮನಸ್ಸಿನಿಂದ ಹಾಳೆಯನ್ನು ತಿರುವಿ ಹಾಕಿದೆ.

ಸುಖಂ ತ್ವಿದಾನೀಂ ತ್ರಿವಿಧಂ....

ಎಂಬುದು ಮನಸ್ಸಿನಲ್ಲಿ ಅಡಕವಾಗಿದ್ದ ಆಲೋಚನಾ ತರಂಗಗ ಳನ್ನು ಕಲಕಲಾರಂಭಿಸಿತು.

ಹಾಗೆಯೇ.

ವಿಷಯೇಂದ್ರಿಯ ಸಂಯೋಗಾತ್।
ಯತ್ತದಗ್ರೇಽ ಮೃತೋಪಮಮ್।

ಪರಿಣಾಮೇ ವಿಷಮಿವ|
ತತ್ಸುಖಂ ರಾಜಸಂಸ್ಮೃತಮ್|| ೩೮ ||

ಎಂಬ ಶ್ಲೋಕವನ್ನೂ ಓದಿದೆ.

ಲಲಿತಳನ್ನು ಒಂದು ಬಾರಿ ನೋಡುವ ಕ್ಷಣಿಕ ಸುಖಕ್ಕಾಗಿ ನಾನು ಪ್ರಯಾಣ ಹೊರಟು ನಿಂತಿದ್ದೆ. ಅದರ ಫಲವೇನು?

'ಆಕೆಯು ನನ್ನವಳಾಗಲಿಲ್ಲವಲ್ಲ ಎಂಬ ಆಕ್ರೋಶ! ಅದಕ್ಕೆ ಕಾರಣ ಅವಳು ನನ್ನವಳಾಗಬೇಕೆಂಬ ಆಸೆ!'

ಮನಸ್ಸು ೨ನೆಯ ಅಧ್ಯಾಯದ ೬೨-೬೩ನೆ ಶ್ಲೋಕಗಳಿಗೆ ಓಡಿತು!

ಧ್ಯಾಯತೋ ವಿಷಯಾನ್ ಪುಂಸಃ|
ಸಂಗಸ್ತೆಷೂಪಜಾಯತೇ||
ಸಂಗಾತ್ ಸಂಜಾಯತೇ ಕಾಮಃ|
ಕಾಮಾತ್ ಕ್ರೋಧೋಽಭಿಜಾಯತೇ || ೬೨ ||
ಕ್ರೋಧಾದ್ಭವತಿ ಸಮ್ಮೋಹಃ|
ಸಮ್ಮೋಹಾತ್ ಸ್ಮೃತಿವಿಭ್ರಮಃ||
ಸ್ಮೃತಿಭ್ರಂಶಾದ್ಬುದ್ಧಿನಾಶೋ|
ಬುದ್ಧಿನಾಶಾತ್ಪ್ರಣಶ್ಯತಿ|| ೬೩ ||

ಆ ಶ್ಲೋಕಗಳನ್ನು ನನಗೇ ಅನ್ವಯಿಸಿಕೊಂಡೆ.

'ಆಗ ಆಕೆಯನ್ನು ನೋಡುವುದರಿಂದ ಏನೂ ಪ್ರಯೋಜನವಿಲ್ಲ ವೆಂದೂ' ನೋಡದೆ ಇರುವುದರಿಂದ ಇರುವ ಸುಖ ನೋಡುವುದರಿಂದ ಬರುವ 'ಕಾಮ'ಕ್ಕಿಂತ ಹೆಚ್ಚಿನದೆಂದೂ ತೋರಿತು. ನಾನು ಹುಚ್ಚ ಎನ್ನುವ ಬಿರುದು ನನಗೆ ನಿಂತು ಬಿಟ್ಟಿದೆ. ನಾನೇಕೆ ನಿಜವಾದ ಹುಚ್ಚನಂತೆ ಆಡಬೇಕೆನಿಸಿತು.

ಏನು ಮಾಡಲೂ ತೋಚಲಿಲ್ಲ!

'ಹಾಗೆಯೇ ಕುಳಿತು ಆಲೋಚಿಸಿದೆ. ನನ್ನ ಮನಸ್ಸಿಗೆ ಪ್ರಾಯವೂ ಕಾಮವೂ ಶಾಶ್ವತವಲ್ಲವೆಂದೂ ಎಲ್ಲವೂ ಅಸ್ಥಿರವೆಂದೂ ತೋರಿತು.

'ಮನಸ್ಸಿನಲ್ಲಿ ಅಶಾಂತಿ ತಾಂಡವವಾಡುತ್ತಿತ್ತು. ಮನೆಬಿಟ್ಟು ಹೊರಟೆ. ನಮ್ಮ ದೇಶವನ್ನೆಲ್ಲಾ ಮೂರು ಮೂರು ಬಾರಿ ಸುತ್ತುಹಾಕಿದೆ. ಸಮಸ್ತವೂ ಅವನಲ್ಲಿಗೆ. ಅವನಲ್ಲದುದೆಲ್ಲ ಚ್ಯುತ ಎಂಬ ಭಾವನೆ ಈಗ ಉಂಟಾಗಿದೆ.

ನನಗೆ ತಿಳುವಳಿಕೆಯಿತ್ತು ಆ ತಾಯಿಯನ್ನು ಒಂದು ಬಾರಿ ನೋಡಿ, ವಂದಿಸಿ ಆತನೆಡೆಗೆ ಹೊರಟುಹೋಗುತ್ತೇನೆ'.

*　　*　　*　　*　　*

ಕೆಲವು ದಿನಗಳಿಂದ ಗೋಪಾಳರಾಯನಲ್ಲಿ ಒಂದು ವಿಧವಾದ ಬದಲಾವಣೆಯನ್ನು ಕಂಡಿದ್ದೆ. ಹಗಲೂ ರಾತ್ರಿಯೂ ತುಳಸಿತೋಟದ ಎದುರಿನ ಮಂಟಪದಲ್ಲಿ ಕಣ್ಣುಮುಚ್ಚಿ ಧ್ಯಾನಾಸಕ್ತನಾಗಿ ಕುಳಿತಿರುತ್ತಿದ್ದನು; ಭಿಕ್ಷಕ್ಕೂ ಸಹ ಆತ ಹೆಚ್ಚಾಗಿ ಹೋಗುತ್ತಿರಲಿಲ್ಲ. ಯಾರಾದರೂ ಏನಾದರೂ ಕೊಟ್ಟರೆ ತಿನ್ನುತ್ತಾನೆ, ಇಲ್ಲದಿದ್ದರೆ ಅದೂ ಇಲ್ಲ.

ಅವನ ಕಣ್ಣುಗಳಲ್ಲಿ ಅದೊಂದು ವಿಧವಾದ ಅಪೂರ್ವ ತೇಜಸ್ಸು ಹೊಳೆಯುತ್ತಿತ್ತು!

ಒಂದು ದಿನ ಸಂಜೆ-ಮೆಜೆಸ್ಟಿಕ್ ಥಿಯೇಟರ್ ಬಳಿ ನಾನು ನಿಂತು ಯಾರ ಸಂಗಡಲೋ ಮಾತನಾಡುತ್ತಿದ್ದೆ. ಗೋಪಾಲರಾಯನು ಧರ್ಮಾಂಬುದಿಕಟ್ಟೆಯ ಮೇಲೆ ನನ್ನ ಕಡೆ ಬರುತ್ತಿದ್ದವನು, ಇದ್ದಕ್ಕಿದ್ದಂತೆ ನಿಂತುಕೊಂಡ. ಮೈಯೆಲ್ಲ ಸೆಟೆತುಕೊಂಡಿತು. ಅವನ ದೃಷ್ಟಿ ಹೋದತ್ತ ನೋಡಿದೆ. ಆತ ಒಬ್ಬ ಹೆಂಗಸಿನ ಕಡೆ ನೋಡುತ್ತಿದ್ದ. ಆಕೆ ಒಬ್ಬಾತನೊಡನೆ ಬಳೆಪೇಟೆಯ ಕಡೆಗೆ ಹೋಗುತ್ತಿದ್ದಳು. ಗೋಪಾಲರಾಯನು ಆಕೆಯನ್ನು ಅಡ್ಡಕಟ್ಟಿ 'ಲಲಿತಾ' ಎಂದು ಕೂಗಿಕೊಂಡನು. ಆ ಹೆಂಗಸು ಗಾಬರಿಯಾಗಿ 'ಅಯ್ಯೋ, ಇಲ್ಲಿ ನೋಡೀಂದ್ರೆ! ಹುಚ್ಚ, ಹುಚ್ಚ' ಎಂತ ಕೂಗಿಕೊಂಡಳು. ಆಕೆಗಿಂತ ಸ್ವಲ್ಪ ಮುಂದುವರಿದಿದ್ದ ಆತ ತಕ್ಷಣ ತಿರುಗಿ ಇವನ ಕೆನ್ನೆಗೆ ಎರಡೇಟು ತಾಟಿಸಿದನು. ಒಡನೆಯೇ ಜನ ಕಲೆಯಿತು. ಗೋಪಾಲರಾಯನನ್ನು ಉಪ್ಪಾರ ಪೇಟೆಯ ಪೋಲೀಸ್ ಸ್ಟೇಷನ್ನಿಗೆ ಎಳದೊಯ್ದರು.

ನಾನೂ ಓಡಿಹೋದೆ. ಆದರೆ ಪೋಲೀಸಿನವರು ನಮ್ಮನ್ನೆಲ್ಲ ಅಟ್ಟಿದರು. ಸ್ವಲ್ಪ ಹೊತ್ತಾದ ಮೇಲೆ ಪುನಃ ಪೋಲೀಸ್ ಸ್ಟೇಷನಿಗೆ ಹೋದೆ. ಅಲ್ಲಿ ಗೋಪಾಲರಾಯ ಇರಲಿಲ್ಲ. ಆತನನ್ನು ಬಿಟ್ಟು ಬಿಟ್ಟಿದ್ದರು. ಹುಡುಕಿದೆ; ಸಿಕ್ಕಲಿಲ್ಲ. ಇಂದಿನವರೆಗೂ ಕಾಣಲಿಲ್ಲ.

ಅಚ್ಯುತನೆಡೆಗೆ ಹೋಗಿರಬಹುದೆ? ಯಾರು ಬಲ್ಲರು!!

# 13. ಕಿಟ್ಟು ಕತೆ.

'ಲೋ, ಅಲ್ಲಿ ಹೋಗುತ್ತ ಇರುವವನನ್ನು ನೋಡು.'

'ಯಾಕೊ, ಅವನೇನು ಕೆ. ಡಿ. ಯೇನೊ, ನೋಡೋಕೆ'

'ಅದೇ ನೋಡು, ನಿಮ್ಮ ಜಾತಿ ಬುದ್ಧಿ! (ಅಂದರೆ ಪೋಲೀಸ್ ಜಾತಿ ಬುದ್ಧಿ)ಅವನನ್ನು ನೋಡೋ, ಅಂದರೆ ಅವನು ಕೆ. ಡಿ. ನೇ ಆಗಬೇಕೇ!'

'ಸರಿ, ಬಿಡು ಅಲ್ಲಿಗೆ, ನೋಡಿದೆ, ಏನೂ........'

'ಅವನು ಯಾರು ಅಂದುಕೊಂಡಿದೀಯಾ? ನಮ್ಮ ಬ್ರಾಹ್ಮಣರ ಗರಡಿ ಅಖಾಡ ಕಚ್ಚಾ ಭುಜಂಗ ಇರಲಿಲ್ಲವೇನೋ-ಅವನ ಭಾವನ ಮಗ; ಅಂದರೆ ಹಾಗೆ ಇವನು ಅಖಾಡ ಕಚ್ಚ ಅಲ್ಲ. ಒಳ್ಳೆ ಕುಸ್ತಿಗಾರ; ಜಿಮ್ನಾಸ್ಟಿಕ್ಸ್ ಚೆನ್ನಾಗಿ ಮಾಡ್ತಾನೆ. ಸೀತಾರಾಮಾಚಾರಿ ಇರಲಿಲ್ಲವೇನೋ, ಅವನಿಗೂ ಹಿಂದಿನವನು.'

'ಆ! ಹವ್ವದು ಕಣೊ. ನಮ್ಮ ಕಾಲೇಜಿಗೂ ಒಂದೆರಡು ಸಲ ಬಂದ ಹಾಗೆ ಜ್ಞಾಪಕ ಇದೆ.'

'ಅವನ ಕತೆ ಗೊತ್ತಾ ನಿನಗೆ?'

'ಇಲ್ಲ.'

'ಬಹಳ ಸ್ವಾರಸ್ಯವಾಗಿದೆ; ಹೇಳೇನು; ಕೇಳು-

ಮೊದಲೇ ಕಿಟ್ಟು ತಂದೆತಾಯಿ ಯಾರು ಅಂತ ತಿಳಿಸಿಬಿಡುತ್ತೇನೆ. ನಮ್ಮ ಜೊತೆಯಲ್ಲಿ ಸ್ಕ್ವಾಟು ಆಗಿದ್ದುಕೊಂಡು ಕುಪ್ಪೂರು ಜೋಗ್ ಅಲ್ಲಿಗೆಲ್ಲ ಬಂದಿದ್ದನಲ್ಲೋ ರಘು, ಅವನ ಭಾವ. ಈಗ ದಾವಣಗೆರೆಯಲ್ಲೋ ಶಿವಮೊಗ್ಗೆಯಲ್ಲೋ ಡಾಕ್ಟರೋ ಏನೋ ಅಂತ ಕಾಣುತ್ತೆ. ಅವರ ಒಬ್ಬನೇ ಮಗ. ಅವರಿಗೆ ಬೇರೆ ಯಾರೂ ಮಕ್ಕಳೇ ಇಲ್ಲ. ಅಷ್ಟೇ ಅಲ್ಲ. ಅವರು ಇಬ್ಬರು ಅಣ್ಣತಮ್ಮಂದಿರಿಗೆ ಇವನೊಬ್ಬನೇ ಗಂಡುಮಗ; ಅವನ ಚಿಕ್ಕಪ್ಪನಿಗೂ ಮಕ್ಕಳೇ ಇಲ್ಲ. ಅವರ ಚಿಕ್ಕಪ್ಪನನ್ನೂ ನೀನು ನೋಡೇ ಇದೀಯ; ಯಾರು ಅಂತ ಇದೀಯ, ನಾವು ನಂದಿಯಿಂದ ಸೈಕಲ್ ಮೇಲೆ ವಾಪಸ್ ಬರ್‍ತಾ ಇದ್ದಾಗ ದಾರಿಯಲ್ಲಿ ಮೋಟರು ಕೆಟ್ಟು ಅದರಲ್ಲಿದ್ದ, ಗಂಡ ಅವನ ಶೋಕಿಲಾಲ್ ಹೆಂಡತಿ ಇಬ್ಬರೂ ರಸ್ತೆಯಲ್ಲಿ ನಿಂತಿರಲಿಲ್ಲವೆ, ಅವರೇ. ಈಗ ಅವರೆಲ್ಲೊ ಟ್ರೆಜರಿ ಅಸಿಸ್ಟೆಂಟ್ ಅಂತ ಕಾಣುತ್ತೆ.

ಇದೆಲ್ಲ ನಡೆದದ್ದು ತುಮಕೂರಿನಲ್ಲಿ. ಕಿಟ್ಟು ಚಿಕ್ಕಪ್ಪ ಆಗ ತುಮಕೂರಿನಲ್ಲಿದ್ದರು. ಅವನ ತಂದೆ ದಾವಣಗೆರೆಯಲ್ಲಿದ್ದರು. ಅವನಿಗಿನ್ನೂ ಪರೀಕ್ಷೆ ಆಗುವುದಕ್ಕೆ ಮೊದಲೇ, ಅವರ ಚಿಕ್ಕಮ್ಮ, ಅವನಿಗೆ ಕಾಗದದ ಮೇಲೆ ಕಾಗದ ಹಾಕಿ, ಪರೀಕ್ಷೆ ಆದ ತಕ್ಷಣ ಅವನು ತುಮಕೂರಿಗೆ ಬಂದು ಅಲ್ಲಿಂದಲೇ ದಾವಣಗೆರೆಗೆ ಹೋಗಬೇಕೆಂತ ತಿಳಿಸಿದ್ದರು.

ಕಿಟ್ಟು ಆನರ್ಸ್ ಕ್ಲಾಸಿನಲ್ಲಿ ಓದುತ್ತ ಇದ್ದ. ಅವನ ಜೊತೆಯಲ್ಲಿ ಇನ್ನೂ ಐದು ಜನ ಹುಡುಗರು, ಒಬ್ಬಳು ಹುಡುಗಿ, ಓದುತ್ತಾ ಇದ್ದರು. ಅವರ ಮೇಲಿನ ತರಗತಿಯವರೂ ಕೆಳಗಿನ ತರಗತಿಯವರೂ ಅವರನ್ನು ಪಂಚಪಾಂಡವರು, ದ್ರೌಪದಿ, ಎಂದು ಕರೆಯುತ್ತಿದ್ದರು, ಅಂದರೆ ದ್ರೌಪದೀನೇ ನೋಡಿಕೊ. ಕಿಟ್ಟು ಆರನೆಯವನು, ಕರ್ಣನ ಹಾಗೆ.

ಈ ದ್ರೌಪದಿಗೆ ಕರ್ಣನ ಮೇಲೆ ಅಭಿಮಾನವಿತ್ತು. ಆದೇಕೋ ಕರ್ಣನಿಗೆ ದ್ರೌಪದಿಯ ಮೇಲೆ ಅಷ್ಟು ಅಭಿಮಾನವಿರಲಿಲ್ಲ.

ಕಿಟ್ಟು ಅಂತಹ ವಿದ್ಯಾರ್ಥಿಗಳು ಒಂದು ಬ್ಯಾಚಿಗೆ ಒಬ್ಬರು ಸಿಕ್ಕುವುದು ಅಪರೂಪ. ಅವನು ಘನವಾದ ಆಟಗಾರ ಎಮ್. ಜಿ. ಎಸ್. ಟೂರ್ನಮೆಂಟಿಗೆ ರೆಸಲಿಂಗ್, ಸ್ವಿಮಿಂಗ್, ಫುಟ್‌ಬಾಲ್, ಫೀಲ್ಡ್ ಸ್ಪೋರ್ಟ್ಸ್, ಇವಕ್ಕೆಲ್ಲ ಬರುತ್ತಾ ಇದ್ದ. ಅವನ ಪ್ರೊಫೆಸರ್ ಕೂಡ ಒಳ್ಳೆಯ ಸ್ಪೋರ್ಟ್ಸ್‌ಮನ್ ಆದ್ದರಿಂದ ಇವನ ಮೇಲೆ ಬಹಳ ವಿಶ್ವಾಸ. ಇದಕ್ಕೆ ಸರಿಯಾಗಿ ಅವನು ಚಲೋ ವಿದ್ಯಾರ್ಥಿ ಸಹ. ಸಬ್ಜೆಕ್ಟ್ ಸ್ಕಾಲರ್ ಶಿಪ್ ಸಹ ತೆಗೆದುಕೊಳ್ಳುತ್ತಾ ಇದ್ದ. ಒಳ್ಳೆಯ ಆಟಗಾರ; ಓದುಗಾರ, ಎಲ್ಲರಿಗೂ ಬೇಕಾಗಿದ್ದವನು ಅಂತಲೇ ಅಂತಹ ವಿದ್ಯಾರ್ಥಿಗಳು ಅಪೂರ್ವ ಅಂತ ಹೇಳಿದುದು. ಈಗಿನ ಕಾಲದಲ್ಲಿ ಜಮ್ನಾಸ್ಟಿಕ್ಸ್ ಕಾಂಬಿನೇಶನ್ ಇಲ್ಲ. ಆಗಿನ ಕಾಲದಲ್ಲಿ ಆ ಟೂರ್ನಮೆಂಟುಗಳಿಗೆ ಲೆಖ್ಖವೇ ಇರಲಿಲ್ಲ. ಭಾವಾಜಿ ಮೆಮೋರಿಯಲ್, ಯಶೋನಾಥ್ ಮೆಮೋರಿಯಲ್, ಇನ್ನೂ ಎಷ್ಟೋ. ಆಳಿದ ಮಹಾಸ್ವಾಮಿಯವರು ಸಹ ಎಷ್ಟೋ ರೋಲಿಂಗ್ ಕಪ್ಸ್ ಕೊಟ್ಟಿದ್ದರು. ಎಮ್. ವಿ. ಕೃಷ್ಣರಾವ್ ಇನ್ಸ್ಟಿಟ್ಯೂಟ್ ಮೂಲೆಗೆ ಬಿದ್ದ ಮೇಲೆ, ಆ ಟೂರ್ನಮೆಂಟ್‌ಗಳೂ ಹೋದುವು. ಆ ಕಾಂಪಿಟೀಶನ್‌ಗಳಲ್ಲೆಲ್ಲಾ ಮೊದಲನೆಯ ಬಹುಮಾನ ಕಿಟ್ಟುವಿಗೇ. ಅವನ ಹೆಸರು ಕಸ್ತೂರಿಯ ವಾಸನೆ ಹರಡುವ ಹಾಗೆ ಎಲ್ಲ ಕಡೆ ಹರಡಿತ್ತು.

ಅವನನ್ನು ನೋಡ್ತೀ ಇದೀಯಲ್ಲ, "5-11½" ಅಂಗುಲದ ಆಳು; ಕೆಂಪು ಬಣ್ಣ. ಅಗಲವಾದ ಎದೆ. ಭೀಮಸೇನ ಇದ್ದ ಹಾಗೆ ಇದ್ದ ಅನ್ನು ವುದಕ್ಕಿಂತ ಹರ್ಕ್ಯುಲೀಸ್ ಸ್ಟ್ಯಾಚೂ ಇದೆಯಲ್ಲ, ಹಾಗೆ.

ಒಂದು ಸಲ ನಾವು ಬೆಂಗಳೂರಿಗೆ ಹೋಗಿದ್ದೆವು. ನಮ್ಮವರ ಪೈಕಿ ವೆಯಿಟ್ ಲಿಫ್ಟರ್ಸ್ ಯಾರೂ ಬಂದಿರಲಿಲ್ಲ. ಸೆಂಟ್ರಲ್ ಕಾಲೇಜಿನ ರಾಮ ರೆಡ್ಡಿಯನ್ನು ನೋಡಿದ್ದೆಯಲ್ಲ--ಧಾಂಡಿಗ; ಅವನು ತನ್ನ ಸಾಹಸವನ್ನೆಲ್ಲ ನಮ್ಮ ಮುಂದೆ ತೋರಿಸಿ, ಜಂಭ ಹೊಡೆದುಕೊಳ್ಳುತ್ತಾ ಇದ್ದ. ನನ್ನ ಕೈಲಾದಷ್ಟು ಮಟ್ಟಿಗೆ ನಾನೂ ನಮ್ಮವರೆಲ್ಲರಿಗಿಂತಲೂ ಹೆಚ್ಚಾಗಿಯೇ ಎತ್ತಿದೆ. ಆದರೆ ನಾನು ಲೈಟ್ ವೈಟ್; ಅವನು ಹೆವಿ ವೈಟ್. ಅವನಷ್ಟು ನನ್ನ ಕೈಯಲ್ಲಿ ಎತ್ತುವುದಕ್ಕಾಗುತ್ತದೆಯೇ? ಈ ಕಿಟ್ಟು ಒಂದು ಪಂಚೆ ಉಟ್ಟುಕೊಂಡು, ನಾರಣಯ್ಯರ್ ಹೋಟೆಲ್ ಕಡೆಯಿಂದ ಬಂದವನೇ, ಅವನು ಎತ್ತಿದ್ದ ವೈಟ್ ಎಲ್ಲ ಮೊದಲನೆಯ ಸಲಕ್ಕೇ ಎತ್ತಿಬಿಟ್ಟ! ಅವನು ಮುಕ್ಕರಿದು ಎತ್ತುವುದೆಲ್ಲ ಇವನಿಗೆ ಲೀಲಾಜಾಲ! ಅವನು ಜೆರ್ಕ್ ಮಾಡು ವಷ್ಟು ಇವನು ಮಿಲಿಟರಿ ಪ್ರೆಸ್ ಮಾಡಿದ! ರಾಮರೆಡ್ಡಿಯ ಜಂಭ ಅಲ್ಲಿಯೇ ಅಡಗಿಹೋಗಿ, ಉಸಿರೇ ಎತ್ತಲಿಲ್ಲ.

ಇದನ್ನೆಲ್ಲ ನಾನು ಯಾಕಿಷ್ಟು ಲಂಬವಾಗಿ ಹೇಳ್ತಿದ್ದೇನೆ—ಎಂದರೆ ಕಿಟ್ಟು ಎಂಥಾವನು ಅನ್ನುವ ಅಭಿಪ್ರಾಯ ನಿನ್ನ ಮನಸ್ಸಿಗೆ ಬರಲಿ, ಅಂತ. ಇಷ್ಟೇ ಅಲ್ಲ, ಕಬ್ಬಿಣದ ಕಂಬಿ ಬಗ್ಗಿಸುವುದು, ಮೊಳೆ ಬಗ್ಗಿಸುವುದು, ಒಟ್ಟೊಟ್ಟಿಗೆ ಇಸ್ಪೇಟು ಪ್ಯಾಕ್‌ಗಳನ್ನು ಹರಿಯೋದು, ಎರಡು ಬೆಟ್ಟಿನಲ್ಲಿ ನಿಂಬೆ ಹಣ್ಣು ಕತ್ತರಿಸುವುದು. ನಮಗೆ ಕಲ್ಲು ಕಬ್ಬಿಣವಾಗಿದ್ದುದೆಲ್ಲ ಅವನಿಗೆ ಬೆಣ್ಣೆ ನೋಡಿಕೊ.

ಪರೀಕ್ಷೆ ಮುಗಿದ ಮೇಲೆ ಇವನ ಜೊತೆಯ ಹುಡುಗರೂ ಉಪಾಧ್ಯಾಯರೂ ಒಂದು ಸಂತೋಷ ಕೂಟವನ್ನು ಏರ್ಪಡಿಸಿದರು. ಅದರಲ್ಲಿ ದ್ರೌಪದಿ ಇವನನ್ನು ಏಕಾಂತಕ್ಕೆಳೆದು ಅವನನ್ನು ತನ್ನ ಬುಟ್ಟಿಯಲ್ಲಿ ಹಾಕಿಕೊಳ್ಳಬೇಕೆಂತ ಎಷ್ಟೆಷ್ಟೋ ಸಾಹಸಪಟ್ಟಳು. ಆದರೆ ಅವನು ಒಪ್ಪಲಿಲ್ಲ. ಬೇಡಿಕೊಂಡಳು, ಗೋಗರೆದಳು, ಏನಾದರೂ ಇಲ್ಲ. ಕೊನೆಯಲ್ಲಿ ಆಕೆಗೆ 'ಕಾಮಾತ್ ಕ್ರೋಧೋಭಿಜಾಯತೆ' ಎನ್ನುವ ಹಾಗೆ ಕೋಪ ಏರಿತು.

'ನಾನು ಎಷ್ಟು ಬೇಡಿಕೊಂಡರೂ ನನ್ನ ಪ್ರಾರ್ಥನೆ ನೀನು ಲಾಲಿಸ

ಲಿಲ್ಲ. ನೀನು ಬೇಕೆಂತ ನನ್ನ ಗೋಳಾಡಿಸಲು ಹೀಗೆ ಮಾಡಿರುತ್ತೀಯ;
ಪ್ರಪಂಚದಲ್ಲಿ ಹೆಂಗಸಿಗೆ ಬಗ್ಗದೆ ಇರುವ ಗಂಡಸು ಯಾರಾದರೂ ಇದ್ದಾರೆಯೆ! ನಾನು ನೋಡಿಯೇ ನೋಡುತ್ತೇನೆ—ನಾನು ನಿನ್ನಲ್ಲಿ ಗೋಗರೆದಾಗ ನೀನು ಎಷ್ಟು ಕಠಿಣಚಿತ್ತನಾಗಿ ಕುಳಿತಿರುವೆಯೋ ಹಾಗೆಯೇ ನಿನಗೆ ಕಷ್ಟಕಾಲ ಬಂದು, ನಿನಗೆ ನಾನು ಸಹಾಯಮಾಡುವ ಸ್ಥಿತಿಬಂದಾಗ, ನಾನೂ ಹೀಗೆಯೇ ಮಾಡುತ್ತೇನೆ. ನನ್ನ ಹೆಸರು ನಿನಗೆ ಸಾಯುವವರೆಗೂ ನೆನಪು ಇರುವ ಹಾಗೆ ಮಾಡದೆಹೋದರೆ ನಾನು ದ್ರೌಪದಿ ಯಾಕಾದೇನು, ನೋಡೋಣ' ಅಂತ ಗುಡುಗಿದಳು.

ಕುಲುಕು, ಒನಪು, ವಯ್ಯಾರ, ಕಡೆಗಣ್ಣ ಕಟಾಕ್ಷ---ಇಂತಹ ಮನಮೋಹಕ ವಿಲಾಸ ಚೇಷ್ಟೆಗಳಿಗೆ ಅಲ್ಲಾಡದ ಮನಸ್ಸು, ಬೆದರಿಕೆಗೆ ಅಲ್ಲಾಡುತ್ತದೆಯೆ?

ರಜವೂ ಬಂತು. ಅವರ ಚಿಕ್ಕಮ್ಮ ಬರೆದಿದ್ದಂತೆ ಕಿಟ್ಟು ಮೊದಲು ತುಮುಕೂರಿಗೇ ಹೋದ; ಅಲ್ಲಿ ಎರಡು ದಿನ ಇದ್ದು, ಆ ಮೇಲೆ ಅವನ ತಂದೆ ತಾಯಿಗಳಿರುವ ಕಡೆ ಹೋಗೋಣ ಅಂತ.

ಅಲ್ಲಿ ಎರಡೇ ದಿನಕ್ಕೆ ಅವನಿಗೆ ಬೇಜಾರು ಬಂತು. ಹಗಲೂ ರಾತ್ರಿಯೂ ಜನರ ಸಮುದಾಯದಲ್ಲಿ ಗಲಾಟೆ ಮಾಡಿಕೊಂಡು ಓಡ್ಯಾಡುತ್ತ ಇದ್ದವನಿಗೆ, ಒಂಟಿಯಾಗಿ ಮೂದೇವಿಯ ಹಾಗೆ ಇರಬೇಕು ಎಂದರೆ ಸಾಧ್ಯವೇ? ಅಷ್ಟೇ ಅಲ್ಲದೆ ಅಲ್ಲಿ ಅವನಿಗೆ ಕಸಬಾದರೂ ಏನಿದೆ?

ಇವನ ಮನೆ ಇದ್ದದು ಕೃಷ್ಣರಾಜೇಂದ್ರ ಎಕ್ಸ್ಟೆನ್ಷನ್ನಿನಲ್ಲಿ. ಆದ್ದರಿಂದ ಬೆಂಗಳೂರು ರಸ್ತೆಯಲ್ಲೋ ಬೆಂಗಳೂರು ಕಡೆ ಹೋಗುವ ರೈಲ್ವೆ ಲೈನಿನ ಮೇಲೋ, ಪ್ರತಿ ದಿನ ಸಾಯಂಕಾಲ, ಬೆಳಿಗ್ಗೆ ವಾಕಿಂಗ್ ಹೋಗುತ್ತ ಇದ್ದ.

ಗರಡಿ ಚಿಕ್ಕನಪಾಳ್ಯದ ಕಡೆಯಿಂದ ರೈಲು ಕಂಬಿ ದಾಟಿಕೊಂಡು ದಕ್ಷಿಣಕ್ಕೆ ಬಂದು, ರಸ್ತೆ ಆ ಕಡೆ ಹಳ್ಳಿಗಳಿಗೆ ಹೋಗುತ್ತೆ. ಅಲ್ಲಿ ಒಂದು ಲೆವೆಲ್ ಕ್ರಾಸಿಂಗ್ ಗೇಟು; ಆ ಗೇಟು ತೆಗೆಯಲು ಮುಚ್ಚಲು ಒಬ್ಬ ಕಾವಲುಗಾರ; ಆ ಕಾವಲುಗಾರನಿಗೆ ಅಲ್ಲಿಯೇ ಒಂದು ಮನೆ (ಈಗ ಅಲ್ಲಿ ಕಾವಲುಗಾರ ಇಲ್ಲ; ಮನೆ ಹಾಳು ಬಿದ್ದಿದೆ.)

ಕಿಟ್ಟು ಆ ಊರಿಗೆ ಬಂದ ಎರಡನೆಯ ದಿನದ ಸಾಯಂಕಾಲ ಆ ಕಡೆ.

ವಾಕಿಂಗ್ ಹೊರಟು ಆ ಮನೆಯ ಮುಂದೆ ಹಾದುಹೋಗುವುದರಲ್ಲೇ 'ಯಾರದು?' ಎಂತ ಉರ್ದು ಭಾಷೆಯಲ್ಲಿ ಘರ್ಜಿಸುತ್ತ, ಒಬ್ಬ ಮುಸಲ್ಮಾನರ ಮುದುಕಮ್ಮ ಆ ಮನೆಯಿಂದ ಈಚೆ ಬಂದಳು. ಕಿಟ್ಟು 'ಯಾಕಮ್ಮಾ' ಎಂತ ಕೇಳಿದ. ಆಕೆ 'ನಮ್ಮ ಜನದವರೇನೋ, ಘೋಷಾ ಮನೆಯ ಮುಂದೆ ಯಾರು ಇಷ್ಟು ಧೈರ್ಯವಾಗಿ ಓಡಾಡುವವರು, ಅಂತ ಕೂಗಿದೆ. ನೀವೇ? ಹೋಗಿ ಸ್ವಾಮಿ' ಎಂದಳು.

ಕಿಟ್ಟು ಮುಂದಕ್ಕೆ ಹೋಗಬೇಕು, ಅಷ್ಟರಲ್ಲಿ ಇವನ ಜುಬ್ಬ ಹಿಡಿದು ಎಳೆದ ಹಾಗಾಯಿತು. ಹಿಂತಿರುಗಿ ನೋಡುತ್ತಾನೆ—ಒಂದು ನಾಯಿ. ನೋಡಿದರೆ ಎದೆನಡುಕ ಬರುವಷ್ಟು ದೊಡ್ಡದು! ಗುರ್ ಅನ್ನುತ್ತ ಇದೆ!

ಆ ಮುದುಕಮ್ಮ 'ಏ ಟುಂಗು, ಛೋಡ್ರೆ' ಎಂತ ಅವರ ಮಾತಿನಲ್ಲಿ ಒಂದು ಕೂಗುಹಾಕಿ ಹೇಳಿದಳು. ಉತ್ತರಕ್ಷಣದಲ್ಲಿಯೇ ಆ ನಾಯಿ ತಾನು ಕಚ್ಚಿಹಿಡಿದಿದ್ದ ಬಟ್ಟೆಯನ್ನು ಬಿಟ್ಟು, ಬಾಲ ಅಲ್ಲಾಡಿಸುತ್ತ ನಿಂತುಕೊಂಡಿತು. ನಾಯಿ ನೋಡುವುದಕ್ಕೆ ಚೆನ್ನಾಗಿತ್ತು. ಅದನ್ನು ಮುಟ್ಟಬೇಕೆಂತ ಕಿಟ್ಟುವಿಗೆ ಮನಸ್ಸಾಯಿತು. ಅದನ್ನು ಮುಟ್ಟಲು ಕೈ ಎತ್ತಿದರೆ ಅದು ಗುರ್ರೆಂತ ಘರ್ಜಿಸಿ, ಕೈಗೆ ಬಾಯಿಹಾಕಲು ಹೋಯಿತು. ಪುನಃ ಆ ಮುದುಕಮ್ಮ ಅವರ ಮಾತಿನಲ್ಲೇ 'ಸುಮ್ಮನಿರು, ಹೋಗು ಅವರ ಬಳಿ' ಅಂತ ಹೇಳಿದಳು. ಪುನಃ ನಾಯಿ ಒಡನೆಯೇ ಅದರ ಸಹಜ ಗುಣವನ್ನು ತ್ಯಜಿಸಿ ಶಾಂತಿಯಿಂದ ಸುಮ್ಮನೆ ನಿಂತಿತು. ಕಿಟ್ಟು ಮುಟ್ಟಿ, ಮೈ ತಡವಿ, ತಟ್ಟಿದರೂ ಸುಮ್ಮನಿತ್ತು. ಅವನು ಅದರ ಗುಣ ನೋಡಿ ಅದರ ಪೂರ್ವೋತ್ತರ ವಿಚಾರಿಸುತ್ತಾ, ಮುದುಕಮ್ಮನ ಪರಿಚಯವನ್ನು ಬೆಳೆಸಿದನು. ಹಾಗೆಯೇ ನಾಯಿಗೂ ಅವನಿಗೂ ಪರಿಚಯ ಬೆಳೆದು, ಅವನು ಅತ್ತ ಸಂಜೆ ಗಾಳಿ ಸಂಚಾರ ಹೊರಟರೆ, ಇದೂ ಅವನ ಹಿಂದೆ ಹೋಗುವುದು, ಬರುವುದು-ಹೀಗೆ ಮಾಡುತ್ತಿತ್ತು.

ತುಮಕೂರಿಗೆ ಕಿಟ್ಟು ಬಂದ ಮೂರು ನಾಲ್ಕು ದಿನಗಳಾದ ಮೇಲೆ, ಒಂದು ದಿನ ಸಾಯಂಕಾಲ ರೈಲ್ವೆ ಲೈನ್ ಮೇಲೆ ಹೋಗುತ್ತಾ ಇರಬೇಕಾದರೆ, ಅಕ್ಕಪಕ್ಕದ ಮರಗಳ ಮೇಲೆ ಕೋತಿಗಳು ವಿಧವಿಧವಾಗಿ ಲಾಗ ಹಾಕಿಕೊಂಡು ಕುಣಿದಾಡುತ್ತಿರುವುದನ್ನು ನೋಡಿದ. ಅವುಗಳ ಪೈಕಿ ಒಂದು, ಎರಡು ಕೈಗಳ ಮೇಲೆ ನಿಂತು ಮುಂದಕ್ಕೆ ನೆಗೆಯಿತು. ಅದು

ಗಿಡದ ಮೇಲೆ ಹಾಗೆ ಫುಲ್ ಆರ್ಮ್ ಬ್ಯಾಲೆನ್ಸ್ ಮಾಡುವಂತೆ, ತಾನು ರೈಲ್ವೆ ಕಂಬಿಯ ಮೇಲೆ ಮಾಡುವುದಕ್ಕಾಗುತ್ತದೆಯೇ ನೋಡೋಣ, ಅಂತ ಆ ಕಂಬಿಯ ಮೇಲೆ ಒಂದು ಕೈ, ಈ ಕಂಬಿಯ ಮೇಲೆ ಒಂದು ಕೈ ಇಟ್ಟು ಬ್ಯಾಲೆನ್ಸ್ ಮಾಡಿದ. (ಮೀಟರ್‌ಗೇಜ್ ಕಂಬಿಗಳ ಮೇಲೆ ಕೈಯಿಟ್ಟು ಫುಲ್ ಆರ್ಮ್ ಬ್ಯಾಲೆನ್ಸ್ ಮಾಡುವುದು ಕಷ್ಟವಾದ ಕೆಲಸ—ಲೇಖಕ)

ಇವನು ಬ್ಯಾಲೆನ್ಸ್ ಮಾಡುತ್ತಿದ್ದ ಜಾಗ ಒಂದು ಕೋನಿ. ಈ ಕಡೆ ಇರುವವರಿಗೆ ಆ ಕಡೆಯುವರೂ ಆ ಕಡೆಯುವರಿಗೆ ಈ ಕಡೆಯುವರೂ ಕಾಣಿಸುವುದಿಲ್ಲ. ಆ ಪ್ರದೇಶದಲ್ಲಿ ರೈಲು ಟ್ರೆಂಚಿನಲ್ಲಿ ಓಡುತ್ತೆ.

ಕಿಟ್ಟು ಇನ್ನೂ ಅದೇ ಸ್ಥಿತಿಯಲ್ಲಿರುವಾಗಲೇ ಟುಂಗುವಿನೊಡನೆ ಇನ್ನೊಂದು ನಾಯಿ ಜಗಳವಾಡುವ ಶಬ್ದವೂ, ಆ ಶಬ್ದದೊಡನೆ 'ಅಮ್ಮಾ, ಅಲ್ಲಿ ನೋಡೆ, ಸರ್ಕಸ್' ಎಂತ ಯಾರೋ ಮಾತನಾಡಿದುದೂ ಕೇಳಿಸಿತು.

ಕಾಲ ಮೇಲೆ ಬಂದು ನೋಡುತ್ತಾನೆ! ಬಲವಾದ ಜಾತಿ ನಾಯಿಯೊಂದು ಟುಂಗುವಿನೊಡನೆ ಯುದ್ಧಮಾಡಲು ಸನ್ನಾಹ ಮಾಡುತ್ತಿದೆ. ಟುಂಗುವೂ 'ನಾನೇನು ಕಡಿಮೆ?' ಎನ್ನುತ್ತಿದೆ. ನಗೆ ಅತ್ಯಲ್ಪ ದೂರದಲ್ಲಿ ಸುಮಾರು ೪೦-೪೨ ವರ್ಷ ವಯಸ್ಸಿನ ಒಳ್ಳೆಯ ಬೆಲೆ ಬಾಳುವ ಸೂಟ್ ಧರಿಸಿದ್ದ ಒಬ್ಬಾತ, ಆತನೊಡನೆ ಒಬ್ಬ ಹೆಂಗಸು, ೧೬-೧೮ ವರ್ಷದ ಹುಡುಗಿ ಬರುತಿದ್ದಾರೆ. ಅವರೂ ಒಳ್ಳೆಯ ಉಡುಪು ಧರಿಸಿ, ನೋಡುವುದಕ್ಕೆ ಮಧ್ಯಮ ಶ್ರೇಣಿಯ ಮೇಲ್ಮಟ್ಟಿನ ಸ್ಥಿತಿಯುವರಂತೆ ಕಾಣಿಸುತ್ತಿದ್ದಾರೆ.

ಕಿಟ್ಟು ಅನೇಕ ಬಾರಿ ಪ್ರದರ್ಶನಗಳಲ್ಲಿ ಭಾಗವಹಿಸಿದ್ದರೂ, ಅನೇಕರು ಇದಕ್ಕಿಂತ ಹೆಚ್ಚಿನ ಕೃತ್ಯಗಳನ್ನು ಅವನು ಮಾಡಿದುದನ್ನು ನೋಡಿದ್ದರೂ ಅವೇಕೋ, ಆ ಸ್ಥಿತಿಯಲ್ಲಿ ಇವರ ಕಣ್ಣಿಗೆ ಬಿದ್ದೆನಲ್ಲ, ಎಂತ ನಾಚಿಗೆಯಾಗಿ, ತನ್ನ ಮುಖವನ್ನು ಒಂದು ಕಡೆ ತಿರುಗಿಸಿಕೊಂಡು ನಿಂತುಬಿಟ್ಟ. ಬಹುಶಃ ಸಮಯ ಸನ್ನಿವೇಶಗಳು ಸರಿಯಾಗಿರಲಿಲ್ಲವೆನಿಸಿರಬಹುದು.

ಆದರೆ ವಿಧಿ ಸುಮ್ಮನಿರಬೇಕಲ್ಲ! ಇವನು ಮುಖ ತೋರಿಸಬಾರದು ಎಂತ ಮಾಡಿದ್ದರೂ, ಇವನು ಯಾವಕಡೆಯಿಂದ ಮುಖ ತಿರುಗಿಸಿಕೊಂಡಿದ್ದನೋ, ಆ ಕಡೆಯೇ ಅವರು ಬಂದರು. ತನ್ನ ಮುಖ ಅವರೇಕೆ ನೋಡಬೇಕು–ಎಂತ ಕಿಟ್ಟು ಮುಖ ಇನ್ನೊಂದು ಕಡೆ ತಿರುಗಿಸಿದರೆ, ಆಕೆ ಮತ್ತು

ಆ ಹುಡುಗಿ ಇಬ್ಬರೂ ಇವನ ಕಡೆ ನೋಡುತ್ತಿರಬೇಕೆ!

·ಅದರಲ್ಲೂ ಆ ಹುಡುಗಿಯ ಕಣ್ಣುಗಳು!

ಒಂದೆರಡು ದಿನ ಕಿಟ್ಟು ಅತ್ತ ಹೋದಾಗ ಅವರು ಬರಲಿಲ್ಲ. ಆ ಸ್ಥಳಕ್ಕೆ ಬಂದೊಡನೆಯೇ ಕಿಟ್ಟುವಿಗೆ ಅಂದಿನ ಘಟನೆ ಜ್ಞಾಪಕಕ್ಕೆ ಬರುತ್ತಿತ್ತು. ಅದರ ಹಿಂದೆ ಆ ಹುಡುಗಿಯ ಕಣ್ಣುಗಳು!

ಆ ಕಣ್ಣುಗಳಲ್ಲಿ ಅಂದು ಕಿಟ್ಟು, ಆಶ್ಚರ್ಯ, ಶ್ಲಾಘನೆ ಮತ್ತು ಇನ್ನೂ ನೋಡಬೇಕೆಂಬ ಕುತೂಹಲ ಇವುಗಳನ್ನು ಕಂಡಿದ್ದ. ಅವನಿಗೆ ಮೊದ ಮೊದಲು ಆ ದೃಶ್ಯವನ್ನೂ ಆ ಕಣ್ಣುಗಳನ್ನೂ ನೆನೆಸಿಕೊಂಡಲ್ಲಿ ನಾಚಿಕೆಯಾಗುತ್ತಿತ್ತು. ಕೊನೆಕೊನೆಗೆ ಆ ಕಣ್ಣುಗಳಲ್ಲಿ ಅವನು ಕಂಡ ಭಾವನೆಗಳಿಂದ ಒಂದು ವಿಧವಾದ ಸಂತೋಷ, ತೃಪ್ತಿಯುಂಟಾಗುತ್ತಿತ್ತು.

ಕಿಟ್ಟುವು ಕಾಲೇಜಿನಲ್ಲಿ ಓದುತ್ತಿದ್ದಾಗ ಎಷ್ಟೋ ಹುಡುಗಿಯರು ಅವನಿಗಾಗಿ ಮನಸೋತಿದ್ದುದನ್ನು ಅವನು ಕಂಡಿದ್ದ. ಆದರೆ ಅವನ ಮನ ಚಲಿಸಿರಲಿಲ್ಲ. ಎಷ್ಟೋ ರೂಪವತಿಯರು ತಮ್ಮ ಮನಸ್ಸಿನಲ್ಲಿದ್ದುದನ್ನು ಅವನ ಮುಂದೆ ಸ್ಪಷ್ಟವಾಗಿಯೂ ಅಸ್ಪಷ್ಟವಾಗಿಯೂ ವ್ಯಕ್ತಪಡಿಸಿದ್ದರೂ ಇವನ ಮನಸ್ಸಿನ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟು ಮಾಡಿರಲಿಲ್ಲ.

ಆದರೆ ಆ ಕಣ್ಣುಗಳೇಕೋ ಅವನ ಹೃದಯವನ್ನು ಕಲಕಿದ್ದುವು

ಆ ಕಣ್ಣುಗಳನ್ನೂ, ಆ ಕಣ್ಣುಗಳುಳ್ಳ ಆ ಹುಡುಗಿಯನ್ನೂ ಮತ್ತೊಂದು ಬಾರಿ ನೋಡಬೇಕೆನಿಸಿತ್ತು ಅವನಿಗೆ. ಆ ಕಣ್ಣುಗಳನ್ನು ಅವನು ಕಂಡ ಕಾಲ ಕ್ಷಣ ಕ್ಷಣಕ್ಕೂ ದೂರವಾಗುತ್ತಿದ್ದರೂ, ಅದರಲ್ಲಿ ಅವನು ಓದಿದ್ದ ಭಾವನೆ ಅಷ್ಟಷ್ಟೇ ತೀವ್ರವಾಗಿ ತೋರುತ್ತಿತ್ತು.

ಅವರು ಕೆಲದಿನ ಬಾರದಿದ್ದರೂ, 'ಅವರು ಬರಬಹುದು, ಆ ದೃಷ್ಟಿ ಪುನಃ ತನ್ನ ಮೇಲೆ ಬೀಳಬಹುದು' ಎನ್ನುವ ಅವನ ಆಶೆ ತೀರಿರಲಿಲ್ಲ. ಪ್ರತಿ ಸಂಜೆ, ಅವರು ಬಾರದಿದ್ದುದಕ್ಕೆ ಹತಾಶನಾದರೂ ಮರಳಿ ಮಾರನೆಯ ದಿನಕ್ಕೆ ಎದುರು ನೋಡುತ್ತಿದ್ದ.

ಕಿಟ್ಟುವು ಬಹಳ ಕಾಲ ಕಾಯಬೇಕಾಗಿರಲಿಲ್ಲ ಮರಳಿ ಆ ಕಣ್ಣುಗಳನ್ನು ನೋಡಿದ. ಆ ಕಣ್ಣುಗಳನ್ನು ನೋಡಬೇಕೆಂತ ತನಗೆ ಎಷ್ಟು ಆತುರತೆ ಇತ್ತೋ ತನ್ನನ್ನು ನೋಡಲು ಅಷ್ಟೇ ಕಾತುರತೆ ಸಹ ಆ

ಕಣ್ಣುಗಳಲ್ಲಿ ಇದೆ ಎಂತ ಭಾವಿಸಿದ.

ತಾನು ಎಷ್ಟು ಆಶೆಯಿಂದ ಅತ್ತ ನೋಡಿ, ಇಷ್ಟವಿಲ್ಲದಿದ್ದರೂ ಡೀಸೆನ್ಸಿಗಾಗಿ ಹೆದರಿ, ತನ್ನ ಕಣ್ಣುಗಳನ್ನು ಬೇರತ್ತ ತಿರುಗಿಸುತ್ತಿದ್ದನೋ, ಹಾಗೆಯೇ ಆ ಕಣ್ಣುಗಳೂ ಆತುರತೆಯಿಂದ ಅವನತ್ತ ನೋಡಿ ದೃಷ್ಟಿಯನ್ನು ಇಷ್ಟವಿಲ್ಲದೆ ಬೇರತ್ತ ಹೊರಳಿಸುತ್ತಿತ್ತೆಂದು ಭಾವಿಸುತ್ತಿದ್ದವು.

ಒಂದು ದಿನ ಸಂಜೆ ಕಿಟ್ಟು ತಿರುಗಾಡಲು ಹೊರಡುವುದು ಸಾವಕಾಶವಾಯಿತು. ಸೂರ್ಯನು ಮುಳುಗಿದ್ದ. ಮೋಡದ ರಾಶಿಗಳು—ನಾವು ಮುಂದು, ತಾವು ಮುಂದು ಎಂತ ಓಡಿಯೋಡಿ ಬರುತ್ತಿದೆಯೋ ಎಂಬಂತೆ ಬಂದು ಕಿಟ್ಟು ಹೈಸ್ಕೂಲ್ ಮೈದಾನ ದಾಟುವುದಕ್ಕೆ ಮೊದಲೇ, ಮಳೆ ಹನಿ ದಪ್ಪ ದಪ್ಪನಾಗಿ ಬೀಳಲು ಪ್ರಾರಂಭವಾಗಿ, ಏನು ಮಾಡಬೇಕೆಂದು ಕೊಳ್ಳುವುದರೊಳಗಾಗಿ, ಗರಡಿ ಚಿಕ್ಕಸಪಾಳ್ಯದ ಕಡೆ ಇರುವ ಹೈಸ್ಕೂಲು ವರಾಂಡದಲ್ಲಿ ಓಡಿಬಂದು ನಿಂತುಕೊಳ್ಳುವಂತೆ ಮಾಡಿತು.

ಮಳೆ ನಿಲ್ಲುವುದೇನೋ ಎಂತ ಕಿಟ್ಟು ಅರ್ಧ ಗಂಟೆ ಕಾಲ ನೋಡಿದ, ಮುಕ್ಕಾಲು ಗಂಟೆ ನೋಡಿದ. ನಿಲ್ಲಲೇ ಇಲ್ಲ. ಕಾಯಲು ಬೇಸರಿಕೆಯೂ ಯಿತು. ಏಕೆ ಕಾಯಬೇಕು, ಸಾಧನೆ ಏಕೆ ಮಾಡಬಾರದು-ಎಂತ ಅಂದುಕೊಂಡು, ಎಣಿಕೆ ಹಾಕುತ್ತ, ದಂಡೆ ಹೊಡೆಯಲು ಪ್ರಾರಂಭಿಸಿದ.

ಸವಾಲ್ ಜವಾಬ್ ಕೊಟ್ಟುಕೊಂಡು, ಎಣಿಕೆ ಹಾಕುತ್ತ, ದಂಡೆ ಹೊಡೆಯುತ್ತಿದ್ದರೆ ಕೇಳಿದಷ್ಟೂ ಕೇಳಬೇಕೆನಿಸುತ್ತದೆ.

ಕಿಟ್ಟು 'ಹಜಾರ್‌ದಂಡ್' ಎಂತ ಹೆಸರುಪಡೆದಿದ್ದವನು. ಸುಮಾರು ಎಂಟುನೂರು ದಂಡೆ ಹೊಡೆದಿರಬಹುದು. ಅವನ ವಿಶಾಲವಾದ ಹಣೆಯ ಮೇಲೆ ಅಲ್ಲೊಂದು ಇಲ್ಲೊಂದರಂತೆ ಬೆವರು ಹನಿ ಮೂಡಿತ್ತು.

ತನ್ನ ಕೆಲಸದಲ್ಲಿ ಮಗ್ನನಾಗಿದ್ದ ಕಿಟ್ಟುವಿಗೆ ಮಳೆ ಪೂರ್ತಿ ನಿಂತು ಹೋಗಿದೆ ಎನ್ನುವ ಅರಿವು ಸಹ ಇರಲಿಲ್ಲ.

ಅಷ್ಟರಲ್ಲಿ ಯಾರೋ ಮಾತನಾಡಿದ ಹಾಗೆ ಅಸ್ಪಷ್ಟವಾಗಿ ಕಿಟ್ಟುವಿಗೆ ಕೇಳಿಸಿತು. 'ಆ ವರಾಂಡದಲ್ಲಿ ಯಾಗೋ ಹಾಡ್ತಾ ಇದ್ದಾರೆ. ಈ ಕತ್ತಲಲ್ಲಿ ನನಗೇಕೋ ಭಯವಾಗುತ್ತೆ.'

'ಭಯವೆಂದರೇನೆ, ನಿಂದು ಬಹಳ ಅತಿ ಕಣೆ'

ಒಡನೆಯೇ ಫ್ಲಾಷ್ ಲೈಟಿನ ಬೆಳಕು. ಕಿಟ್ಟು ಎದ್ದು ನಿಂತ; ಅವನ

ಮುಖಕ್ಕೆ ಬಿತ್ತು. ಕಣ್ಣು ಚುಚ್ಚುವಂಥ ಬೆಳಕು! 'ಬ್ಯಾಡ್ ಮ್ಯಾನರ್ಸ್ ಪ್ಲೀಸ್' ಎಂತ ಕಿಟ್ಟು ಘರ್ಜಿಸಿ, ಮುಖಕ್ಕೆ ಆಟೊಮ್ಯಾಟಿಕ್ ಆಗಿ ಕೈ ಒಯ್ದ. ದೀಪದ ಬೆಳಕು ತಗ್ಗಲಿಲ್ಲ; ದೇಹ ಅತ್ತ ತಿರುಗಿಸಿದ.

ವಿಶಾಲವಾದ, ಮಾಂಸಪುಷ್ಟವಾದ ಎದೆ; ಸಾಧನೆ ಮಾಡುತ್ತಿದ್ದುದರಿಂದ, ವೇಗದಿಂದಲಾದರೂ, ನೋಡಲು ಅಸಹ್ಯವಾಗದ ಉಸಿರಾಡುವಿಕೆಯಿಂದ, ಏರಿಳಿತವಾಗುತ್ತಿತ್ತು. ಉಕ್ಕಿನ ಕಂಭದಂತಿದ್ದ ಬಾಹುಗಳು; ತೊಡೆಗಳು. ಸಣ್ಣ ನಡು; ಬೆನ್ನಿಗೆ ಅಂಟಿಕೊಂಡು ಹೋಗಿದ್ದ ಹೊಟ್ಟೆ. ಅಲ್ಲಲ್ಲಿ ಮೇಲೆದ್ದು ಕಾಣುವ ರಕ್ತನಾಳಗಳು.

ಹಣೆಯ ಮೇಲೆ ಇಲ್ಲೊಂದು ಅಲ್ಲೊಂದರಂತೆ ಆಗತಾನೆ ಮೂಡುತ್ತಿದ್ದ ಬೆವರು ಹನಿ; ಬಾಚಿದ್ದರೂ ಹದ್ದುಮೀರಿ ಅಲ್ಲಲ್ಲಿ ಹಣೆಯ ಮೇಲೆ ಬಿದ್ದಿದ್ದ ಅಚ್ಚ ಕರಿಯ ಕೂದಲು!

ಕೈಯೆತ್ತಿದೊಡನೆಯೇ ಒಂದು ಕೈಯಿಂದ ಆಕಾಶವನ್ನು ಹೊತ್ತುಕೊಂಡು, ಇನ್ನೊಂದು ಕೈಯಿಂದ ಭಂಗಾರದ ನೇಬುಗಳನ್ನು ಸ್ವೀಕರಿಸಲು ಅಟ್ಲಾಸಿನ ಕಡೆಗೆ ನೀಡಿದ್ದ ಹರ್ಕ್ಯುಲೀಸಿನ ಚಿತ್ರವನ್ನು ಮೀರುತ್ತಿದ್ದ ದೇಹ ಭಂಗಿ!

ತಿರುಗಿದೊಡನೆಯೆ ಕಂಡ ದೇಶೋವಿಶಾಲವಾದ ಬೆನ್ನು; ಆ ಬೆನ್ನಿನಲ್ಲಿ ಗುಡ್ಡಗುಡ್ಡಗಳನ್ನು ಕಿತ್ತು ಇಟ್ಟಿದ್ದಂತೆ ಇದ್ದ, ಅಂಗ ಸೌಷ್ಠವವಕ್ಕೆ ತಕ್ಕ ಮಾಂಸಖಂಡಗಳು! ಸಣ್ಣ ನಡು; ಉತ್ತಮ ಶಿಲ್ಪಿಯ ಕಡೆದ ಕಲ್ಲಿನ ವಿಗ್ರಹದ ಹಾಗಿದ್ದ ಕಿಟ್ಟು!

'ಮುಖಕ್ಕೆ ಬೆಳಕು ಬಿಟ್ಟದ್ದಕ್ಕೆ ಕ್ಷಮಿಸಿ. ಅತ್ಯಂತ ಸುಂದರ ದೇಹ ನಿಮ್ಮದು; ನೋಡಲು ಆಶ್ಚರ್ಯ ಸಂತೋಷಗಳಾಗುತ್ತೆ.'

'ಹಾಗೇ ಅಂತ ಈಗ ಹತ್ತುವರ್ಷದಿಂದ ಸ್ಪರ್ಧೆಗಳಲ್ಲಿ ತೀರ್ಮಾನಿಸುತ್ತಿದ್ದಾರೆ'

ಆ ಕತ್ತಲ ಮಸಕುಬೆಳಕಿನಲ್ಲಿ ಕಿಟ್ಟು ದೃಷ್ಟಿಸಿದ. ಆತ, ಆಕೆ ಮತ್ತು ಆ ಹುಡುಗಿ!

ಆತ 'ನಮಸ್ಕಾರ, ತೊಂದರೆ ಕೊಟ್ಟೆ, ಕ್ಷಮಿಸಿ' ಎಂತ ಹೇಳಿ ಹೊರಟೇಬಿಟ್ಟರು.

ಮೂರನೆಯ ದಿನ ಕಿಟ್ಟು, ದಾವಣಗೆರೆಗೆ ಹೋಗುತ್ತೇನೆ, ಎಂತ

ಹೇಳಿದ. ಇನ್ನೂ ಎರಡು ದಿವಸ ಇದ್ದು ಹೋಗು ಎಂತ ಅವರ ಚಿಕ್ಕಪ್ಪ ಚಿಕ್ಕಮ್ಮ ಹೇಳುತ್ತಿದ್ದ ಹಾಗೆಯೇ, ಆಳು ಬಂದು 'ಸೂಪ್ರೆಂಟ್ ಸಾಹೇಬ ವರು ಬಂದವ್ರೆ' ಎಂದ.

ಕಿಟ್ಟು ಚಿಕ್ಕಪ್ಪ ಕಾಫಿ ಕುಡಿಯುತ್ತಿದ್ದವರು ಅವರಿಗಾಗಿ ಒಂದು ಲೋಟದಲ್ಲಿ ಕಾಫಿಯನ್ನು ತೆಗೆದುಕೊಂಡು ಹೋದರು.

ಕಾಫಿ ಕುಡಿದು ಕಿಟ್ಟುವೂ ಹೋದ. ಕಿಟ್ಟು ಚಿಕ್ಕಪ್ಪ ಕಿಟ್ಟುವಿನ ಕಡೆ ಬೆಟ್ಟು ತೋರಿಸಿ,'ಇವನು ಯಾರು ಗೊತ್ತೇ' ಎಂತ ಸೂಪ್ರೆಂಟರನ್ನು ಕೇಳಿ ದರು.

'ಓಹೋ! ಇವರೇ! ಏನಾಗಬೇಕು ನಿನಗೆ?'

'ಓಹೋ, ಇವರೇ, ಎಂತ ಕೇಳೋಪೇನು! ಏನಾಗಬೇಕು ನಿನಗೆ ಅನ್ನೋಪೇನು!'

'ಇವನು ನಮ್ಮ ಹುಡುಗ ಕಣಯ್ಯ. ನಮ್ಮಣ್ಣಾವರ ಮಗ. ನಮ್ಮ ವಂಶೋದ್ಧಾರಕ.'

'ಇವರು ನಿನ್ನ ಮಗ ಅಂತ ತಿಳಿದಿರಲಿಲ್ಲ. ಆದರೆ ಇವರ ಪರಿಚಯ ಆಗಲೇ ಆಗಿಪೆಯಪ್ಪ'-ಎಂತ ಹಿಂದಿನ ಕತೆಯೆಲ್ಲ ಹೇಳಿದರು.

ಆ ಮಾತು ಈ ಮಾತು ಆಡುತ್ತ ಕಿಟ್ಟು ಅಂದೇ ಊರಿಗೆ ಹೋಗ ಬೇಕೆಂತ ಹಟಹಿಡಿದಿದ್ದ ಮಾತೂ ಬಂತು.

ಅದಕ್ಕೆ ಸೂಪ್ರೆಂಟರು—'ಏನ್ರೀ ಇನ್ನೂ ರಜ ಅಷ್ಟು ದಿವಸ ಇದೆ ಯಲ್ಲ; ಇರೋದು ತಾನೆ. ನಮ್ಮ ಪರಿಚಯವೂ ಹೊಸದಾಗಿ ಆಗಿದೆ. ಇಲ್ಲಿ ಬೇಜಾರಾದರೆ ನಮ್ಮ ಮನೆಗೆ ಬನ್ನಿ; ತಮಾಷೆಯಾಗಿ ಕಾಲ ಕಳೆಯ ಬಹುದು. ಬೇಕಾದಷ್ಟು ಪುಸ್ತಕ ಇದೆ, ಓದುವುದಕ್ಕೆ'.

ಕಿಟ್ಟುವಿಗೆ ಪುಸ್ತಕ ಎಂದರೆ ಪ್ರಾಣ. ಅವರು ಪುಸ್ತಕ ಎನ್ನುತ್ತಲೂ ಪುಸ್ತಕಗಳ ಸಾಲೂ ಅದರ ಹಿಂದೆ ಆ ಸಂಜೆ ಕಂಡ ತನ್ನ ಮನವನ್ನು ಸೂರೆಗೊಂಡಿದ್ದ ಕಣ್ಣುಗಳ ಚಿತ್ರವೂ ಅವನ ಕಣ್ಣ ಮುಂದೆ ನಿಂತುವು.

ತನ್ನ ಮನ ಸೆಳೆದಿದ್ದ ಹೆಣ್ಣಿನ ತಂದೆಯ ಪರಿಚಯವಾಗಿ, ಅವರಿಂದ ಅವರ ಮನೆಗೆ ಇಷ್ಟು ಬೇಗ, ಸುಲಭ ರೀತಿಯಲ್ಲಿ,ಕರೆ ಬರುತ್ತದೆಂತ ಕಿಟ್ಟು ಕನಸಿನಲ್ಲಿಯೂ ನೆನೆಸಿರಲಿಲ್ಲ. ಆ ಹುಡುಗಿಯ ಸಾಮೀಪ್ಯ ಒದಗಿ ಆಕೆ ಯೊಡನೆ ಮಾತನಾಡುವ ಸಂಭವ ಬರಬಹುದೆಂಬುದಂತೂ ಇಲ್ಲವೇ ಇಲ್ಲ.

ಮನಸ್ಸೆಲ್ಲ ತುಮಕೂರಿನಲ್ಲಿ ಆ ಹುಡುಗಿಯ ಮೇಲೆ ನಟ್ಟಿತ್ತು. ಆದರೆ ತಂದೆತಾಯಿಗಳನ್ನು ನೋಡಬೇಕೆಂಬ ಆಶೆಯೂ ಇತ್ತು. ಮನೆಯವರ ಬಲವಂತ, ಅವರ ಆಹ್ವಾನ, ಇವೆಲ್ಲಕ್ಕಿಂತಲೂ ಹೆಚ್ಚಾಗಿ ಆ ಹುಡುಗಿಯನ್ನು ನೋಡಬಹುದೆಂಬ ಆಶೆ. ಇವುಗಳಿಂದ ಕಿಟ್ಟು ಅಲ್ಲಿಯೇ ಇನ್ನೆರಡು ದಿನ ಉಳಿಯಲು ಒಪ್ಪಿಕೊಂಡ.

ಇತ್ತ ಸೂಪ್ರೆಂಟರು ಮನೆಗೆ ಹೋಗುವುದಕ್ಕೆ ಮೊದಲು ಪುನಃ ಕಿಟ್ಟುವನ್ನು ತಮ್ಮ ಮನೆಗೆ ಬರುವಂತೆ ಆಹ್ವಾನಿಸಿ, ತಮ್ಮ ಮನೆಗೆ ಹೋದ ಮೇಲೆ ಕಿಟ್ಟುವಿನ ಮನೆಯಲ್ಲಿ ನಡೆದ ಸಮಾಚಾರವನ್ನೆಲ್ಲ ತಮ್ಮ ಸಂಸಾರದೊಡನೆ ತಿಳಿಸಿದರು. ಕಿಟ್ಟು ಆ ಸಲ ಪರೀಕ್ಷೆಗೆ ಕಟ್ಟಿರುವನೆಂದೂ, ಇನ್ನೂ ಮದುವೆಯಾಗಿಲ್ಲವೆಂದೂ, ತಮ್ಮ ಮಗಳು ಮಾಲಿನಿಯನ್ನು ಅವರಿಗೆ ಕೊಟ್ಟು ಯಾಕೆ ಮದುವೆಮಾಡಬಾರದೆಂದೂ, ಸಂಸಾರಕ್ಕೆ ಸೂಚಿಸಿದರು. ಎಷ್ಟಾದರೂ ಹೆಣ್ಣು ಹೆತ್ತವರಲ್ಲವೇ? ಅಳಿಯಂದಿರನ್ನು ಹುಡುಕಿ ಮಗಳ ವಿವಾಹ ಮಾಡುವವರೆಗೆ ಅವರಿಗೆ ಮನಸ್ಸಿನಲ್ಲಿ ತಾಪತ್ರಯವಿಲ್ಲದೆ ಇರುತ್ತದೆಯೆ? ನೀರಿನಲ್ಲಿ ಮುಳುಗುತ್ತಿರುವವನು, ಒಂದು ಹುಲ್ಲು ಕಡ್ಡಿ ಸಿಕ್ಕಿದರೂ ಅದನ್ನು ಹಿಡಿದುಕೊಳ್ಳುವುದರಿಂದ ಬದುಕುತ್ತೇನೆಯೋ ಎಂಬ ಆಶೆಯಿಂದ ಪ್ರತಿಯೊಂದನ್ನೂ ಹಿಡಿದುಕೊಳ್ಳುವಂತೆ, ಮದುವೆಯಾಗದ ಮದುವೆಯಾಗಬಹುದಾದ ಹುಡುಗರಲ್ಲಿ ಯಾರಾದರೂ ತಮ್ಮ ಮಗಳಿಗೆ ಸರಿಹೋಗಬಹುದಾದ ವರ-ಎಂದು ಹೆಣ್ಣು ಹೆತ್ತವರೆಲ್ಲ ಪ್ರಯತ್ನ ಪಡುತ್ತಾರೆ!

'ಹೋಗಣ್ಣ, ನಿನಗ್ಯಾವಾಗಲೂ ಹಾಸ್ಯವೆ' ಎಂತ ಹುಡುಗಿ ಹೇಳಿ, ಅಲ್ಲಿಂದ ಹೊರಟುಹೋಗುವ ಚಿನ್ಹೆ ತೋರಿಸಿದಳಾದರೂ ಅಲ್ಲಿಂದ ಕದಲಲಿಲ್ಲ.

ಅದೇ ದಿನ ಸಾಯಂಕಾಲ ಸುಮಾರು ಆರು ಗಂಟೆಗೆ, ಕಿಟ್ಟು ಅವರ ಮನೆಗೆ ಹೋದ. ಸೂಪ್ರೆಂಟರು ಇನ್ನೂ ಮನೆಗೆ ಬಂದಿರಲಿಲ್ಲ. ಮಾಲಿನಿ ಎಲ್ಲಿಯೋ ಹೋಗಿದ್ದಳು. ಅವಳ ತಾಯಿ ಮತ್ತು ಮನೆಯಲ್ಲಿದ್ದವರು ಆದರದಿಂದ ಕಿಟ್ಟುವನ್ನು ಬರಮಾಡಿಕೊಂಡು ರಾಯರ ಕೊಠಡಿಯಲ್ಲಿ ಕೂಡಿಸಿ, ಅದರಲ್ಲಿದ್ದ ಪುಸ್ತಕಗಳಲ್ಲಿ ತಮಗೆ ಬೇಕಾದುದನ್ನು ಆರಿಸಿಕೊಳ್ಳಬಹುದೆಂದರು.

ಕಿಟ್ಟು ಬಾಗಿಲ ಪಕ್ಕದಲ್ಲಿದ್ದ ಗೂಡಿನ ಕದವನ್ನು ತೆರೆದು, ಅದರ ಲ್ಲಿನ ಪುಸ್ತಕಗಳನ್ನು ನೋಡುತ್ತಾ ಇರುವಂತೆಯೇ, ಕೊಠಡಿಯ ಕದ ತೆರೆದ ಮತ್ತು ಬಳೆಗಳ ಶಬ್ದ ಕೇಳಿಸಿತು. ಕಿಟ್ಟು ಆ ಕಡೆ ನೋಡುತ್ತಾನೆ, ಮಾಲಿನಿ ಬಾಗಿಲನ್ನು ತೆರೆದು ಒಳಗೆ ಬಂದಿದ್ದವಳು ಇವನನ್ನು ನೋಡಿ ಆಶ್ಚರ್ಯದಿಂದ ಸ್ತಂಭಿತಳಾಗಿ, ಒಂದು ಕ್ಷಣ ಹಾಗೆಯೇ ನಿಂತಿದ್ದಳು. ಅವನು ಅಲ್ಲಿರುವ ವಿಷಯ ಅವಳಿಗೆ ತಿಳಿದಿರಲಿಲ್ಲವೆಂತ ಕಾಣುತ್ತೆ. ಆದರೆ ಉತ್ತರ ಕ್ಷಣದಲ್ಲಿ ನಾಚಿಕೆಯಿಂದ ಮುಖಕ್ಕೆ ರಂಗೇರುತ್ತಿರಲು, ಹಲ್ಲುಗಳಿಂದ ಕೆಳತುಟಿಯನ್ನು ಪೀಡಿಸುತ್ತ ಹಿಂತಿರುಗಿದಳು.

ಕಿಟ್ಟುವಿಗೆ ಅವಳ ಸ್ಥಿತಿ ನೋಡಿ ನಗು ಬಂತು. ಅದರೊಡನೆಯೇ ಅಪ್ರಾರ್ಥಿತಳಾಗಿ ಒಳಗೆ ಬಂದಿದ್ದವಳು, ಆಕಸ್ಮಿಕವಾಗಿ ಬಂದಂತೆಯೇ ಹೊರಟುದನ್ನೂ ನೋಡಿ, ಇಷ್ಟು ಶೀಘ್ರವಾಗಿ ಹೊರಟುಬಿಡುತ್ತಾಳಲ್ಲ ಎಂತ ಸಂಕಟವೂ ಆಯಿತು. ಅವಳು ಮಿಂಚಿನಂತೆ ಹೊಳೆದು ಮಾಯವಾಗುವುದನ್ನು ತಪ್ಪಿಸಿ, ಏನಾದರೂ ಮಾಡಿ ಒಂದೆರಡು ಕ್ಷಣ ನಿಲ್ಲುವಂತೆ ಒಂದೆರಡು ಮಾತುಗಳನ್ನಾದರೂ ಆಡುವ ಹಾಗೆ ಮಾಡಬೇಕೆಂದು, 'ಕ್ಷಮಿಸಬೇಕು, ನಾನು ಇಲ್ಲಿರುವುದು ತೊಂದರೆಯಾದರೆ ಆಚೆ ಹೋಗುತ್ತೇನೆ. ಏನಾದರೂ ಬೇಕಾಗಿದ್ದರೆ ತೆಗೆದುಕೊಳ್ಳಿ' ಎಂತ ಬಾಗಿಲ ಕಡೆ ಒಂದೆರಡು ಹೆಜ್ಜೆ ಇಡುವ ಮೊದಲೇ, ಮಾಲಿನಿ ಮಾತನ್ನೂ ಆಡದೆ ಹಿಂತಿರುಗಿಯೂ ನೋಡದೆ, ಹಾಗೆಯೇ ಓಡಿಬಿಟ್ಟಳು.

*    *    *    *    *

ಪ್ರತಿ ದಿನ ತಪ್ಪದೆ ಕಿಟ್ಟು ಅವರ ಮನೆಗೆ ಹೋಗುವುದಕ್ಕೆ ಪ್ರಾರಂಭಿಸಿದ್ದ. ಸೂಪ್ರೆಂಟರ ಕುಟುಂಬದವರೊಡನೆಯೂ ಧಾರಾಳವಾಗಿ ಮಾತನಾಡುವಷ್ಟರವರೆಗೂ ಪರಿಚಯ ಬೆಳೆದಿತ್ತು. ಮಾಲಿನಿ, ಎದುರು ನಿಂತು ಸರಸವಾಡದಿದ್ದರೂ, ಮೊದಲನೆಯ ದಿನ ಮನೆಯಲ್ಲಿ ಕಂಡಾಗ ಓಡಿದಂತೆ ಓಡುತ್ತಿರಲಿಲ್ಲ.

ಇನ್ನೂ ಎರಡು ದಿನ ಕಳೆಯಿತು. ಸೂಪ್ರೆಂಟರು ಊರಲ್ಲಿಲ್ಲದೆ ಇದ್ದರೂ ಕಿಟ್ಟು ಅವರ ಮನೆಗೆ ಹೋಗಿ ಬೇಕಾದ ಪುಸ್ತಕ ತರುತ್ತಿದ್ದ. ಸಂಜೆ ಸೂಪ್ರೆಂಟರ ಕುಟುಂಬವನ್ನೂ ಮಾಲಿನಿಯನ್ನೂ ವಾಕಿಂಗ್ ಕರೆದುಕೊಂಡು ಹೋಗುತ್ತಿದ್ದ.

ಕಿಟ್ಟು ಚಿಕ್ಕಮ್ಮ ಎಷ್ಟಾದರೂ ಬುದ್ಧಿವಂತೆ. ಕಿಟ್ಟುವು ಊರಿಗೆ ಪ್ರಯಾಣವಾಗಿದ್ದವನು ಪ್ರಯಾಣ ಹೊರಡಬೇಕೆಂತ ಪುನಃ ಹೇಳದಿದ್ದುದನ್ನೂ, ಪ್ರತಿ ದಿನ ಏನಾದರೊಂದು ಕಾರಣದಿಂದ ಅವರ ಮನೆಗೆ ಹೋಗಬೇಕೆಂತ ತೋರಿಸುತ್ತಿದ್ದ ಆತುರವನ್ನೂ, ಅವರ ಮನೆಗೆ ಹೋಗುವ ಮೊದಲು ತನ್ನ ಉಡುಪನ್ನು ಸರಿಪಡಿಸಿಕೊಳ್ಳುವ ರೀತಿಯನ್ನೂ ನೋಡಿ, ಮಾಲಿನಿಯ ಮೇಲೆ ಕಿಟ್ಟುವಿನ ಮನ ನೆಟ್ಟಿದೆಯೆಂದು ಊಹಿಸಿ, ತನ್ನ ಊಹೆ ಸರಿಯಾದುದೇ ಎಂಬುದನ್ನು ಕಂಡು ಹಿಡಿಯಲು ಒಂದು ಉಪಾಯ ಹೂಡಿದರು.

ಒಂದು ದಿನ ಎಲ್ಲರೂ ಹೊರಗೆ ಹೊರಟಹಾಗೆ ಮಾಡಿ ಸೂಪ್ರೆಂಟರೂ ಅವರ ಸಂಸಾರವೂ ಏನಾದರೂ ಮಾಡಿ ಆ ಕಾಲಕ್ಕೆ ಸರಿಯಾಗಿ ಬೇರೆ ಕಡೆಯಿಂದ ಕರೆ ತರಿಸಿಕೊಳ್ಳುವುದು. ಆಗ ಕಿಟ್ಟುವೂ ಮಾಲಿನಿಯೂ ಏನು ಹೇಳುತ್ತಾರೋ ನೋಡುವುದು-ಎಂದರು. ಅದೇ ಸಾಯಂಕಾಲ ಎಲ್ಲರೂ ಹೊರಟು ನಿಂತಿರುವ ಸಮಯದಲ್ಲಿ ಸೂಪ್ರೆಂಟ್ ಸಾಹೇಬರಿಗೆ ಮೆಡಿಕಲ್ ಆಫೀಸರಿಂದಲೂ ಅವರ ಹೆಂಡತಿಯವರಿಗೆ ಮಹಿಳಾ ಸಮಾಜದ ಅಧ್ಯಕ್ಷಿಣಿಯಿಂದಲೂ ಕರೆ ಬರಲು ಸೂಪ್ರೆಂಟರು ನನ್ನನ್ನು ಕಾಯಬೇಡಿ ಎಂತ ಹೇಳಿ ಹೊರಟೇಬಿಟ್ಟರು. ಅವರ ಸಂಸಾರ 'ನಾನೂ ಹೋಗಬೇಕು' ಎಂದರು. ಕಿಟ್ಟು ನಾನೂ ಹೊರಡುತ್ತೇನೆ, ಎಂತ ಎದ್ದ. ಮಾಲಿನಿ ಅವಳ ತಾಯ ಮುಖ ನೋಡಿದಳು. ಅವಳ ತಾಯಿ 'ಸಮಾಜಕ್ಕೆ ಹೋಗೋಣ ಬಾ' ಎಂದರು. ಅಲ್ಲಿಯ ಹಾಳುಹರಟೆ ನನಗೆ ಸರಿಹೋಗುವುದಿಲ್ಲ' ಎಂದಳು ಮಾಲತಿ.

'ಹಾಗಾದರೆ ಮನೇಲಿರು.'

'ಮನೇಲಿರೋಕೆ ಬೇಜಾರು, ಒಬ್ಬಳೇ.'

'ಹಾಗಾದರೆ ವಾಕಿಂಗ್ ಹೋಗು.'

'ನಾನೊಬ್ಬಳೇ!'

'ನನ್ನ ಜೊತೆಯಲ್ಲಿ ಬರುವುದಕ್ಕೆ ಆಕ್ಷೇಪಣೆ ಏನೂ ಇಲ್ಲದಿದ್ದರೆ ಬರಬಹುದು' ಎಂದ ಕಿಟ್ಟು.

ಮಾಲಿನಿ ಪುನಃ ಅವಳ ತಾಯಿಯ ಮುಖ ನೋಡಿದಳು.

'ನನ್ನ ಮುಖ ಯಾಕೆ ನೋಡುತ್ತೀಯ? ನಿನ್ನಿಷ್ಟ ಬಂದ ಹಾಗೆ

ಮಾಡಿಕೋ' ಎಂತ ಅವಳ ತಾಯಿಯೂ ಹೊರಟೇಬಿಟ್ಟರು.

ಮಾಲಿನಿ ಒಂದೆರಡು ನಿಮಿಷ ಯೋಚಿಸಿದಳು, ಒಳಗೆ ಹೋದಳು. ಮರಳಿ ಹೊರಗೆ ಬಂದಳು; ಮರಳಿ ಒಳಗೆ ಹೋದಳು. ಕೊನೆಗೆ ಈಚೆ ಬಂದು ಚಪ್ಪಲಿ ಹಾಕಿಕೊಂಡು ರಸ್ತೆಗೆ ಬಂದು ಕಿಟ್ಟು ಕಡೆ ನೋಡಿದಳು.

ಕಿಟ್ಟು ವರಾಂಡದಲ್ಲಿ ಕೈಕಟ್ಟಿ ಇವಳ ಚರ್ಯೆಯನ್ನು ನೋಡುತ್ತ ಮೌನವಾಗಿ ನಿಂತಿದ್ದವನು ಅವಳ ಹಿಂದೆ ಹೊರಟ.

ನಿತ್ಯದಂತೆ ಬೆಂಗಳೂರು ಕಡೆ ರೈಲ್ವೆ ರಸ್ತೆಯ ಮೇಲೆ ಹೊರಟರು. ಮುಂದೆ ಮಾಲಿನಿ; ಹಿಂದೆ ಕಿಟ್ಟು.

ಸ್ವಲ್ಪ ಹೊತ್ತು ಒಬ್ಬರೂ ಮಾತನಾಡಲಿಲ್ಲ.

ಆ ಮೇಲೆ ಕಿಟ್ಟುವೇ ಮಾತಿಗೆ ಪ್ರಾರಭಿಸಿದ.'ಯಾಕೆ, ನನ್ನ ಸಂಗಡ ಮಾತನಾಡಬಾರದೆ? ಸಂಕೋಚವೊ, ಭಯವೊ!'

ಉತ್ತರವಿಲ್ಲ. ಇಬ್ಬರೂ ಮೌನವಾಗಿ ದಾರಿ ತುಳಿಯುತ್ತಿದ್ದರು.

ಕಿಟ್ಟುವಿನದು ಪುನಃ ಅವೇ ಪ್ರಶ್ನೆ. 'ಇಷ್ಟವಿಲ್ಲದೆ ನನ್ನ ಬಲವಂತಕ್ಕೆ ಬರುತ್ತಿರುವ ಹಾಗಿದ್ದರೆ ಮನೆಗೆ ಹಿಂತಿರುಗೋಣ.'

ಮಾಲಿನಿಯು ಸ್ವಲ್ಪಮಾತ್ರ ತಲೆ ತಿರುಗಿಸಿ ಕಿಟ್ಟುವಿನ ಮೇಲೆ ನಾಚಿಕೆಯಿಂದ ತುಂಬಿದ್ದ ತನ್ನ ಕಡೆಗಣ್ಣ ಕಟಾಕ್ಷವನ್ನು ಬೀರಿ ಮುನ್ನಡೆದಳು—ಮುಖ ಕೆಂಪೇರಿತ್ತು.

ಇನ್ನೂ ಸ್ವಲ್ಪ ದೂರ ನಡೆಯುವ ವೇಳೆಗೆ ಮೊದಲಿನ ಸಂಜೆ ಪರಸ್ಪರ ನೋಡಿದ ಸ್ಥಳಕ್ಕೆ ಬಂದರು

ಆಗ ಕಿಟ್ಟುವು 'ನಿಮ್ಮ ಮನಸ್ಸಿಗೆ ಏನು ಹೊಳೆದಿರಬಹುದು ಎಂತ ಊಹಿಸಲು ಪ್ರಯತ್ನಪಡಲೆ?' ಎಂದ.

ಮಾಲಿನಿಯು ಇನ್ನೂ ನಾಚಿಕೆ ಸಂಕೋಚಗಳನ್ನು ತ್ಯಜಿಸದಿದ್ದರೂ ಆಕೆಯ ಕಣ್ಣುಗಳು ಹೂಂಗುಟ್ಟಿದುವು.

'ನಾವು ಮೊದಲು ಇಲ್ಲಿಯೇ ಸಂಧಿಸಿದ್ದು. ಇಲ್ಲಿಯೇ ಇವರು ಸರ್ಕಸ್ ಮಾಡಿದ್ದು!'

ಮಾಲಿನಿಯ ಕಣ್ಣು ಒಪ್ಪಿಗೆಯನ್ನು ಸೂಚಿಸುತ್ತಿದ್ದಂತೆಯೇ ಏನು ಹೇಳುತ್ತಿರುವೆನೆಂಬ ಅರಿವೇ ಅವಳಿಗಿಲ್ಲದಂತೆ 'ಇನ್ನೊಂದು ಸಲ ನೋಡಬೇಕೆನ್ನಿಸುತ್ತೆ' ಎಂದುಬಿಟ್ಟು ತಾನಾಡಿದ ಮಾತು ತನ್ನಿಚ್ಛೆಯಿಲ್ಲದೆ ಹೊರ

ಬಿದ್ದುದಕ್ಕೆ ತುಟಿಯನ್ನು ಕಚ್ಚುತ್ತಾ, ಕಿಟ್ಟು ಕಡೆ ನೋಡುತ್ತಾ ನಿಂತು ಬಿಟ್ಟಳು!

'ಒಂದು ಸಲವೇಕೆ, ಬೇಕಾದರೆ ಹತ್ತು ಬಾರಿ ಮಾಡುತ್ತೇನೆ. ಇನ್ನೂ ಬೇಕಾದ್ದು ಮಾಡಿ ತೋರಿಸುತ್ತೇನೆ'

ಅಲ್ಲಿಂದ ಸ್ವಲ್ಪ ಮುಂದೆ ಹೋದೊಡನೆಯೇ ಒಂದು ಸೇತುವೆ ಸಿಕ್ಕುತ್ತದೆ. ಆ ಸೇತುವೆಯಿಂದ ನೆಲದ ಮಟ್ಟಕ್ಕೆ ಸುಮಾರು 15 ಅಡಿ ಇದೆ. ಮಾಲಿನಿ 'ಅಯ್ಯೋ' ಅನ್ನುವುದರೊಳಗಾಗಿ, ಕಿಟ್ಟು ಮೇಲಿನಿಂದ ಕೆಳಗೆ ಡೈವ್ ಮಾಡಿ, "ನೀವು ಡೈವ್ ಮಾಡುವುದಕ್ಕೆ ಹೋಗಿ ನನ್ನ ಪ್ರಾಣಕ್ಕೆ ತಂದು ಬಿಟ್ಟೀರಿ. ನಾನು ಬರುತ್ತೇನೆ" ಎಂತ ಹೇಳಿ, ಅವಳಲ್ಲಿಗೆ ಹೋಗುವುದರೊಳಗಾಗಿ, ಅವಳೇ ಮೆಲ್ಲಗೆ ಇಳಿದು ಸೇತುವೆಯ ಅಡಿ ಮರಳಮೇಲೆ ಬಂದು ನಿಂತಳು.

ಮಾಲಿನಿ ಕುಳಿತುಕೊಳ್ಳುವುದರೊಳಗಾಗಿ ಕಿಟ್ಟು ನಾಲ್ಕಾರು ಸೊಮರ್‌ಸಾಲ್ಟ ಹೊಡೆದು, ಕೈಮೇಲೆ ನಡೆದು, ಕಣ್ಣಿನಲ್ಲಿ ಮರಳು ಬಿತ್ತು ಎಂತ ಕೂತು, ಕಣ್ಣಿಗೆ ಬಟ್ಟೆ ಕಾಪಡ ತೊಡುವುದಕ್ಕೆ ಪ್ರಾರಂಭಿಸಿದ.

ಇಷ್ಟೆಲ್ಲ ಒಂದು ಕ್ಷಣದೊಳಗಾಗಿ ನಡೆದೇ ಹೋಯಿತು!

ಪಾಪ! ಮಾಲಿನಿ ಏನೋ ಅನಾಹುತ ನಡೆದೇ ಹೋಯಿತು ಎಂತ 'ಯಾಕೆ, ಏನಾಯಿತು, ಕಣ್ಣಿನಲ್ಲಿ ಮರಳು ಬಿತ್ತೇ? ನಾನು ಊದಲೇ' ಎಂತ ಬಳಿ ಬಂದು ಮುಂದೆಯೇ ಕುಳಿತಳು.

ಕಣ್ಣು ಊದಬೇಕಾದರೆ ಎದುರಿಗೇ ಇರಬೇಕು. ಎರಡೂ ರೆಪ್ಪೆಗಳನ್ನು ಎರಡೂ ಕೈಗಳಲ್ಲಿ ಹಿಡಿದುಕೊಳ್ಳಬೇಕು. ಸ್ತ್ರೀ ಜಾತಿಗೆ ಸಹಜವಾದ ಮಾರ್ದವದಿಂದ ಮಾಲಿನಿ ಕಿಟ್ಟುವಿಗೆ ಯಾವ ಉಪಚಾರವನ್ನಾದರೂ ಮಾಡಲು ಸಿದ್ಧವಾಗಿದ್ದಳು.

ಕಣ್ಣಿನಲ್ಲಿ ಮರಳು ನಿಜವಾಗಿಯೂ ಬಿದ್ದಿದ್ದರೆ ಒಂದೆರಡುಬಾರಿ ಊದಿದರೆ ಹೋಗಿಬಿಡುತ್ತಿತ್ತು. ಬೀಳದೆಯೇ ಇದ್ದರೆ! ಮಾಲಿನಿಯು ನಾಲ್ಕೈದು ಬಾರಿ ಊದಿ ಇನ್ನೊಂದು ಸಲ ಊದಬೇಕೆಂದು ತನ್ನ ತುಟಿಯನ್ನು ಮುಂದಕ್ಕೆ ಮಾಡಿದಾಗ ಕಿಟ್ಟು ಅವಳ ತುಟಿಗಳ ಮೇಲೆ ಮೃದುವಾಗಿ ಮುತ್ತು ಕೊಟ್ಟು, ಅವಳ ಕೆನ್ನೆಗೆ ತನ್ನ ಕೆನ್ನೆಯನ್ನು ತಗಲಿಸಿ, ಬಗ್ಗಿಸಿದ ಅವಳ ಮುಖವನ್ನು ಬಹಳ ನಯವಾಗಿ, ಮೆಲ್ಲನೆ ಮೇಲಕ್ಕೆತ್ತಿ,

ತನ್ನ ಧ್ವನಿಯನ್ನು ಸಾಧ್ಯವಾಗುವಷ್ಟು ಮೃದುವಾಗಿ ಮಾಡಿಕೊಂಡು 'ನನ್ನಮೇಲೆ-ನಾನು ಹೀಗೆ ಮಾಡಿದುದಕ್ಕೆ ಕೋಪವೆ? ಮನಸ್ಸಿಗೆ ನೋವಾಯಿತೇ, ನನ್ನನ್ನು ಮದುವೆಯಾಗುವಿಯ?' ಎಂತ ಕೈ ಹಿಡಿದುಕೊಂಡ.

ಮಾಲಿನಿಗೆ ಅದೆಲ್ಲಿಯ ಧೈರ್ಯ ಬಂದಿತೋ- 'ಇಷ್ಟು ದೂರ ತಂದೆ ತಾಯಿಗಳಿಂದ, ನಮ್ಮದೇ ಪಯಣವೆಸಗಲು ಕರೆತಂದು, ಇಲ್ಲಿ ಕೈ ಹಿಡಿದಿರುವಿರಿ. ಮದುವೆ ಮಾಡಿಕೊ ಅಂತ ಅನ್ನುತ್ತಿದ್ದೀರಿ. ಈಗ ಹಿಡಿದಿರುವ ಕೈ ದಯವಿಟ್ಟು ಬಿಡಬೇಡಿ. ಬಿಟ್ಟರೆ ಅದರಿಂದ ಬರುವ ದೋಷ, ಪಾಪ, ಎಲ್ಲ ನಿಮ್ಮದೇ' ಎಂದಳು.

ಆ ರಾತ್ರಿ ಮನೆಗೆ ಬಂದ ಮೇಲೆ ಕಿಟ್ಟು ತನ್ನ ಮನೆಯಲ್ಲಿ, ತಾನು ಮಾಲಿನಿಯನ್ನು ಮದುವೆಯಾಗಬೇಕೆಂದು ಇಷ್ಟಪಟ್ಟಿರುವುದಾಗಿಯೂ, ಆದರೆ ಲಾ ಪರೀಕ್ಷೆಗೆ ತಾನು ಓದಬೇಕೆಂದಿರುವುದರಿಂದ ಆ ಪರೀಕ್ಷೆ ಮುಗಿಯುವ ವರೆಗೆ ನಿಧಾನಮಾಡಬೇಕೆಂದೂ, ಮಾಲಿನಿಯು ಅದಕ್ಕೆ ಒಪ್ಪಿರುವುದಾಗಿಯೂ, ಈ ವಿಚಾರ ತನ್ನ ತಂದೆತಾಯಿಗಳಿಗೆ ಅವರೇ ತಿಳಿಸಬೇಕೆಂಬುದಾಗಿಯೂ ಹೇಳಿದ.

*            *            *            *            *            *

ಬೇಸಿಗೆ ರಜ ಕಳೆಯಿತು. ಕಿಟ್ಟು ಬೊಂಬಾಯಿಗೆ ಹೋಗಿ ಎಮ್. ಎ. ಮತ್ತು ಎಲ್, ಎಲ್, ಬಿ. ಎರಡಕ್ಕೂ ಓದುವುದೆಂದು ತೀರ್ಮಾನವಾಯಿತು. ಮೈಸೂರು ಅಸೋಸಿಯೇಷನ್‌ನಲ್ಲಿರುವುದು ಎಂತ ನಿರ್ಧಾರ ಮಾಡಿ, ಅಲ್ಲಿಯ ಕಾರ್ಯದರ್ಶಿಗಳಿಗೆ ಒಂದು ಪರಿಚಯ ಪತ್ರವನ್ನು ತೆಗೆದುಕೊಂಡು ಮಾತುಂಗ ಸ್ಟೇಷನ್ನಿನಲ್ಲಿಳಿದ. ಇಳಿದು ಟಿಕೇಟ್ ತೆಗೆಯೋಣವೆಂತ ನೋಡುತ್ತಾನೆ, ಜೇಬಿನಲ್ಲಿ ಪರ್ಸೇ ಇಲ್ಲ! ಅವನ ಜೇಬಿನಲ್ಲಿದ್ದ ಚಿಲ್ಲರೆ ನಾಣ್ಯ ವಿನಾ ಕಾಸೂ ಇರಲಿಲ್ಲ; ಟಿಕೆಟ್ಟೂ ಇಲ್ಲ. ಕಾರ್ಯದರ್ಶಿಗಳಿಗೆ ಕೊಟ್ಟಿದ್ದ ಪರಿಚಯ ಪತ್ರವೂ ಇಲ್ಲ.

ಕಿಟ್ಟುವು ಆಗ ಏನು ಮಾಡಬೇಕು? ಇದ್ದುದರಲ್ಲಿ ಸ್ವಲ್ಪ ಧೈರ್ಯ ಮಾಡಿ ಈ ವಿಚಾರ ಸ್ಟೇಷನ್‌ಮೇಷ್ಟ್ರಿಗೆ ಹೇಳಿ, ಅವರ ದಯೆಯಿಂದ ಆ ಸಂಕಟದಿಂದ ಪಾರಾಗಿ, ಮಾಡರ್ನ್ ಹಿಂದೂ ಹೋಟಲಿಗೆ ಹೋಗಿ ಸಾಮಾನು ಹಾಕಿದ.

ಬೊಂಬಾಯಿಯಲ್ಲಿ ಪರಿಚಯಸ್ಥರು ಇಲ್ಲ. ಊರಿಗೆ ಹಣಕ್ಕೆ ತಂತಿ

ಕಳುಹಿಸಲು ದುಡ್ಡಿಲ್ಲ. ಆ ನಗರದಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ನಡೆಯಲು ಸಾಧ್ಯವಿಲ್ಲ.

ಮುಂದಿನ ಗತಿ ಏನಪ್ಪ ಎಂತ ಕಿಟ್ಟು ಆಲೋಚಿಸುತ್ತ ಮೈಸೂರು ಅಸೋಸಿಯೇಷನ್‌ಗೆ ಹೋಗೋಣವೆಂತ ಟ್ರಾಂ ಹತ್ತಿ ಕೂತುಕೊಳ್ಳಲು ನೋಡುತ್ತಾನೆ--ದ್ರೌಪದಿ ದೇವಿ! ಪರಸ್ಪರ ಯೋಗಕ್ಷೇಮ ವಿಚಾರಿಸಿದ ಮೇಲೆ ಕಿಟ್ಟು ತನ್ನ ಕತೆಯನ್ನೆಲ್ಲ ಹೇಳಿದ. ದ್ರೌಪದಿದೇವಿ ಅವನ ಕಷ್ಟಕ್ಕೆ ಬಹಳ ವ್ಯಥೆಪಟ್ಟವಳಂತೆ ಆಡಿದರೂ ಧನಸಹಾಯವನ್ನೇನೂ ಒಡನೆಯೇ ಮಾಡಲಿಲ್ಲ; ಮಾಡುತ್ತೇನೆಂತಲೂ ಹೇಳಲಿಲ್ಲ. ತನಗೆ ತಿಳಿದವರಿಗೆ ಈತನ ವಿಚಾರ ಹೇಳುತ್ತೇನೆಂತ ಸಹ ಹೇಳಲಿಲ್ಲ. ತಾನು ಯಾರನ್ನೋ ನೋಡುವುದಕ್ಕೆ ಅವಸರವಾಗಿ ಹೋಗುತ್ತಿದ್ದಂತೆಯೂ, ತಾನು ಹೋಗದೆ ನಿಲ್ಲಲು ಸಾಧ್ಯವಿಲ್ಲವೆಂದೂ ಮಧ್ಯಾಹ್ನ ಎರಡು ಗಂಟೆಯ ಹೊತ್ತಿಗೆ ಮನೆಗೆ ಬರಬೇಕೆಂದೂ ತಿಳಿಸಿ, ಮನೆಯ ಅಡ್ರೆಸ್ ಕೊಟ್ಟು, ಮಧ್ಯೆಯೇ ಇಳಿದು ಹೊರಟುಹೋದಳು.

ತನ್ನನ್ನು ಮದನಕೇಳಿಗೆ ಬಾಯಿಬಿಟ್ಟು ಕರೆದ ಹೆಂಗಸು, ಮೂರು ತಿಂಗಳೊಳಗಾಗಿ ಅಷ್ಟು ಬದಲಾಯಿಸಿದುದಕ್ಕೆ ಆಶ್ಚರ್ಯಪಡುತ್ತ, ಒರಗಿಕೊಳ್ಳಲು ಬೆನ್ನಿಗೆ ಏನೋ ಒತ್ತಿಕೊಂಡಂತಾಯಿತು. ನೋಡುತ್ತಾನೆ, ಹೆಂಗಸಿನ ಪರ್ಸ್. ಅದರ ಮೇಲೆ ದ್ರೌಪದೀ ದೇವಿಯ ಹೆಸರಿನ ಚೀಟಿ ತಗಲಿಸಿತ್ತು.

ದ್ರೌಪದಿ ದೇವಿ ಅದನ್ನು ಮರೆತು ಹೋಗಿರಬಹುದೆಂದೂ ಮಧ್ಯಾಹ್ನ ತನ್ನನ್ನು ಬರಹೇಳಿರುವುದರಿಂದ ತಾನು ಹೋಗುವಾಗ ಒಯ್ದರಾಯಿತೆಂದೂ ಆಲೋಚಿಸಿ ಅದನ್ನು ತೆಗೆದುಕೊಂಡ.

ಅಷ್ಟು ಹೊತ್ತಿಗೆ ತಾನು ಇಳಿಯಬೇಕಾದ ಸ್ಥಳ ಬರಲು ಇಳಿದ. ಹೆಂಗಸಿನ ಬ್ಯಾಗನ್ನು ಕೈಯಲ್ಲಿ ಹಿಡಿದುಕೊಂಡು ಹೋಗಲು ನಾಚಿಕೆಪಟ್ಟು ತನ್ನ ದೊಡ್ಡ ಕೈವಸ್ತ್ರದಲ್ಲಿ ಅದನ್ನು ಸುತ್ತಿ ಕಂಕುಳಲ್ಲಿ ಇಟ್ಟುಕೊಂಡು, ಎರಡು ಹೆಜ್ಜೆ ಹೋಗುವುದರೊಳಗಾಗಿ ಇಬ್ಬರು ಪೋಲಿಸಿನವರು ಅವನಲ್ಲಿಗೆ ಬಂದು 'ನೀನು ಯಾರು, ಅದೇಕೆ ಹೆಂಗಸಿನ ಬ್ಯಾಗ್ ಕೈಯಲ್ಲಿ ಹಿಡಿದಿರುವೆ, ಅದನ್ನೂ ಮರೆಮಾಡಿಕೊಂಡು; ಅದರಲ್ಲೇನಿದೆ' ಎಂತ ಇನ್ನೂ ಪ್ರಶ್ನೆಗಳ ಸುರಿಮಳೆ ಹಾಕಲು ಪ್ರಾರಂಭಿಸಿದರು.

ತನ್ನ ಸ್ಥಿತಿ ದುಸ್ಥಿತಿಯಾಗಿದ್ದಾಗ ತಾನು ತನ್ನ ಕಾರ್ಯದ ಮೇಲೆ ಅವಸರವಸರವಾಗಿ ಹೋಗುತ್ತಿದ್ದುದನ್ನು ತಡಮಾಡಿದ ಪೋಲಿಸಿನವರ ಮೇಲೆ ಕಿಟ್ಟುವಿಗೆ ಕೋಪ ಬಂತು.

ಕಿಟ್ಟುವು ತನ್ನ ಪೂರ್ವೋತ್ತರವನ್ನೆಲ್ಲ ಹೇಳಿ ಪರ್ಸ್ ತಮ್ಮವರದೇ ಎಂತ ಹೇಳಿದ. ಅದು ಟ್ರಾಂನಲ್ಲಿ ದ್ರೌಪದಿ ದೇವಿಯು ಬಿಟ್ಟುಹೋದು ದನ್ನು ತಾನು ಆಕೆಗೆ ಕೊಡಲು ಒಯ್ಯುತ್ತಿದ್ದೇನೆಂತ ಹೇಳಲಿಲ್ಲ. ಕತೆ ಲಂಬಿಸಿ ಕಾಲ ಕಳೆಯುವ ಇಷ್ಟ ಅವನಿಗಿರಲಿಲ್ಲ. ಇವರ ಅಡಚಣೆ ತಪ್ಪಿ ದರೆ ಸಾಕೆಂತ ಅವನ ಇಷ್ಟವಾಗಿತ್ತು. ಆದ್ದರಿಂದ ಸೂಕ್ಷ್ಮವಾಗಿ ಹೇಳಿದ.

ತಮ್ಮವರದೆಂದು ಹೇಳಿದುದರಿಂದ ಪೋಲಿಸಿನವರಿಗೆ ಅನುಮಾನ ಹೆಚ್ಚಾಯಿತು. 'ನಿಮ್ಮವರದಾದರೆ ಅದರಲ್ಲಿ ಏನಿದೆ ಹೇಳು' ಎಂದರು. ಕಿಟ್ಟುವು ಅದರಲ್ಲಿ ಏನಿದೆ ಎಂತ ಹೇಳಲು ಶಕ್ತನಾಗಿರಲಿಲ್ಲ; ವಸ್ತ್ರದಿಂದ ಸುತ್ತಿ ಮರೆಮಾಡಲು ಯತ್ನಿಸಿದ್ದ. ಅದರ ವಿಚಾರದಲ್ಲಿ ಪೋಲಿಸಿನವರಿಗೆ ಫಿರ್ಯಾದು ಹೋಗಿ, ಅಸಾಮಿಯು ಚಹರೆ ಪಟ್ಟಿ ಸಹ ಕೊಡಲ್ಪಟ್ಟಿತ್ತು ಈ ವಿಷಯ ಕಿಟ್ಟುವಿಗೆ ಹೇಗೆ ಗೊತ್ತಾಗಬೇಕು? 'ಒಬ್ಬ ಹೆಂಗಸು ಇಂಥಾ ತನ್ನ ಬ್ಯಾಗ್ ಹೋಗಿದೆಯೆಂತ ಫಿರ್ಯಾದು ಕೊಟ್ಟು ನಿನ್ನ ಚಹರೆ ಪಟ್ಟಿ ಕೊಟ್ಟು, ಅದರ ಕಳವಿಗೆ ನೀನು ಕಾರಣನೆಂತ ಹೇಳಿದಾಳೆ; ನಡಿ ಪೋಲಿಸ್ ಸ್ಟೇಷನ್ನಿಗೆ' ಎಂದರು.

ಕದಿಯದ ಕಿಟ್ಟುವಿಗೆ ತಾನು ತಪ್ಪು ಮಾಡಿಲ್ಲವೆಂತ ಜ್ಞಾನವೇ ಹೊರತು, ಪೋಲಿಸಿನವರ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ಕೊಡದಿದ್ದರೆ ಅನುಮಾನಕ್ಕೆ ಕಾರಣವಾಗುತ್ತದೆಂತಲೂ, ಅನುಮಾನ ಹೆಚ್ಚಿದಷ್ಟೂ ಅವರಲ್ಲಿ ತಾನಿರಬೇಕಾದ ಕಾಲ ಹೆಚ್ಚಾಗಬಹುದೆಂತಲೂ ಅವನಿಗೆ ಹೊಳೆಯಲೇ ಇಲ್ಲ. ಕ್ಷಣಕ್ಷಣಕ್ಕೂ ಅಲ್ಲಿಂದ ಹೊರಡಬೇಕೆಂಬ ಇವನ ಆತುರ ಹೆಚ್ಚುತ್ತಿತ್ತು. ಇವನ ಜ್ಞಾನವೆಲ್ಲ ಮೈಸೂರು ಅಸೋಸಿಯೇಷನ್ ಸಕ್ರಿಟರಿ ಬಳಿಗೆ ಆದಷ್ಟು ಬೇಗ ಹೋಗಬೇಕೆನ್ನುವುದರಲ್ಲಿತ್ತು. ಆದ್ದರಿಂದ ಅವರು ಕೇಳುವುದೊಂದು, ಇವನು ಕೊಡುವ ಉತ್ತರ ಒಂದು. ಕೊನೆಗೆ ಅವರ ಪೈಕಿ ಒಬ್ಬ 'ನಿನ್ನನ್ನು ದಸ್ತಗಿರಿ ಮಾಡಿದೇನೆ; ನಡಿ ಸ್ಟೇಷನ್ನಿಗೆ' ಎಂದ.

ಅಂತಹ ಸಂದರ್ಭಗಳಲ್ಲಿ ಅಗತ್ಯ ಇರಬೇಕಾದ ತಾಳ್ಮೆ ಮತ್ತು

ಮುಂದಾಲೋಚನೆ ಕಿಟ್ಟುವಿಗೆ ಇರಲಿಲ್ಲ. ದಸ್ತಗಿರಿ ಎಂಬ ಪದಕೇಳಿ ದೊಡನೆಯೇ ಕಿಟ್ಟುವಿಗೆ ಕೋಪ ತಡೆಯಲಾಗಲಿಲ್ಲ. ಒಂದು ಹೆಜ್ಜೆ ಹಿಂದಕ್ಕಿಟ್ಟು ಒಬ್ಬೊಬ್ಬ ಪೋಲಿಸಿನವನೊಡನೂ ಬಾಕ್ಸ್ ಮಾಡಿ ಓಡಿದ. ಆದರೆ ಪೋಲಿಸಿನವರು ಅಷ್ಟು ಸುಲಭವಾಗಿ ಬಿಟ್ಟುಬಿಡುವರೆ! ಅವರ ಷೀಟಿಗಳ ಮೊರೆತದಲ್ಲಿ ಕಣ್ಣು ಮುಚ್ಚಿ ತೆರೆಯುವುದರೊಳಗಾಗಿ ಆ ಪ್ರದೇಶ ವೆಲ್ಲ ಅವರಿಂದ ತುಂಬಿಹೋಗಿ, ಸುತ್ತಲೂ ಅವರಿಂದ ಆವೃತನಾದ. ಆದರೂ ಅವನು ಧೈರ್ಯಗೆಡಲಿಲ್ಲ.

ಜಿಂಕೆಯ ವೇಗದಿಂದ ಒಂದು ಕ್ಷಣದೊಳಗಾಗಿ ಅವರನ್ನೆಲ್ಲ ಹಿಂದೆ ಹಾಕಿ ಮುಂದೆ ಓಡಿದ. ಆದರೆ ಓಡುತ್ತಿದ್ದ ಅವನ ಕಾಲಿಗೆ ಏನೋ ತಗಲಿ ನೆಲಕ್ಕೆ ಬಿದ್ದ. ಬಿದ್ದೊಡನೆಯೇ ಸುತ್ತಮುತ್ತ ಜನರೂ ಪೋಲಿಸಿ ನವರೂ ಸೇರಿ ಹುಲಿಯನ್ನು ಹಿಡಿಯುವಂತೆ ಹಿಡಿದರು ಅವನನ್ನು.

ಪೋಲೀಸ್ ಸ್ಟೇಷನ್ನಿಗೆ ಅವನನ್ನು ಒಯ್ದರು. ಮೊದಲು ಕಳ್ಳ ತನದ ಅಪಾದನೆಯೊಂದೇ ಅವನ ಮೇಲೆ ಇದ್ದುದು. ಅದರ ಜೊತೆಗೆ ತನ್ನ ಕರ್ತವ್ಯವನ್ನು ಮಾಡುತ್ತಿದ್ದ ಸರ್ಕಾರಿ ನೌಕರರನ್ನು ಹೊಡೆದ ತಕ್ಷೀರು ಒಂದು, ಅವರ ಸುಪರ್ದಿನಲ್ಲಿದ್ದಾಗ ತಪ್ಪಿಸಿಕೊಂಡು ಓಡಲು ಪ್ರಯತ್ನ ಪಟ್ಟ ಮತ್ತೊಂದು ತಕ್ಷೀರೂ ಅವನ ತಲೆಯ ಮೇಲೆ ಬಿದ್ದುವು.

ಬೊಂಬಾಯಿನಲ್ಲಿ ಕಿಟ್ಟುವಿಗೆ ಯಾರ ಪರಿಚಯವೂ ಇಲ್ಲ. ಹಣ ಮೊದಲೇ ಇಲ್ಲ. ಇನ್ನು ಅವನ ಗತಿಯೇನು! ಅವನಿಗಿದ್ದ ಒಬ್ಬ ಪರಿಚಯಸ್ಥೆ ಎಂದರೆ ದ್ರೌಪದಿಯೊಬ್ಬಳೇ. ಆಕೆ ತನಗೆ ಸಹಾಯ ಮಾಡಬಹುದೆಂಬ ಆಲೋಚನೆಯಿಂದ ಆಕೆಯ ಹೆಸರನ್ನೇ ಕಿಟ್ಟು ಹೇಳುತ್ತಿದ್ದುದು. ಆದರೆ ಆಕೆಯೇ ಅವನ ಮೇಲೆ ಅಪಾದನೆ ತಂದಿದ್ದವಳು!

ಸ್ಟೇಷನ್ನಿನಲ್ಲಿ ಆಕೆ ಸಹಾಯಮಾಡುವ ಬದಲು ಇವನನ್ನು ಇನ್ನೂ ಕಷ್ಟಕ್ಕೆ ಸಿಕ್ಕಿಸಿದಳು. 'ನಾನು ಮರೆತು ಟ್ರಾಂನಲ್ಲಿ ಬಿಟ್ಟದ್ದುಂಟು. ಈತನಿಗೆ ನನ್ನ ಮನೆಗೆ ಇಂದು ಸಂಜೆ ಬರಹೇಳಿದ್ದೆ. ಆದ್ದರಿಂದ ನಾನು ಮರೆತು ದನ್ನು ನನಗೆ ತಂದುಕೊಡಲು ತೆಗೆದುಕೊಂಡಿರಬಹುದು. ನನ್ನ ಫಿರ್ಯಾ ದೇನೂ ಇಲ್ಲ' ಎಂತ ಆಕೆ ಹೇಳಿದ್ದಿದ್ದರೆ ಸಾಕಾಗುತ್ತಿತ್ತು. ಆದರೆ ಇಂತಹ ವನೇ ಕಳುವುಮಾಡಿರಬಹುದು ಎಂತ ಅವನ ಚಹರೆಯನ್ನು ಕೊಟ್ಟಿದ್ದ ಹೆಂಗಸು, ಹಿಂದೆ ತನಗಾಗಿದ್ದ ಅವಮಾನವನ್ನು ಮನಸ್ಸಿನಲ್ಲಿಟ್ಟುಕೊಂಡು

ಅವನಿಗೆ ತೊಂದರೆ ಕೊಡಬೇಕೆಂದಿದ್ದವಳು, ಅವನ ಕಷ್ಟಗಳನ್ನೆಲ್ಲಾ ಕೇಳಿ ಇವನ ಮೇಲೆ ಛಲ ತೀರಿಸಿಕೊಳ್ಳಲು ಇದೇ ಸುಸಮಯವೆಂತ ದುರಾಲೋಚನೆಮಾಡಿ, ಪೋಲೀಸರಲ್ಲಿ ಇವನ ಮೇಲೆ ದೂರು ಕೊಟ್ಟಿದ್ದವಳು ಸಹಾಯಮಾಡುವಳೆ! 'ಈತ ನನ್ನೊಡನೆ ವ್ಯಾಸಂಗ ಮಾಡಿದ್ದುಂಟು. ನನ್ನಲ್ಲಿಗೆ ಬಂದಿದ್ದ. ನನ್ನ ಹ್ಯಾಂಡ್‌ಬ್ಯಾಗನ್ನು ಅಪಹರಿಸಿದವನು ಇವನೇ ಇರಬೇಕು. ಈತನು ನನ್ನ ಮನೆ ಬಿಟ್ಟ ಒಡನೆ ಅದು ಇಲ್ಲದುದನ್ನು ನಾನು ನೋಡಿಕೊಂಡೆ?' ಎಂದುಬಿಟ್ಟಳು!

ಇಷ್ಟಕ್ಕೆ ಆಕೆ ಸುಮ್ಮನಿರುತ್ತಾಳೆಯೆ! ಪೋಲೀಸ್ ಸ್ಟೇಷನ್ನಿನಿಂದ ಆಕೆ ಮೈಸೂರು ಅಸೋಸಿಯೇಷನ್ನಿಗೆ ಹೋಗಿ, ಮೈಸೂರಿನಿಂದ ಬೊಂಬಾಯಿ ಪ್ರಾಂತ್ಯಕ್ಕೆ ಕಳ್ಳರ ಸಂಖ್ಯೆ ಬರುವುದು ಹೆಚ್ಚಾಯಿತು ಎಂತ ಕಿಟ್ಟುವಿನ ಕತೆಗೆ ಕೈಕಾಲು ಹುಟ್ಟಿಸಿ, ಅವನ ಮೇಲೆ ಅಲ್ಲಿಯ ಕಾರ್ಯದರ್ಶಿಗೆ ಅಸಹ್ಯ ಹುಟ್ಟುವಂತೆ ಮಾಡಿದಳು. ಮತ್ತು ತನಗೆ ತಿಳಿದವರಲ್ಲೆಲ್ಲ ಅವನ ಮೇಲೆ ಅಪಪ್ರಚಾರಮಾಡಿ ಅದನ್ನೇ ಹೋದ ಕಡೆಯೆಲ್ಲ ಹರಡುತ್ತ ಬಂದಳು.

ಪ್ರಪಂಚದಲ್ಲೆಲ್ಲ ಬರಿಯ ದ್ರೌಪದೀ ದೇವಿಯಂತಹವರೇ ಇರುತ್ತಾರೆಯೆ?

ಕಿಟ್ಟುವನ್ನು ಸ್ಟೇಷನ್ನಿಗೆ ಒಯ್ದಾಗ ಅಲ್ಲಿ ಗುಂಪುಕೂಡಿದವರ ಪೈಕಿ ಒಬ್ಬಾತ ಸ್ಟೇಷನ್ನಿಗೆ ಹೋಗಿ ಕಿಟ್ಟುವನ್ನು ಮಾತನಾಡಿಸಿದ. ಆತನನ್ನು ಕಿಟ್ಟು ನೋಡಿಯೇ ಇರಲಿಲ್ಲ. ಆದರೆ ಕಿಟ್ಟುವನ್ನು ಆತ ಕಾಲೇಜಿನಲ್ಲಿ ಕಂಡಿದ್ದ. ಕಿಟ್ಟುವಿನ ಯೋಗ್ಯತೆ ಆತನಿಗೆ ಗೊತ್ತಿತ್ತು. ಆತ ಪೋಲೀಸಿನವರೊಡನೆ ಮಾತನಾಡಿ, ಬೇರೆ ಯಾರನ್ನೋ ಜಾಮೀನು ತರಲು ಹೋದ ಆತನಿಗೆ ಅಂದು ರಾತ್ರಿಯೊಳಗಾಗಿ ಸರಿಯಾದವರು ಸಿಗಲಿಲ್ಲ. ಕಿಟ್ಟುವಿನ ಹಾಸಿಗೆ ಮಾಡರ್ನ್‌ಹಿಂದೂ ಹೋಟಲಿನಲ್ಲಿ; ದೇಹ, ಪೋಲೀಸ್ ಸುಪರ್ದಿಯಲ್ಲಿ. ಆತ್ಮವೋ?

ಬೆಳಗಾಯಿತು, ಅಷ್ಟು ಹೊತ್ತಿಗೆ ಕಿಟ್ಟುವನ್ನು ಕಂಡಿದ್ದಾತ ಯಾರನ್ನೋ ಕರೆದುಕೊಂಡು ಬಂದು, ಆತನನ್ನು ಜಾಮೀನಿನ ಮೇಲೆ ಬಿಡಿಸಿಕೊಂಡುಹೋದ. ಆತನೆ ಧನಸಹಾಯಮಾಡಿ ಅವನಿಗಾಗಿ ಒಬ್ಬ ವಕೀಲರನ್ನು ಗೊತ್ತುಮಾಡಿ, ಬೇಕಾದ ಅನುಕೂಲಗಳನ್ನೆಲ್ಲ ಮಾಡಿಕೊಟ್ಟ.

ಪೋಲೀಸಿನವರು ಕಿಟ್ಟುವಿನ ಮೇಲೆ ಎರಡು ಮೊಖದ್ದಮೆಗಳನ್ನು ಹೂಡಿದರು. ಕಳ್ಳತನದ ಮೊಖದ್ದಮೆ ನಿಲ್ಲಲಿಲ್ಲ. ಪೋಲೀಸಿನವರನ್ನು ಹೊಡೆದು, ಅವರ ಸುಪರ್ದಿನಲ್ಲಿದ್ದಾಗ ಓಡಿ ಹೋಗಲು ಪ್ರಯತ್ನಪಟ್ಟಿದ್ದಕ್ಕೆ50ರೂಪಾಯಿ ಜುಲ್ಮಾನೆ,ತಪ್ಪಿದರೆ 15ದಿನ ಸಾದಾ ಶಿಕ್ಷೆ ವಿಧಿಸಿದರು. ಈ ಕಾಲದಲ್ಲಿ ಕಿಟ್ಟುವಿಗೆ ಆತನ ಸಹಾಯವಿಲ್ಲದಿದ್ದರೆ ಇಷ್ಟು ಸುಲಭವಾಗಿ ತಪ್ಪಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ.

ಈ ಮಧ್ಯೆ ದ್ರೌಪದಿ ದೇವಿ ಬೆಂಗಳೂರು ಪ್ರಾಂತ್ಯಕ್ಕೆ ಬಂದು, ಕಿಟ್ಟುವು ತನ್ನ ಹ್ಯಾಂಡ್‌ಬ್ಯಾಗನ್ನು ಕದ್ದನೆಂದೂ ಅದಕ್ಕಾಗಿ ಮೂರು ತಿಂಗಳು ಶಿಕ್ಷೆಯಾಯಿತೆಂದೂ ಆದರೂ ಅದರಿಂದ ವಿವೇಕ ತಂದುಕೊಳ್ಳದೆ, ಪೋಲಿಯಾಗಿ ಅಲೆಯುತ್ತ, ಕೆಟ್ಟಕೃತ್ಯಗಳನ್ನು ಮಾಡುತ್ತಿದ್ದಾನೆಂದೂ ಕತೆ ಕಟ್ಟಿಸಿ, ಪ್ರಚಾರ ಮಾಡಲಾರಂಭಿಸಿ, ಆತನಿಗೆ ಬೇಕಾದವರಿಗೆಲ್ಲ ಈ ಕತೆ ಹೇಳಿ, ಅವರ ಮನಸ್ಸಿನಲ್ಲಿ ಇವನ ಮೇಲೆ ಜಿಗುಪ್ಸೆ ಹುಟ್ಟುವಂತೆ ಮಾಡಿದಳು.

ಮೂರು ತಿಂಗಳು ಕಳೆಯುವುದರೊಳಗಾಗಿ ಪ್ರತಿಯೊಬ್ಬರ ಬಾಯಿಯಲ್ಲೂ ಇದೇ ಮಾತು! ಸಾಲದುದಕ್ಕೆ-ಮೈಸೂರು ಪ್ರಾಂತ್ಯದ ಕೆಲವು ಹುಡುಗರು ತಮ್ಮ ಸೀಮೆ ಬಿಟ್ಟು ಆಚೆ ಹೋಗಿ, ಇಂತಹ ಕೆಲಸಗಳನ್ನು ಮಾಡಿ ತಮ್ಮ ಸೀಮೆಯ ಹೆಸರನ್ನೇ ಕೆಡಿಸಿಬಿಡುತ್ತಾರೆ, ಎಂಬ ಅಪವಾದ ಸಹ ಕಿಟ್ಟು ಸಹಿಸಬೇಕಾಯಿತು.

ಕಿಟ್ಟುವಿನ ಮೇಲೆ ಹಾಕಲ್ಪಟ್ಟಿದ್ದ ಮೊಖದ್ದಮೆಗಳ ವಿಚಾರಣೆ ನಡೆದು ಆ ಕೇಸುಗಳಲ್ಲಿ ತೀರ್ಪುಕೊಡುವವರೆಗೆ ೩—೪ತಿಂಗಳು ಕಳೆದು ಹೋಗಿ, ಕಿಟ್ಟು ಆ ಟರ್ಮ್ ಶಾಲೆಗೆ ಕೂಡ ಸೇರಲಾಗಲಿಲ್ಲ. ಅವನ ಮೇಲೆ ಪೋಲೀಸಿನವರು ಕ್ರಮ ಜರುಗಿಸಿರುವ ವಿಷಯ, ಮೈಸೂರ್ ಅಸೋಸಿಯೇಷನ್‌ನ ಕಾರ್ಯದರ್ಶಿಗಳಿಗೆ ತಿಳಿದು, ಅವರು ಇವನ ವಿಷಯದಲ್ಲಿ ಯಾವ ವಿಧವಾದ ಸಹಾಯವನ್ನೂ ಮಾಡಲಿಲ್ಲ. ಇವನಿಗೆ ಅಲ್ಲಿ ಇರಲು ಕೂಡ ಅವಕಾಶ ಸಿಗಲಿಲ್ಲ. ಈ ಕೇಸಿನ ಕಾರಣದಿಂದ ಎಷ್ಟೋ ಜನ ಆತನೊಡನೆ ಸಂಭಾಷಣೆ ಮಾಡಲು ಸಹ ಹಿಂತೆಗೆದರು!

ಈ ವಿಷಯಗಳೆಲ್ಲ ಮುಕ್ತಾಯ ಹೊಂದುವ ವರೆಗೆ, ಕಿಟ್ಟುವು ಮೈಸೂರು ಪ್ರಾಂತ್ಯಕ್ಕೆ ಹೋಗಲಿಲ್ಲ. ಆತನಿಗೆ ಉಪಕಾರಮಾಡಿದಾತ

ಸಹ ಈತನಿಗಾಗಿ ಅಲ್ಲಿಯೇ ಉಳಿಯಬೇಕಾಯಿತು.

ಕಿಟ್ಟು ಹಿಂತಿರುಗಿ ಬಾರದಿದ್ದುದು, ಬೊಂಬಾಯಿನಲ್ಲಿ ಅವನ ಮೇಲೆ ಮಾಡಿದ್ದ ಮೊಖದ್ದಮೆ, ಅವನು ಕಾಲೇಜಿಗೆ ಸೇರದಿದ್ದುದು, ಅವನ ಮೇಲೆ ದ್ರೌಪದಿ ದೇವಿ ಮಾಡಿದ ಅಪಪ್ರಚಾರ-ಇವೆಲ್ಲ ಒಟ್ಟಾಗಿ ಕಿಟ್ಟುವಿನ ಕೀರ್ತಿಗೆ ಮಸಿ ಬಳಿದು, ಅವನನ್ನು ಕಂಡರೆ ಎಲ್ಲರೂ ಹೀನವಾಗಿ ಕಾಣುವ ಸ್ಥಿತಿಗೆ ತಂದಿಟ್ಟಿತು. ಕಿಟ್ಟು ಮೈಸೂರು ಸೀಮೆಗೆ ಬಂದ ಮೇಲೆ ಇವನನ್ನು ಆದರವಾಗಿ ಕಾಣುತ್ತಿದ್ದ ಜನರೆಲ್ಲ ಈಗ ಅಸಡ್ಡೆಯಾಗಿ ಕಂಡರು. ಜನರ ನಡತೆಯು ವಿಪರೀತವಾಗಿದೆಯಂತ ಆತನಿಗೆ ಅನಿಸಿತಾದರೂ ಏಕೆಂತ ಗೊತ್ತಾಗಲಿಲ್ಲ. ಕ್ರಮೇಣ ಇವನಿಗೆಲ್ಲ ವಿಷಯಗಳು ತಿಳಿದು, ಇವನು ನಿಜ ಹೇಳಿದರೂ ನಂಬದಾದರು!

ಒಟ್ಟಿನಲ್ಲಿ ಇವನು ಸಮಾಜದಿಂದ ಬಹಿಷ್ಕೃತನಾದವನಂತಾದನು; ಯಾರೂ ಬಳಿ ಸೇರುತ್ತಿರಲಿಲ್ಲ. ಅವನು ಬಂದರೂ ದೂರವಿಡುತ್ತಿದ್ದರು.

ಸೀಮೆಯಲ್ಲೆಲ್ಲ ಹರಡಿದ ವಿಷಯ ಇವನ ವಿಷಯದಲ್ಲಿ ಶ್ರದ್ಧೆ ಇಟ್ಟಿದ್ದ ಸೂಪ್ರೆಂಟರಿಗೂ ಇವನ ನೆಂಟರಿಷ್ಟರಿಗೂ ತಿಳಿಯದಿರುತ್ತದೆಯೆ? ಕಿಟ್ಟುವಿನ ಚಿಕ್ಕಪ್ಪ ಎಷ್ಟು ವಿಧವಾಗಿ ನಿಜ ಹೇಳಿದರೂ, ಸೂಪ್ರೆಂಟರಿಗೆ ಅನುಮಾನವೆ! ಕ್ರಮೇಣ ಅವರು ಇವರ ಮನೆಗೆ ಬರುವುದು ಕಡಮೆಯಾಯಿತು. ಮೊದಲಿನ ಮೈತ್ರಿ ಕಮ್ಮಿಯಾಗಿ, ಔಪಚಾರಿಕ ವಿಷಯಗಳಿಗೆ ಮಾತ್ರ ನಿಂತಿತು. ಕಿಟ್ಟುವನ್ನು ಅಷ್ಟು ವಿಶ್ವಾಸದಿಂದ ಮೊದಲು ಕಾಣುತ್ತಿದ್ದವರು ಈಗ ಕಂಡರೂ ಕಾಣದಂತೆ ನಟಿಸುತ್ತಿದ್ದರು. ವಿಧಿಯಿಲ್ಲದೆ ಬಂದರೆ ಒಂದೆರಡು ಮಾತು.

ಕಿಟ್ಟುವಿಗೆ ಹುಚ್ಚು ಹಿಡಿಯುವುದೊಂದು ಬಾಕಿ. ಅವನು ಯಾರಲ್ಲಿಯೂ ಹೋಗುತ್ತಿರಲಿಲ್ಲ. ಬೆಳಗಿನಿಂದ ಸಂಜೆಯ ವರೆಗೂ ಮನೆಯಲ್ಲಿರುವುದು, ಸಂಜೆ ಕಾಲಾಡಿಕೊಂಡು ಬಂದು ಮನೆ ಸೇರುವುದು, ಇಷ್ಟಕ್ಕೆ ಮಾತ್ರ ಅವನ ದಿನಚರ್ಯೆ ಇಳಿಯಿತು. ಆಟಪಾಟಗಳಲ್ಲಿ ಅವನಿಗಿದ್ದ ಉತ್ಸಾಹ ಎಲ್ಲಿಯೋ ಮಾಯವಾಗಿ ,ಯಾವಾಗಲೂ ಚಿಂತಾಕ್ರಾಂತನಾಗಿ ಏನನ್ನೋ ಆಲೋಚಿಸುತ್ತ ಕುಳಿತಿರುತಿದ್ದ.

ಮಾಲತಿಯ ತಂದೆ ಆ ಬಗೆಯಾದರೆ, ಮಾಲತಿಯೋ?

ಮಾಲತಿ ಈ ಕತೆಯನ್ನು ನಂಬಲೇ ಇಲ್ಲ. ಕಿಟ್ಟುವಿನ ಮೇಲಿದ್ದ

ಮಮತೆ ಅವಳಿಗೆ ಸ್ವಲ್ಪವೂ ಕಡಿಮೆಯಾಗಲೇ ಇಲ್ಲ. ಅವನನ್ನು ಕಂಡು ಸಂತೈಸಿ, ಆದರಿಸಬೇಕೆಂದು ಅವಳ ಆಕಾಂಕ್ಷೆ. ಆದರೆ ಅದು ಸಾಧ್ಯವಿರಲಿಲ್ಲ. ಅವನನ್ನು ನೋಡಬೇಕೆಂಬ ಈಡೇರಲಾಗದ ಉತ್ಕಟೇಚ್ಛೆಗೆ ಅವಳು ಸಿಕ್ಕಿ, ಅದರ ಕಾವಿಗೆ ನವೆಯುತ್ತ ಹೋದಳು. ಅವಳು ಚಿಂತಾಕ್ರಾಂತಳಾಗಿ ಅನ್ಯಮನಸ್ಕಳಾಗಿರುತ್ತಿದ್ದಳು.

ಇದನ್ನು ಸೂಪ್ರೆಂಟರು ಗಮನಿಸಲಿಲ್ಲ. ಆದರೆ ಕಿಟ್ಟುವಿನ ಚಿಕ್ಕಮ್ಮ ಒಬ್ಬರೇ ಕಂಡುಕೊಂಡಿದ್ದವರು.

ಇಷ್ಟು ಹೊತ್ತಿಗೆ ದೀವಳಿಗೆ ರಜದ ಪ್ರಯುಕ್ತ, ಊರಿಗೆ ಬಂದ ಕಿಟ್ಟುವಿಗೆ ಸಹಾಯಮಾಡಿದಾತನೂ, ಮತ್ತು ಕಿಟ್ಟುವನ್ನು ಅಲ್ಲಿ ಕಂಡಿದ್ದ ಕೆಲವರೂ ಮೈಸೂರು ಸೀಮೆಗೆ ಬಂದರು. ಅವರನ್ನು ಪ್ರತಿಯೊಬ್ಬರೂ ಈ ವಿಷಯ ಕೇಳುವವರೇ? ಅವರು ಯಥಾರ್ಥವನ್ನು ತಿಳಿಸಿದೊಡನೆಯೇ —ಎಲ್ಲರೂ ಕಿಟ್ಟುವಿನ ವಿಷಯದಲ್ಲಿ ಪರಿತಾಪಪಟ್ಟು, ದ್ರೌಪದಿಯನ್ನು ನಿಂದಿಸುವವರೇ.

ಜನ ಸಾಮಾನ್ಯದ ಮಟ್ಟವೇ ಅಷ್ಟು! ಹೇಳಿಕೆಯ ಮಾತುಗಳನ್ನು ಕೇಳಿ ಯುಕ್ತಾಯುಕ್ತ ವಿಮರ್ಶೆಯಿಲ್ಲದೆ ಕ್ಷಣಕ್ಷಣಕ್ಕೂ ಅದರ ಅಭಿಪ್ರಾಯವನ್ನು ಬದಲಾಯಿಸುವ ಮನೋಭಾವವೇ ಅದಕ್ಕಿರುವುದು. ಹೇಳುವವರ ಮಟ್ಟಕ್ಕೆ ಅದು ಬೆಲೆ ಕೊಡುವುದೇ ಹೊರತು, ಕೇಳುವ ತಮಗಾಗಲಿ ಹೇಳಲ್ಪಡುತ್ತಿರುವವರ ಮಟ್ಟಕ್ಕಾಗಲಿ ಅದು ಬೆಲೆ ಕಟ್ಟಲಾರದು!

ಈ ವಿಚಾರ ಕ್ರಮೇಣ ಸೂಪ್ರೆಂಟರಿಗೂ ತಿಳಿದು, ಕಿಟ್ಟುವಿನ ವಿಷಯದಲ್ಲಿ ತಾವು ಅಶ್ರದ್ಧೆ ತೋರಿಸಿದುದು ತಪ್ಪಾಯಿತೆಂದು ತಮ್ಮ ಸಂಸಾರದೊಡನೆ ಹೇಳಿ, ಹಿಂದಿನ ಮರೆತುಹೋಗಿದ್ದ ಮೈತ್ರಿಯನ್ನು ಪುನಃ ಉದ್ದೀಪನಗೊಳಿಸಲು ಅವರೇ ಪ್ರಯತ್ನಪಡಬೇಕೆಂತ ಹೇಳಿದರು.

ಸರಿ, ಮಾಲಿನಿಯ ತಾಯಿ ಕಿಟ್ಟುವಿನ ಚಿಕ್ಕಮ್ಮನ ಮನೆಗೆ ತಿರುಗಲು ಪ್ರಾರಂಭವಾಯಿತು. ಕಿಟ್ಟುವಿನ ಚಿಕ್ಕಮ್ಮ ಸಹ ಒಂದೆರಡು ಬಾರಿ ಅವರ ಮನೆಗೆ ಹೋದರು. ಆ ಕಾಲದಲ್ಲಿ ಮಾಲಿನಿಯ ಚರ್ಯೆಯನ್ನು ನೋಡಿದ್ದ ಅವರು, ಕಿಟ್ಟುವಿನ ಚರ್ಯೆಗೆ ಅವನ್ನು ಹೋಲಿಸಿದರು. ಎರಡೂ ಒಂದೇ ರೀತಿಯದಾಗಿತ್ತು.

ಕಿಟ್ಟುವಿನ ಮನಸ್ಸು ಮಾಲಿನಿಯಲ್ಲಿ ನೆಟ್ಟಿದೆಯೆಂತ ಅವನ ಚಿಕ್ಕಮ್ಮ

ನಿಗೆ ತಿಳಿದಿತ್ತು. ಆದರೆ ಮಾಲಿನಿಯು ಕಿಟ್ಟುವನ್ನು ಇನ್ನೂ ಪ್ರೀತಿಸು ತ್ತಿದ್ದಳೋ ಇಲ್ಲವೋ, ಅವರು ಹೇಗೆ ಕಂಡುಹಿಡಿಯಬೇಕು!

ಒಂದು ದಿನ ಅವರು ಮಾಲಿನಿಯನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು. ಆ ಮಾತು ಈ ಮಾತು ಆಡುವಾಗ ಕಿಟ್ಟುವಿನ ವಿಚಾರ ಎತ್ತಿ ಮಾತನಾಡುತ್ತ, ಮಾಲಿನಿಯು ಹೇಗೆ ವರ್ತಿಸುತ್ತಿದ್ದಳೆಂಬುದನ್ನು ಗ್ರಹಿಸಿ, ಮೆಲ್ಲನೆ ಆಕೆಯ ಮದುವೆಯ ವಿಷಯವನ್ನು ಪ್ರಸ್ತಾಪಿಸಿದಳು. ಕಿಟ್ಟು ವಿನೊಡನೆ ಅಲ್ಲದೆ ಇತರರೊಡನೆ ತಾನು ವಿವಾಹವಾಗುವುದಿಲ್ಲವೆಂಬ ಆಕೆಯ ಅಭಿಪ್ರಾಯವನ್ನು ಕಂಡು, ಕಿಟ್ಟು ತಾನಾಗಿಯೇ ಮದುವೆಮಾಡಿ ಕೊಳ್ಳುತ್ತೇನೆಂದು ಹೇಳಿದ್ದರೂ, ಮೊದಲು ಆ ಮಾತಿಗೆ ಒಪ್ಪಿ ಆ ಮೇಲೆ ಆ ವಿಷಯದಲ್ಲಿ ಔದಾಸೀನ್ಯ ತೋರಿಸಿದುದರಿಂದ, ಅವರೇ ಈಗ ಆ ಪ್ರಸ್ತಾಪ ಮುಂದುವರಿಸಬೇಕಾಗಿದೆಯೆಂದೂ ಆಕೆಯ ತಂದೆತಾಯಿಗಳು ಆ ವಿಚಾರಕ್ಕೆ ಸಂಕೋಚಪಡುತ್ತಿದ್ದುದರಿಂದ, ತಾನು ನಿಂತು ಆ ಮಾತು ಪ್ರಸ್ತಾಪಮಾಡಬೇಕಾಯಿತೆಂದೂ ಹೇಳಿದರು.

* * * * *

ಅಂದೇ ಸಂಜೆ ಕಿಟ್ಟು ವಾಕಿಂಗ್ ಹೊರಟಿದ್ದ ಸ್ವಲ್ಪ ಹೊತ್ತಿಗೆ ಮಾಲಿನಿಯೂ ಕಿಟ್ಟುವಿನ ಚಿಕ್ಕಮ್ಮನೂ ಸಹ ಹೊರಟರು ಕಿಟ್ಟುವೂ ಮಾಲಿನಿಯೂ ಅಂದು ಕೈಹಿಡಿದಿದ್ದ ಜಾಗದಲ್ಲಿಯೇ ಆತ ಕುಳಿತುಕೊಂಡು ಏನೋ ಯೋಚಿಸುತ್ತಿದ್ದ

ಇವರಿಬ್ಬರೂ ಬರುವ ಶಬ್ದ ಕಿಟ್ಟುವಿನ ಕಿವಿಯ ಮೇಲೆ ಬಿದ್ದು, ಆತ ದೃಷ್ಟಿಯೆತ್ತಿ ಇವರನ್ನು ನೋಡಿ, ಮಾಲಿನಿಯೂ ಒಡನೆ ಇದ್ದುದರಿಂದ ಅಲ್ಲಿಂದ ಹೊರಡಲು ಎದ್ದ.

'ಯಾಕೋ ಕಿಟ್ಟು, ನಮ್ಮನ್ನು ನೋಡಿ ಎದ್ದೆ? ನಮ್ಮಲ್ಲಿ ಯಾರನ್ನು ಕಂಡರೆ ನಿನಗೆ ಸರಿಬೀಳುವುದಿಲ್ಲ. ನನ್ನನ್ನೋ, ಮಾಲಿನಿಯನ್ನೋ"

ಕಿಟ್ಟು ಉತ್ತರ ಹೇಳಲಿಲ್ಲ. ಮಾಲಿನಿಗೆ ಕಷ್ಟಕ್ಕೆ ಒಂತು ಕಿಟ್ಟುವನ್ನು ತಾನು ಸಂಪಾದಿಸಬೇಕಾದರೂ ಅಂದೇ; ಪಡೆಯಲಾರದಂತೆ ಕಳೆದುಕೊಳ್ಳ ಬೇಕಾದರೂ ಅಂದೇ--ಎಂತ ಅವಳಿಗೆ ಮಿಂಚು ಹೊಳೆದಂತೆ ತೋರಿತು ಅವಳು ಕಿಟ್ಟುವನ್ನು ಕಳೆದುಕೊಳ್ಳಲು ಸಿದ್ಧಳಾಗಿರಲಿಲ್ಲ. ಮನಸ್ಸು ಘಟ್ಟಿ ಮಾಡಿಕೊಂಡು ಹೇಳಿದಳು:

'ನನ್ನನ್ನು ಕಂಡರೆ ಆಗೋದಿಲ್ಲ, ಎಂತ ಕಾಣುತ್ತೆ. ಇಲ್ಲದಿದ್ದರೆ ಈಗ ಯಾಕೆ ಏಳುತ್ತಿದ್ದರು? ಈ ಊರಿಗೆ ಬಂದು ಇಷ್ಟು ದಿವಸವಾದರೂ ನನ್ನನ್ನು ಯಾಕೆ ಮಾತನಾಡಿಸದೆ ಇರುತ್ತಿದ್ದರು? ಹೆಂಗಸಾದ ನಾನು ಇವರನ್ನು ಹುಡುಕಿಕೊಂಡು ಬಂದು ಮಾತನಾಡಿಸಬೇಕಾಗಿದೆ. ಅಂದು ಕೊಟ್ಟ ಮಾತು ಅವರಿಗೆ ಜ್ಞಾಪಕವಿಲ್ಲದಿರಬಹುದು, ಹೆಂಗಸಾದ ನನಗೂ ಅದು ಜ್ಞಾಪಕವಿಲ್ಲದಿದ್ದರೆ!' ಎಂದಳು.

* * * * *

ಸರಿ, ಮದುವೆ ಆಯಿತು. ಕಿಟ್ಟುಮದುವೆಗೆ ದ್ರೌಪದೀದೇವಿಗೂ ಆಹ್ವಾನ ಹೋಗಿತ್ತು. ಆದರೆ ಅವಳು ಬರಲಿಲ್ಲ.

ಮದುವೆ ಆದ ಮೇಲೆ ಬೊಂಬಾಯಿಗೆ ಮಾಲಿನಿ ಸಮೇತ ಕಿಟ್ಟು ಹೋಗಿ M. A., L. L. B. ಮಾಡಿಕೊಂಡು ಬಂದ. ಅವನು ಕುಳಿತ ವರ್ಷ ಪ್ರಾವಿನ್ಸ್‌ಗೆ ಅವನೇ ಮೊದಲನೆಯವನಾಗಿ ಬಂದ. ಈಗ ಲಾಯರಾಗಿದ್ದಾನೆ. ನಿನ್ನ ಸ್ನೇಹಿತರಿದ್ದಾರಲ್ಲ; ಕಳ್ಳರು-ಅವರೆಲ್ಲ ಇವನ ಕಕ್ಷಿಗಾರರು. ನಿನ್ನ ಸ್ನೇಹಿತ ನೂರಾರು ಜನಕ್ಕೆ ಬಿಡುಗಡೆ ಮಾಡುತ್ತಾಇದ್ದಾನೆ. ಅವರ ಪೈಕಿ ಒಬ್ಬ, ತನ್ನಂತಹ ನಿರಪರಾಧಿ, ಇದ್ದರೆ ಜೈಲಿಗೆ ಆತ ಹೋಗದಿರಲಿ, ಅಂತ.

## 14. ಮಣಿ

ನಮ್ಮಲ್ಲಿ ಬರಹಗಾರರು ಕಮ್ಮಿ. ಅದರಲ್ಲೂ ಬರವಣಿಗೆಯಿಂದ ಸ್ವಲ್ಪ ಹೆಸರನ್ನು ಪಡೆದು ಕಾಸನ್ನು ಸಂಪಾದಿಸಿರುವವರು ಇನ್ನೂ ಕಮ್ಮಿ. ಅಂತಹರಿಗೆ ತಲೆ ನಿಲ್ಲೋದು ಅಸಾಧ್ಯ. ಅವರದೆಲ್ಲ ಒಂದೇ ಗುಂಪು. ಆ ಗುಂಪಿಗೆ ಇನ್ನೊಬ್ಬರಿಗೆ ಪ್ರವೇಶವಿಲ್ಲ. ಅಕ್ಷರ ಎರಡು ಬರೆದು ಕನ್ನಡ ತಾಯ ಸೇವೆ ಮಾಡೋಣ ಅಂತ ಪ್ರಯತ್ನಪಡುವವರಿಗಾಗಲಿ, ಎರಡಕ್ಷರ ಬರೆದು, ಅದರಿಂದ ಜೀವಿಸಬೇಕಾದವರಿಗಾಗಲಿ ಆ ಗುಂಪಿನಲ್ಲಿ ಸ್ಥಳವಿಲ್ಲ. ಅಂಥವರನ್ನು ಅವರು ಕೊಂದುಬಿಡುತ್ತಾರೆ. ಮೇಲೆ ಹೇಳಿದ ಗುಂಪಿನವರು ಒಬ್ಬರ ಬೆನ್ನು ಇನ್ನೊಬ್ಬರು ತಟ್ಟುತ್ತಾರೆ. ಕನ್ನಡ ತಾಯ ಸೇವೆ ಮಾಡುವುದಕ್ಕೆ ಸಿದ್ಧರಾಗಿರುವವರನ್ನು, ಇವರ ವಿಚಾರ ಒಂದೆರಡು ಮಾತು ಹೇಳಲು ಧೈರ್ಯಗೊಳ್ಳುವವರನ್ನು, ಅಲ್ಲಗಳೆದು ಅವರ ಸ್ಥಾನ ಮಾನಗಳಿಗೆ ಭಂಗತಂದು, ಅವರು ಅಕ್ಷರ ಬರೆಯಲು ಅನರ್ಹರೆಂದು ಸಿದ್ಧಾಂತ ಮಾಡಿಬಿಡುತ್ತಾರೆ.

ಇಂತಹವರ ಗುಂಪಿನಲ್ಲಿ ನಾನೂ ಒಬ್ಬ. ನಾನು ಹಾಗೆ ಹೇಳಿಕೊಳ್ಳುತ್ತಿರಲಿಲ್ಲ. ವಿಧಿಯಿಲ್ಲದೆ ಹೇಳಬೇಕಾಗಿದೆ. ಕಳ್ಳತನ ಮಾಡಿದವನು ಪೋಲಿಸಿನವರ ಮುಂದೆ ಒಪ್ಪಿಕೊಳ್ಳುವ ಹಾಗೆ-

ಹಿರಿಯರು ಸಂಪಾದಿಸಿದ ಆಸ್ತಿ ನನಗೆ ಸ್ವಲ್ಪ ಇದೆ. ಅಲ್ಲದೆ ಕನ್ನಡ ತಾಯ ಸೇವೆ ಮಾಡಿ, ಅದರಿಂದ ಪ್ರತಿಫಲ ಪಡೆದು, ಜೀವಿಸುವ ಬಹಳ ಸ್ವಲ್ಪ ಜನರ ಪೈಕಿ ನಾನೂ ಒಬ್ಬ ಎಂತ ಧಾರಾಳವಾಗಿ ಹೇಳಿಕೊಳ್ಳುವ ಸುಯೋಗವನ್ನು ದೇವರುಕೊಟ್ಟಿದ್ದಾನೆ. ಇವೆರಡರಿಂದ ನನ್ನ ಜೀವನ ಸುಸೂತ್ರವಾಗಿ ನಡೆಯುತ್ತಿದೆ.

ಒಂದು ಸಲ ನಾನು........ಊರಿಗೆ ಬಂದೆ. ಅಲ್ಲಿ ನನಗೆ ಬೇಕಾದ ಜನ ಬಹಳವಿದ್ದುದರಿಂದ, ಪ್ರತಿ ದಿನ ಭಾಷಣ ಔತಣಗಳು ನಡೆಯುತ್ತಿದ್ದವು.

ಒಂದು ರಾತ್ರಿ ನಾನು ಬಿಡದಿಗೆ ಬಂದಾಗ್ಯೆ ನನ್ನ ಶಿಷ್ಯ 'ನಿಮ್ಮನ್ನು ಯಾರೋ ಹುಡುಕಿಕೊಂಡು ಬಂದಿದ್ದರು. ಚೀಟಿ ಗೀಟಿ ಕೊಟ್ಟು ಹೋಗಲಿಲ್ಲ. ಹೆಸರು ಮಾತ್ರ ಹೇಳಿ ಹೋದರು; ಮಣಿ ಅಂತ. ಬಂದರೆ ತಿಳಿಸ

ಬೇಕು ಅಂತ ಹೇಳಿದರು' ಎಂದ. ಆ ಹೆಸರಿನ ನನ್ನ ಸ್ನೇಹಿತರಾಗಲಿ ಪರಿಚಯಸ್ಥರಾಗಲಿ ಯಾರೂ ಇರಲಿಲ್ಲ. ಯಾರಿರಬಹುದೆಂತ ಊಹಿಸಲು ಪ್ರಯತ್ನಪಟ್ಟೆ. ಸಾರ್ಥಕವಾಗಲಿಲ್ಲ. ಯಾರೋ ಯಾಚಕಕ್ಕೇನಾದರೂ ಬಂದಿದ್ದರೇನೋ; ಅವರನ್ನು ನೋಡದಿದ್ದರೆ ಏನು ನಿಂತು ಹೋಗುವುದು-ಎಂದುಕೊಂಡೆ.

ಮಾರನೆಯ ದಿನ...... ಸಂಘದಲ್ಲಿ ನನ್ನ ಭಾಷಣವಿತ್ತು. ಅದನ್ನೂ ಸವಿಯೂಟವನ್ನೂ ಮುಗಿಸಿಕೊಂಡು, ನಾನು ಮನೆಗೆ ಬರುವ ಹೊತ್ತಿಗೆ ಬಹಳ ಹೊತ್ತಾಗಿತ್ತು. ಆ ರಾತ್ರಿ ಸಹ ಮಣಿ ಬಂದಿದ್ದ ಎಂತ ನನ್ನ ಶಿಷ್ಯ ಹೇಳಿದ.

ಇನ್ನೂ ಎರಡು ದಿನ ಹಾಗೆಯೇ ಕಳೆಯಿತು ಆತ ಪ್ರತಿದಿನ ಬರುತ್ತಿದ್ದಾನೆ ಎಂತ ಗೊತ್ತಾಯಿತು.

ಏನು, ದಿನಾ ಬರುತ್ತಿದ್ದಾನೆಯೇ?

'ಹುಂ, ಪುನಃ ಬರುತ್ತೇನೆಂತ ಹೇಳಿದ್ದಾನೆ'

ಹೇಗಿದ್ದಾನೆ?

'ಸುಮಾರು ೩೦ ವರ್ಷದವನಿರಬಹುದು. ಬಹಳ ಬಡವ ಅಂತ ಕಾಣುತ್ತೆ.'

ಒಬ್ಬನೇ ಬರ್ತಾ ಇದ್ದಾನೆಯೇ.

'ಇಲ್ಲ. ಜೊತೇಲಿ ಇನ್ನೊಬ್ಬ ವಯಸ್ಸಾದವನೂ ಬರುತ್ತಾನೆ'

ಯಾರು ಇವನು-ದಿನಾ ಬರ್ತಾ ಇರೋನು? ಏನಿರಬಹುದು ನನ್ನ ಹತ್ತಿರ ಇವನಿಗೆ ಕೆಲಸ-ಅಂತ ಅಂದುಕೊಂಡೆ.

ಮಾರನೆಯ ದಿನ ನನಗೆ ವಿರಾಮವೂ ಇತ್ತು. ಅಲ್ಲದೆ ಬೆಳಗಿನಿಂದ ಒಂದೇ ಸಮನಾಗಿ ಜಡಿಮಳೆ ಸುರಿಯುತ್ತಾ ಇದ್ದುದರಿಂದ, ಆಚೆ ಹೋಗುವುದಕ್ಕೆ ಮನಸ್ಸಿಗೆ ಬೇಸರಿಕೆಯಾಯಿತು. ನಾನು ಮಧ್ಯಾಹ್ನ ನಿದ್ರೆಮಾಡಿ ಎದ್ದು, ಯಾವುದೋ ಒಂದು ಪುಸ್ತಕ ಓದುತ್ತಾ, ತಿಂಡಿ ತಿನ್ನುತ್ತಾ ಕುಳಿತಿದ್ದೆ. ಸಮೀಪದಲ್ಲಿಯೇ ಬಿಸಿಬಿಸಿ ಕಾಫಿ ಹಬೆಯಾಡುತ್ತಿತ್ತು.

ನನ್ನ ಶಿಷ್ಯ ಮೆಲ್ಲಗೆ ತಲೆಹಾಕಿ 'ಮಣಿ ಬಂದಿದ್ದಾನೆ' ಎಂದ.

ಅವನಿಗೇನು? ಮಾಡೋಕೆ ಬದುಕಿಲ್ಲವಂತೆನೋ, ಏನು ಬೇಕು ಅವನಿಗೆ? ಎಂತ ಅವನ ಮೇಲೆಬಿದ್ದೆ.

'ಮನೇಲ್ಲಿಲ್ಲ ಎಂತ ಹೇಳಿಬಿಡಲೇನು?'

ಎಲ್ಲಿದಾನೆ?

'ವರಾಂಡದಲ್ಲಿದ್ದಾರೆ; ನೀವು ಇದ್ದಿರೇನೋ ನೋಡ್ತೇನೆ, ಎಂತ ಹೇಳಿ ಬಂದೆ.'

ಹೇಗೆ ಬಂದರೋ.

'ಒಂದು ಛತ್ರಿ ಹಿಡಿದುಕೊಂಡು ಇಬ್ಬರೂ ಬಂದಿದ್ದಾರೆ. ಮಳೇಲಿ ನೆನೆದಿದ್ದಾರೆ.'

ಹಾಗಾದರೆ ಈಗಲೇ ನೋಡಿ ಮುಗಿಸಿಬಿಡೋಣ. ಕರಿ ಆ ಮಣೀನ ಒಳಗೆ. ಆ ಇನ್ನೊಬ್ಬ ಅಲ್ಲೇ ಇರಲಿ. ಅವರ ಒದ್ದೆ ಬಟ್ಟೆಗಳು ಇಲ್ಲೇನೂ ನೀರು ತೊಟ್ಟಿಕ್ಕಿಸುವುದು ಬೇಡ.

ನನ್ನ ಶಿಷ್ಯ ಮಣಿಯನ್ನು ಒಳಗೆ ತರಲುಹೋದ.

ನಾನು ಓದುತ್ತಾ ಇದ್ದ ಪುಸ್ತಕವನ್ನು ಮುಚ್ಚಲಿಲ್ಲ. ಕುಳಿತಿದ್ದ ಜಾಗಬಿಟ್ಟು ಏಳಲಿಲ್ಲ. ನನ್ನ ಬಾಗಿಲಿಗೆ ಪ್ರತಿದಿನ ಅಲೆದು, ನನಗೆ ಬೇಜಾರುಂಟುಮಾಡಿದ್ದರಿಂದ ನನಗೆ ಅವನ ಮೇಲೆ ಅದೊಂದು ತರಹ ಕ್ರೋಧ ಹುಟ್ಟಿ, ಅವನು ನನ್ನ ಬಳಿ ಬರಲು ಕಾರಣವೇನೆಂಬುದನ್ನು ಮಾತ್ರ ಕೇಳಿ, ಕಳಿಸಿಬಿಡಬೇಕೆಂತ ನಿರ್ಧಾರ ಮಾಡಿಕೊಂಡೆ.

ಮಣಿನ ಒಳಗೆ ಬಿಟ್ಟು, ನನ್ನ ಶಿಷ್ಯ ಹೊರಟುಹೋದ. ಕೂತುಕೊಳ್ಳಿ ಎಂತ ಕೈಸನ್ನೆ ಮಾಡಿ, ಹಾಗೆಯೇ ಆತನನ್ನು ನೋಡಿದೆ. ಸುಮಾರಾದ ಎತ್ತರದ ಆಳು, ಕೃಶವಾದ ದೇಹ, ಅಗಲವಾದ ಕಣ್ಣುಗಳು; ಮುಖಕ್ಕೆಲ್ಲಾ ಅವೇ ಭೂಷಣವಾಗಿದ್ದರೂ, ಗುಳಿ ಬಿದ್ದು ನೋಡಲು ಪ್ರೇತದ ಮುಖದಂತೆ ತೇಜೋಹೀನವಾಗಿದ್ದುವು.

ಆತನ ಕೈಯಲ್ಲಿ ಒಂದು ಕಾಗದದ ಸುರುಳಿ ಇತ್ತು.

ಸ್ವಲ್ಪ ಹೊತ್ತಾದರೂ ಆತನು ಮೌನವಾಗಿದ್ದುದರಿಂದ ನಾನೇ ಮಾತನ್ನು ಪ್ರಾರಂಭಿಸಬೇಕಾಯಿತು.

ನೀವು ಒಂದೆರಡು ಸಲ ಬಂದಿದ್ದಿರಂತೆ.

'ಒಂದೆರಡು ಸಲವೇಕೆ ಸ್ವಾಮಿ; ಎಂಟು ದಿನದಿಂದ ತಮ್ಮ ಭೇಟಿ ಆಗುತ್ತೆಯೇನೋ ಅಂತ ಹಗಲೂ ರಾತ್ರಿಯೂ ಬರ್ತಾ ಇದ್ದೇನೆ. ಈ ದಿನ ನನಗೆ ಆ ಸುಯೋಗ ಒದಗಿ, ನಾನು ಕೃತಾರ್ಥನಾದೆ.'

ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ.

ಈ ಊರಿಗೆ ಬಂದಷ್ಟು ದಿವಸದಿಂದ ಪುರಸೊತ್ತೇ ಇಲ್ಲರಿ.

'ಅಲ್ಲವೆ, ಸ್ವಾಮಿ; ಅದೇ ಕೆಲಸವಾಗಿ ಬಂದಿದ್ದೀರಿ, ಈ ಊರಿಗೆ. ದಿನಾ ನಾಲ್ಕಾರು ಕಡೆ ಭಾಷಣ. ಪರಿಚಯಸ್ಥರು ಬೇರೆ.'

ಪುನಃ ನಿಶ್ಶಬ್ದ.

ಆತನೇ ಹುಡುಕಿಕೊಂಡು ಬಂದಿದ್ದಾನೆ, ಆತನೇ ಹೇಳಲಿ, ಆತನ ಉದ್ದಿಶ್ಯವೇನೋ ಎಂತ—ನನ್ನ ಇಷ್ಟ. ಆದರೆ ಆತನೇನು ಬಾಯೇ ಬಿಡಲಿಲ್ಲ. ಹಾಗೇ ನೋಡಿದೆ. ಮಳೆಯಲ್ಲಿ ನೆನೆದಿದ್ದ ಬಟ್ಟೆಗಳು ಮೈಗೆ ಅಂಟಿಕೊಂಡು, ಕುರ್ಚಿಯ ಒಂದು ಮೂಲೆಯಲ್ಲಿ ಮುದುರಿಕೊಂಡು, ದೃಷ್ಟಿಯನ್ನೂ ನೆಲಕ್ಕೆ ಹಾಕಿ, ನಿಶ್ಶಬ್ದವಾಗಿ ಕುಳಿತುಕೊಂಡಿದ್ದ. ದೈನ್ಯತೆಯೇ ಮೂರ್ತಿವೆತ್ತಂತಿದ್ದ ಅತನನ್ನು ನೋಡುತ್ತಾ ಇದ್ದೆ.

ಇನ್ನೂ ಸ್ವಲ್ಪ ಕಾಲ ಕಳೆಯಿತು. ನನಗೆ ಸ್ವಲ್ಪ ಸ್ವಲ್ಪವಾಗಿ ತಾಳ್ಮೆ, ಕಡಿಮೆಯಾಗುತ್ತಾ ಬಂದು, ಕಾಯುವುದು ಬೇಸರವೆಂತ ಅನಿಸಿತಾದರೂ ಯಾವ ಅಭಿಪ್ರಾಯದಿಂದ ಆತ ಬಂದಿದ್ದಾನೆಯೋ ಅದನ್ನು ಅವನೇ ಬಾಯಿ ಬಿಟ್ಟು ಹೇಳಲೆಂದು ಸುಮ್ಮನೆ ಕುಳಿತಿದ್ದೆ.

ಕೊನೆಗೆ ಆತ ತನ್ನ ದೃಷ್ಟಿಯನ್ನು ಮೇಲಕ್ಕೆತ್ತದೆಯೇ 'ಕನ್ನಡ. ಮಾತೆಯ ಸೇವೆ ಮಾಡಿ, ಅದರಿಂದ ಕೀರ್ತಿ ಮತ್ತು ದ್ರವ್ಯಗಳನ್ನು ಸಂಪಾದಿಸಿ, ಅನಕೂಲವಾಗಿರುವ ನೀವೆ ಸುಖಿಗಳಲ್ಲವೆ?' ಎಂದ.

ಇದೇಕೆ ಹೀಗೆ ವಿಚಿತ್ರವಾಗಿ ಈತ ಪ್ರಶ್ನೆ ಮಾಡುತ್ತಿದ್ದಾನೆ—ಎನಿಸಿತು, ನನಗೆ.

ನಮ್ಮ ಕಷ್ಟ ಸುಖ ಯಾರಿಗೆ ಹೇಳಿಕೊಳ್ಳೋದು ಅವೆಲ್ಲ ನಮ್ಮ, ಆತ್ಮೀಯರಲ್ಲೂ ಚರ್ಚಿಸುವುದಿಲ್ಲ. ಇನ್ನು ಪರಕೀಯರಿಗೆ ಯಾಕೆ ಅದರ ಯೋಚನೆ?—ಎಂದೆ.

'ನನ್ನನ್ನು ಪರಕೀಯ ಎಂತ ಭಾವಿಸದೆ, ತಮ್ಮ ಸ್ವಜನರಲ್ಲಿ ನಾನೂ ಒಬ್ಬ ಎಂತ ತಾವು ಭಾವಿಸಿಕೊಳ್ಳಬೇಕೆಂತ ನನ್ನ ಪ್ರಾರ್ಥನೆ. ನೀವು ಬರೆದಿರೋದೆಲ್ಲ ನಾನು ಓದಿದ್ದೇನೆ. ಅಷ್ಟೇ ಅಲ್ಲ. ನಿಮ್ಮ ಎಷ್ಟೋ ಕೃತಿಗಳು ನನಗೆ ಬಾಯಿಗೇ ಬರುತ್ತೆ. ನೋಡಿ........ಆ ನಾಟಕ' ಎಂತ ಹೇಳಿ......ನಾಟಕವನ್ನು ಒಪ್ಪಿಸುವುದಕ್ಕೆ ಪ್ರಾರಂಭಿಸಿದವನು ಹಾಗೆಯೇ

ಮುಂದುವರಿಸುತ್ತಾ ಹೋದ. ಅಡ್ಡಿ ಹೊಡಬೇಕೆಂದಿದ್ದ ನಾನು ಹಾಗೆಯೇ ನಟ್ಟ ಕಣ್ಣು, ಬಿಟ್ಟ ಬಾಯಿಂದ ಕೇಳುತ್ತ ಕುಳಿತೆ. ಅದನ್ನು ಆತ ಅಷ್ಟು ಚೆನ್ನಾಗಿ ವಾಚಿಸುತ್ತಿದ್ದ. ನಾನು ಆ ನಾಟಕದಲ್ಲಿ ಬರೆದಿದ್ದ ಎರಡು ಮುಖ್ಯ ವ್ಯಕ್ತಿಗಳ ಸಂವಾದವನ್ನು ಹೇಗೆ ವಾಚಿಸುತ್ತಾನೋ ಎಂಬ ಕುತೂಹಲ ಹೆಚ್ಚಾಯಿತು. ನಾನು ಬರೆದಿದ್ದವುಗಳಲ್ಲಿ ಎಲ್ಲಾ ಸಂಭಾಷಣೆಗಳಿಗಿಂತ ನನಗೆ ಅದರ ಮೇಲೆ ಹೆಚ್ಚಿನ ಅಭಿಮಾನವಿತ್ತು. ಆ ಸಂಭಾಷಣೆಯಲ್ಲಿ ಮಹತ್ತರವಾದ ತತ್ವವೊಂದು ಚರ್ಚಿಸಿದ್ದೆ. ಅದು ಬಹಳ ಚೆನ್ನಾಗಿದೆ— ಎಂದು ವಿಮರ್ಶಕರೆಲ್ಲ ಅಭಿಪ್ರಾಯ ಪಟ್ಟಿದ್ದರೂ ಅದರ ಸಂಪೂರ್ಣ ಅಭಿಪ್ರಾಯವನ್ನು ಯಾರೂ ಗ್ರಹಿಸಿ ಚರ್ಚಿಸಿರಲಿಲ್ಲ.

ಆತನು ಆ ಸಂವಾದವನ್ನು ಪಠಿಸಲಾರಂಭಿಸಿದೊಡನೆ ನನಗೆ ರೋಮಾಂಚವುಂಟಾಗಿ, ನಾನು ಸೃಷ್ಟಿಸಿದ ಪಾತ್ರಗಳು ಕಣ್ಮುಂದೆ ಮೂರ್ತಿ ಮತ್ತಾಗಿ ನಿಂತು ಮಾತನಾಡುತ್ತಿವೆಯೇ ಎಂಬಂತೆ ಭಾಸವಾಯಿತು. ನಾನು ಗಹನವಾದ ಆ ತತ್ವವನ್ನು ಬಿಡಿಸಲು ಅದನ್ನು ಅಭ್ಯಾಸಿಸಿ, ಅರಿತು ಕೊಂಡುದಕ್ಕಿಂತ, ಆತನು ಹೆಚ್ಚಾಗಿ ತಿಳಿದು ಕೊಂಡಿರುವಂತೆ ನನಗೆ ತೋರಿತು. ಅವರ ಸಂವಾದವೂ ಮುಗಿಯಿತು. ನನ್ನ ಜ್ಞಾನವೂ ಇಹ ಲೋಕಕ್ಕೆ ಇಳಿಯಿತು.

ಅಬ್ಬ! ಎಷ್ಟು ಚೆನ್ನಾಗಿ ಪಠಿಸಿದಿರಿ! ನಾನು ಆ ತತ್ವವನ್ನು ಅರಿತು ಕೊಂಡಿರುವುದಕ್ಕಿಂತ, ನೀವು ಇನ್ನೂ ಚೆನ್ನಾಗಿ ಅರಿತುಕೊಂಡಿದ್ದೀರಿ. ಇಲ್ಲದಿದ್ದರೆ ಈ ರೀತಿ ಆ ಪಾತ್ರಗಳಿಗೆ ಜೀವಕಳೆಯನ್ನು ತುಂಬಲು ಅಸಾಧ್ಯ ಇದಕ್ಕಾಗಿ ನಾನು ನಿಮಗೆ ಬಹಳ ಋಣಿಯಾಗಿದ್ದೇನೆ. ಇದಕ್ಕಾಗಿ ನೀವು ನನ್ನಲ್ಲಿಗೆ ಬಂದಿರಾ?

'ಹವುದು; ಇಲ್ಲದಿದ್ದರೆ ನಾನು ಬರುತ್ತಿರಲಿಲ್ಲ. ನಿಮ್ಮ ಕೃತಿಗಳಲ್ಲಿ ಅನೇಕ ಬಹಳ ಗಹನವಾದುವುಗಳಾದರೂ, ಇದರಷ್ಟು ಯಾವುದೂ ಇಲ್ಲ.'

ಅಷ್ಟು ಸ್ತೋತ್ರಕ್ಕೆ ನಾನು ಅರ್ಹನಲ್ಲ.

ನನ್ನಿಂದ ನಿಮಗೇನಾದರೂ ಆಗಬೇಕೇ? ಆಕಟ್ಟಿನಲ್ಲಿರುವುದೇನು?

'ನಾನೂ ಒಂದು ನಾಟಕ ಬರೆದಿದ್ದೇನೆ. ಅದೇ ಈಕಟ್ಟಿನಲ್ಲಿರುವುದು. ಇದನ್ನು ದಯವಿಟ್ಟು ಓದಿನೋಡುತ್ತೀರಾ?'

ಈಗ ಬರುತ್ತಿರುವ, ಕೆಲಸಕ್ಕೆಬಾರದ ಬರವಣಿಗೆಗಳು ಸಾಲವೆಂತ

ಇವನೂ ಒಬ್ಬನು ಬಂದು ಕುಳಿತಿದ್ದಾನೋ-ಎಂದುಕೊಂಡ ನಾನೇಸು ಮಾಡುವ ಹಾಗಿದ್ದೇನೆ, ಅಷನ್ನು ನೋಡಿ' ಎಂದೆ.

'ಅದನ್ನು ನೀವು ಕೊಂಡುಕೊಳ್ಳಿ, ಎಂತ ನಿಮ್ಮನ್ನು ಕೇಳಿಕೊಳ್ಳಲು ಬರಲಿಲ್ಲ. ಅದನ್ನು ಓದಿ ವಿಮರ್ಶೆಮಾಡಿ, ಸಲಹೆಕೊಟ್ಟು-ಅದು ಬೆಳಕನ್ನು ಕಾಣುವಂತೆ ಮಾಡಿದರೆ ನಾನು ಬದುಕಿಕೊಳ್ಳುತ್ತೇನೆ' ಎಂದು ಅತಿದೈನ್ಯ ದಿಂದ ಆತನು ಬೇಡಿಕೊಂಡನು.

ನನಗೆ ಈಗ ವಿರಾಮವಿಲ್ಲ........

'ನಾನು ಮಾತು ಪೂರೈಸಲು ಸಹ ಆತ ಅವಕಾಶಕೊಡಲಿಲ್ಲ. ಬದಲು ಥಟ್ಟನೆ ತಲೆಯೆತ್ತಿ, ನನ್ನ ಕಡೆ ನೋಡುತ್ತಾ, ನನ್ನೆದುರು ಬಂದು ನಿಂತು, ತನ್ನೆರಡೂ ಕೈಗಳನ್ನು ಜೋಡಿಸಿ, 'ಅದು ಬೆಳಕಿಗೆ ಬರಲು ನೀವು ಸಹಾಯಮಾಡಬೇಕು. ಖಂಡಿತ ಮಾಡಲೇಬೇಕು. ನೀವಿರುವ ಕೊಠಡಿ ಯನ್ನು ನೋಡಿ; ನಿಮ್ಮನ್ನು ನೋಡಿಕೊಳ್ಳಿ. ನಿಮ್ಮ ಸ್ಥಿತಿಗತಿಗಳನ್ನು ಗಮನಿಸಿ. ಇದಾದ ಮೇಲೆ ನಿಮ್ಮ ಕಡೆಗಣ್ಣಿನ ನೋಟವನ್ನು ಬೀರಿ. ತುತ್ತಿನ ಚೀಲ ಬರಿದಾಗಿ, ದರಿದ್ರ ದೇವತೆಯ ಆವಾಹನೆಯಾಗಿ, ಜೀರ್ಣ ವಸ್ತ್ರ, ಜೀರ್ಣದೇಹಿಯಾಗಿ, ಬಾಳಿನ ಸಿಹಿಗಿಂತ ಕಹಿಯನ್ನೇ ಮೆದ್ದು ಇಂದೋ ನಾಳೆಯೋ ಅಂತಿಮಯಾತ್ರೆಗೆ ಸಿದ್ಧವಾಗಿರುವ ನನ್ನನ್ನು ನೋಡಿ!

'ನಿಮ್ಮ ಮನಸ್ಸು ಎಳ್ಳಷ್ಟಾದರೂ ಕರಗಲಿ'.

ಆತನ ನಟ್ಟ, ತೀಕ್ಷ್ಣ ದೃಷ್ಟಿಯ ಬೇಗೆಯನ್ನು ತಡೆಯಲಾರದೆ ನಾನು ಎದ್ದು ನಿಂತೆ. ಆತನು ಮುಂದುವರಿಸಿದ.

'ನಾನು ಮಾನಾವಮಾನಗಳನ್ನೆಲ್ಲಾ ಬಿಟ್ಟು ನಿಮ್ಮನ್ನು ಕೇಳುತ್ತಿದ್ದೇನೆ. ಭಿಕ್ಷೆಬೇಡಲು ಬಂದಿರುವ ನನಗೆ ಸಂಕೋಚ ನಾಚಿಕೆಗಳೇಕೆ! ನೂರಾರು ಜನ ನನ್ನ ಕತೆ ಓದಿ ಸಂತೋಷಪಟ್ಟಿದ್ದಾರೆ. ನಾಲ್ಕಾರು ಮಾಸ ಪತ್ರಿಕೆಗಳವರು ನನ್ನ ಕತೆಗಳನ್ನು ಪ್ರಕಟಿಸಿ ನನ್ನಿಂದ ಉಪಕಾರ ಹೊಂದಿದ್ದಾರೆ. ಆದರೆ ಅದಕ್ಕೆ ಪ್ರತಿಯಾಗಿ, ಈ ದೇಹದಲ್ಲಿ ಆತ್ಮವನ್ನು ನಿಲ್ಲಿಸಲು, ಗಂಜಿಗಾಗಿ ನಾಲ್ಕು ಕಾಸನ್ನು ಬಯಸಿದಾಗ, ನನಗೆ ಜೀವನಕ್ಕೆ ಮಾರ್ಗ ವಿಲ್ಲವೆಂಬುದನ್ನು ಮರೆತು, ನನ್ನಂತಹ ಹತ್ತು ಜನ ಬಡ-ಲೇಖಕರ ಜೀವದ ಉಸಿರಾದ ಕತೆಗಳನ್ನು ಪ್ರಕಟಿಸಿ, ಅದರಿಂದ ತಮ್ಮ ಜೀವನವನ್ನು

ಸುಲಲಿತವಾಗಿ ನಡೆಸಿಕೊಳ್ಳುತ್ತಿದ್ದರೂ, ತಮ್ಮ ಪತ್ರಿಕೆಗಳ ಸ್ಥಿತಿ ಬಹಳ ಕಷ್ಟದೆಶೆಯಲ್ಲಿದೆ ಎಂದೂ, ಬರುವ ವರಮಾನವು ತಾವು ಇಡುತ್ತಿರುವ ಖರ್ಚಿನಷ್ಟು ಕೂಡ ಇಲ್ಲವೆಂದೂ, ಕಾಸು ಕೊಟ್ಟು ಕತೆಕೊಂಡುಕೊಳ್ಳು ವಷ್ಟು ಶಕ್ತಿ ತಮಗಿಲ್ಲವೆಂದೂ ಪರಿತ್ಯಜಿಸಿರುವವರೆಷ್ಟು ಮಂದಿ? ಇತರರು ಓದಿ ಸಂತೋಷಪಡುವುದರಿಂದ ಬರವಣಿಗೆಗಾರನ ತುತ್ತಿನ ಚೀಲದ ಕರೆ ಯು ತುಂಬಿಬಿಡುವುವೆಂದು, ಓದುವ ಮತ್ತು ಪ್ರಕಟಿಸುವ ನಾಗರಿಕರು ತಿಳಿದಿರುವರೇನೋ?

'ಓದಿ ನೋಡಿ ತಮ್ಮ ಅಭಿಪ್ರಾಯವನ್ನು ತಿಳಿಸಿ' ನನಗೆ ಸಹಾಯ ಮಾಡಿರೆಂದು ನಾನು ಗೋಗರೆದುಕೊಂಡು ನನ್ನ ಪ್ರತಿಗಳನ್ನು ಕೊಟ್ಟಿರು ವಲ್ಲಿ, ಅವನ್ನು ಓದಿಯೂ ನೋಡದೆ, ಅವರ ಬಾಗಿಲಿಗೆ ನನ್ನನ್ನು ಅಲೆಸ ಲೆಸಿ ನನಗೆ ಯಾವ ವಿಧವಾದ ಸಹಾಯವನ್ನೂ ಮಾಡದೆ, ನನ್ನ ಪ್ರತಿ ಗಳನ್ನು ಹಿಂದಿರುಗಿಸಿದ ಮಹಾನುಭಾವರುಗಳೆಷ್ಟೋ! ಪ್ರತಿಯನ್ನೂ ಹಿಂದಿರುಗಿಸದೆ, ಇಂದು ನಾಳೆ ಎಂತ ಅಲೆಸಿ, ಅಲೆಸಿ, ಕೊನೆಗೆ ಪ್ರತಿಗಳು ಎಲ್ಲಿಯೋ ಕಳೆದುಹೋದುವೆಂತ, ತಮಗೆ ಯಾವ ವಿಧವಾದ ನಷ್ಟವೂ ಆಗದಿದ್ದುದರಿಂದ, ಅವುಗಳ ಸೃಷ್ಟಿಕರ್ತನಾದ ನನಗೂ ಏನೂ ನಷ್ಟವಿಲ್ಲ ವೆಂದು ಭಾವಿಸಿದ ಮಹನೀಯರುಗಳೆಷ್ಟೋ!

'ನನ್ನ ಹತ್ತೊಂಬತ್ತನೆಯ ವಯಸ್ಸಿನಿಂದ ಇದುವರೆಗೂ ಹಾಗೆ ಅಲೆದಾಡಿ-ವಿಮರ್ಶಕರು, ಪ್ರಕಟಣಕಾರರು, ಸಂಪಾದಕರು, ಬರವಣಿಗೆ ಗಾರರು ಎಂದು ಹೇಳಿಕೊಳ್ಳುವ ಪಂಗಡದವರನ್ನೇ ದ್ವೇಷಿಸುವ ಸ್ಥಿತಿಗೆ ಬಂದು, ನಿರಾಶೆಯಲ್ಲಿ ಮುಳುಗಿಹೋಗುತ್ತಿದ್ದೇನೆ.

'ಆದರೆ ನೀವು ಎಲ್ಲರಿಗಿಂತಲೂ ಉತ್ತಮರೆಂದರಿತು, ಕಟ್ಟಕಡೆಯ ಬಾರಿ ಅದೃಷ್ಟ ಪರೀಕ್ಷೆಮಾಡಲು ನಿಮ್ಮಲ್ಲಿಗೆ ಬಂದಿರುತ್ತೇವೆ.

'ಸುಖವಾಗಿ ಬದುಕುತ್ತಿರುವ ನೀವುಗಳು ನಮ್ಮಂತಹ, ಯೋಗ್ಯತೆ ಯಿದ್ದರೂ, ಹೆಸರಿಲ್ಲದ, ಹೊಟ್ಟೆಗಿಲ್ಲದ ಬರಹಗಾರರಿಗೆ, ನಿಮ್ಮ ಮರೆಯ ಲ್ಲಾದರೂ ಬದುಕಿರಲು ಅವಕಾಶ ಕೊಡಿ.

'ದೊಡ್ಡ ಮನಸ್ಸುಮಾಡಿ!'

ಇವನಿಗೇನು ಹುಚ್ಚು ಹಿಡಿಯಿತೇ ಎಂತ ಅನಿಸಿತು ನನಗೆ. ಆದರೆ ಅವನಿಗೆ ಹುಚ್ಚುಹಿಡಿದಿರಲಿಲ್ಲ. ನನಗೆ ಹುಚ್ಚು ಹಿಡಿಸಿಬಿಟ್ಟಿದ್ದನು! ತನ್ನ

ಹೃದಯದ ಭಾವನೆಯನ್ನು ನನ್ನ ಮುಂದೆ ತೋಡಿಕೊಂಡು, ನನ್ನ ಮನಸ್ಸನ್ನೇ ಆಕರ್ಷಿಸಿಬಿಟ್ಟಿದ್ದ.

ಆತನು ಹೇಳುವುದೆಲ್ಲ ನಿಜವಾಗಿತ್ತು. ಎಂತಹ ಒಳ್ಳೆಯ ಕೃತಿಯಾಗಿದ್ದರೂ ಬರೆದವನಿಗೆ ಹೆಸರು, ಹಣ ಇರದಿದ್ದರೆ ಅವನ ಕೃತಿಗೆ ಮಾನ್ಯತೆ ಇರಲಿಲ್ಲ! ಅವನನ್ನು ಪರಿಶೀಲಿಸುವುದಕ್ಕಾದರೂ—ಒಂದು ಅವಕಾಶ ಕೊಡುವಷ್ಟು, ನಮಗೆ ತಾಳ್ಮೆಯಿರಲಿಲ್ಲ!

ಹಣವಿದ್ದ, ಹೆಸರು ಹೊಂದಿದ್ದ ಬರವಣಿಗೆಗಾರನ ಕೃತಿಗಳು, ಅವು ಬರೆದಕಾಗದದ ಬೆಲೆಯಷ್ಟುಬಾಳದಿದ್ದರೂ-ಅವುಗಳಿಗೆ ಮಾನ್ಯತೆಯಿತ್ತು!

ಕುಳಿತುಕೊಳ್ಳಿ, ಎಂದೆ.

ಆದರೆ ಆತ ಕುಳಿತುಕೊಳ್ಳಲಿಲ್ಲ.

'ಕುಳಿತುಕೊಳ್ಳಿ, ಎನ್ನುತ್ತೀರಿ. ನನ್ನ ಹೃದಯವೇ ಎದ್ದು ಕುಣಿಯುತ್ತಿರುವಾಗ, ಕುಳಿತುಕೊಳ್ಳಲು ಹೇಗೆ ಸಾಧ್ಯ! ಮನಸ್ಸು ಕುಣಿಯುವುದನ್ನು ನಿಲ್ಲಿಸುವಂತಹ ಶಾಂತಿಯನ್ನುಂಟುಮಾಡತಕ್ಕ ಎರಡು ಮಾತುಗಳನ್ನಾದರೂ ಆಡಿ, ಸ್ವಲ್ಪ ಧೈರ್ಯ ಕೊಟ್ಟರೆ ಕುಳಿತುಕೊಂಡೇನು.'

ಹಾಗೆಯೇ ಆಗಲಿ, ನೋಡುತ್ತೇನೆ, ಕುಳಿತುಕೊಳ್ಳಿ--ಎಂತ ಬಲವಂತವಾಗಿ ಕೂಡಿಸಿದೆ.

ಆತನು ಕುಳಿತನಾದರೂ, ಆತನ ಮುಖಚರ್ಯೆಯಿಂದ ಮನಸ್ಸು ಕುಣಿಯುತ್ತಿರುವಂತೆಯೇ ತೋರಿಬರುತ್ತಿತ್ತು.

'ನೀವು ಅದನ್ನು ಈಗಲೇ, ನೀವು ಇಲ್ಲಿ ಇರುವ ಹಾಗೆಯೇ ಓದಿ ಪೂರೈಸಬೇಕು, ಅಂತ ಏನೂ ಹೇಳೋದಿಲ್ಲವಲ್ಲ! ಅದನ್ನು ನನ್ನ ಬಳಿ ಬಿಟ್ಟು ಹೋಗಿ. ನೀವಿರುವ ವಿಳಾಸ ಕೊಡಿ. ನನ್ನ ಅಭಿಪ್ರಾಯವನ್ನು ಲೇಖನದ ಮುಖಾಂತರ ತಿಳಿಸುತ್ತೇನೆ. ನಿಮ್ಮ ಕೃತಿಯನ್ನು ನಾನೇ ತಂದು ಕೊಡುತ್ತೇನೆ. ನನ್ನ ಅಭಿಪ್ರಾಯದಿಂದ ನಿಮಗೆಷ್ಟು ಮಟ್ಟಿನ ಉಪಕಾರವಾಗುವುದೆಂಬ ವಿಷಯದಲ್ಲಿ ನಾನೇನೂ ಭರವಸೆ ಕೊಡಲಾರೆ. ಯಾರಾದರೂ ಪ್ರಕಟನಕಾರರೋ, ಸಂಪಾದಕರೋ ನಿಮ್ಮ ನಾಟಕವನ್ನು ಕೊಂಡುಕೊಳ್ಳಲು ಅಥವ ಪ್ರಕಟಿಸಿ, ರಾಜಾದಾಯಕೊಡಲು ಒಪ್ಪಿದರೆ, ನಿಮಗೆ ಉಪಕಾರವಾಗುತ್ತೆ.'

'ನಿಮ್ಮಿಷ್ಟವಿದ್ದಂತೆಯೇ ಆಗಲಿ. ಅದು ಬಯಲಿಗೆ ಬರುವಂತೆ ಮಾಡು

ವುದು ನಿಮ್ಮ ಭಾರ. ಅದರಿಂದ ನನಗೆಷ್ಟು ಮಟ್ಟಿನ ಉಪಕಾರವಾದರೂ ಚಿಂತೆಯಿಲ್ಲ! ನಿಮಗೆ ಬಹಳ ತೊಂದರೆ ಕೊಟ್ಟೆ, ಕ್ಷಮಿಸಬೇಕು,' ಎಂತ ಆತ ಹೇಳಿ ಕೈಮುಗಿದ.

ನಾನು ತಿಂಡಿ ತಿನ್ನುತ್ತಾ ಇದ್ದ ಹೊತ್ತಿನಲ್ಲಿ ಬಂದವನು, ದೂರದಿಂದ ಬಂದಿರಬಹುದು, ಹಸಿದಿರಬಹುದು; ಏನಾದರೂ ಆತನಿಗೂ ಸ್ವಲ್ಪ ಕೊಡೋಣವೆನಿಸಿತು.

ಆದರೆ ಮರುಕ್ಷಣದಲ್ಲಿಯೇ 'ಆತ ನನಗೆ ಯಾತರಲ್ಲಿ ಸಮ, ಆತನಿಗೆ ಉಪಚಾರ ಮಾಡಲಿಕ್ಕೆ? ಎನಿಸಿತು.

ಆತ ಕುಳಿತಿದ್ದವನು ಎದ್ದು ನಿಂತು, ತನ್ನ ಹಸ್ತಪ್ರತಿಗೆ ಸುತ್ತಿದ್ದ ಕಾಗದದ ಮೇಲೆಯೇ ವಿಳಾಸ ಬರೆದು, ತಾನು ಕುಳಿತಿದ್ದ ಕುರ್ಚಿಯ ಮೇಲೆಯೇ ಇಟ್ಟು, ಕೈಮುಗಿದು ಬಾಗಿಲಕಡೆ ಹೊರಟ.

ನಾನೂ ಹಿಂದೆಯೇ ಹೋದೆ. ಆತನ ಜೊತೆಯಲ್ಲಿ ಬಂದಿದ್ದಾತ ಕೈಸಾಲೆಯಲ್ಲಿದ್ದ. ಆತನಿಗೆ ಮಣಿಗಿಂತ ಸುಮಾರು ಹತ್ತು ವರ್ಷ ಹೆಚ್ಚು ವಯಸ್ಸಾಗಿತ್ತು. ಮಣಿಗಿಂತ ಕುಳ್ಳಾಗಿದ್ದನಲ್ಲದೆ ಇನ್ನೂ ತೆಳ್ಳಗಿದ್ದ.

ನಾನು ಅಲ್ಲೇ ನಿಂತು ಮಳೆಯಲ್ಲಿ ಇವರಿಬ್ಬರೂ ಒಂದೇ ಛತ್ರಿಯ ಕೆಳಗೆ ಹೋಗುತ್ತಿದ್ದುದನ್ನು ಗಮನಿಸುತ್ತಿದ್ದೆ.

ಅಂದು ಸಂಜೆ ಒಂದು ಕೂಟಕ್ಕೆ ಹೋಗಿದ್ದೆ. ಮಳೆ ಬಿಡದೆ ಸುರಿಯುತ್ತಿದ್ದುದರಿಂದ ಬರಬೇಕಾದವರೆಲ್ಲ ಬಂದಿರಲಿಲ್ಲ. ಆದ್ದರಿಂದ ಕೆಲಸ ಬೇಗ ಮುಗಿಸಿಕೊಂಡು, ಉತ್ಸಾಹರಹಿತನಾಗಿ ಬಂದೆ.

ರಾತ್ರಿ ಉಂಡು ಮಲಗಲು ಕೊಠಡಿಗೆ ಹೋಗುತ್ತಿದ್ದಾಗ್ಯೆ, ಆತನ ಪ್ರತಿ ಕುರ್ಚಿಯ ಮೇಲಿದ್ದುದನ್ನು ನೋಡಿ, ತೆಗೆದುಕೊಂಡೆ. ಅದರ ಮೇಲೆ 'ಪಾಥೆ ಕೊ' 'ತಿ. ಶೇ. ಮಣಿ' ಎಂತ ಬರೆದಿತ್ತು. ಈಗೇನು ಓದೋದು, ನಾಳೆ ಓದಿ ನೋಡೋಣ, ಎಂತ ಅಂದುಕೊಂಡವನು ಹಾಗೆಯೇ ಒಂದೆರಡು ಹಾಳೆ ತಿರುವಿಹಾಕಿದೆ.

ಅದನ್ನು ಪೂರೈಸುವವರೆಗೆ ಬಿಡಲು ಮನಸ್ಸೇ ಬರಲಿಲ್ಲ!

ಮಾರನೆಯ ಬೆಳಿಗ್ಗೆ ನನ್ನ ಶಿಷ್ಯನ ಮೂಲಕ, ಮಣಿ ಕೊಟ್ಟಿದ್ದ ವಿಳಾಸಕ್ಕೊಂದು ಪತ್ರ ಬರೆದು ಕೊಟ್ಟು ಕಳಿಸಿದೆ. ಅದಕ್ಕೆ 'ನಾನೇ ನಿಮ್ಮಲ್ಲಿಗೆ ಸಾಯಂಕಾಲ ಐದು ಗಂಟೆಗೆ ಬರುತ್ತೇನೆ' ಎಂತ ಉತ್ತರ ಬಂತು.

ಅವರು ಇರೋದು ಎಲ್ಲಯ್ಯ?

ಅಯ್ಯೋ! ಅದೇನು ಜಾಗವೆ! ಒಂದು ನರಕ ಅನ್ನಿ! ಕೂಲಿಗಳು ವಾಸಮಾಡ್ತಾರಲ್ಲ, ಅಲ್ಲಿ ಒಂದು ಗುಡಿಸಲು ಇದ್ದ ಹಾಗೆ ಇವೆ. ಅಲ್ಲೇ ಊಟ, ನಿದ್ರೆ, ಅಡಿಗೆ ಎಲ್ಲ; ಊಟಕ್ಕೇ ಅಭಾವ ಅಂತ ಕಾಣುತ್ತೆ. ಅವ ರಿಬ್ಬರೂ ಯಾರ ಜೊತೆಯಲ್ಲೂ ಸೇರುವುದಿಲ್ಲ. ಬಹುಶಃ ಅವರು ಶಿವ ಮೊಗ್ಗೆಯ ಕಡೆಯಿಂದ ಬಂದಿರಬೇಕೆಂತ ಕಾಣುತ್ತದೆ. ಅವರನ್ನು ಶಿವ ಮೊಗ್ಗೆಯವರು ಎಂತ ಅಕ್ಕಪಕ್ಕದವರು ಕರೆಯುತ್ತಾರೆ.

ಸಾಯಂಕಾಲ ಐದು ಘಂಟೆಗೆ ಸರಿಯಾಗಿ ಮಣಿ ಬಂದ. ಅವನನ್ನು ಮರ್ಯಾದೆಯಿಂದ ಕಾಣಬೇಕೆಂದು ಅನ್ನಿಸಿತು ನನಗೆ ಅವನು ನಾಟಕ ವನ್ನು ಅಷ್ಟು ಚೆನ್ನಾಗಿ ಬರೆದಿದ್ದ ಸ್ಫೂರ್ತಿ ಇಲ್ಲದೆ ಅಂತಹ ನಾಟಕವನ್ನು ಬರೆಯಲು ಅಸಾಧ್ಯ. ಆದರ ಅವನನ್ನು ಕಂಡೊಡನೆಯೇ ಅವನನ್ನು ಮರ್ಯಾದೆಯಿಂದ ಕಾಣಬೇಕೆನ್ನಿಸುವುದಕ್ಕಿಂತ ಅವನ ಸ್ಥಿತಿಯನ್ನು ಕಂಡು ನನಗೆ ಮರುಕ ಉಂಟಾಯಿತು.

ಆ ನಾಟಕದ ವಿಷಯದಲ್ಲಿಯೂ ಆತನ ಮೇಲೂ ಅಷ್ಟು ಉತ್ಸಾಹಿ ಯಾಗಿದ್ದುದಕ್ಕೆ ನನಗೇ ಆಶ್ಚರ್ಯವಾಗುತಿತ್ತು. ನಾಟಕದಲ್ಲಿ ದೋಷಗಳಿ ಲ್ಲದೆ ಇರಲಿಲ್ಲ ಆದರೆ ಅದರಲ್ಲಿದ್ದ ಗುಣಗಳ ಮುಂದೆ ಅವು ಅಷ್ಟು ಒಡೆದು ಕಾಣುವಷ್ಟು ದೊಡ್ಡವಾಗಿರಲಿಲ್ಲ. ಆಧುನಿಕ ವಿಮರ್ಶಕರಲ್ಲಿ ನಾನೊಬ್ಬ ನಾಗಿದ್ದುದರಿಂದ, ಆ ನಾಟಕವನ್ನು ಎಲ್ಲಾ ದೃಷ್ಟಿಯಿಂದ ಪರಿಶೀಲಿಸಿ ದ್ದರೂ ಅದು ಬಹಳ ಉದಾತ್ತವಾದ ವಿಷಯವೊಂದನ್ನು ಆರಿಸಿ, ಚೆನ್ನಾಗಿ, ರಸವತ್ತಾಗಿ ಬರೆದಿದ್ದ ನಾಟಕವಾಗಿತ್ತು.

ಕೈ ಜೋಡಿಸಿಕೊಂಡು ನನ್ನ ಕಡೆಯೇ ನೋಡುತ್ತಿದ್ದ ಮಣಿಯನ್ನು ನೋಡಿದೆ. ಅವನು ಸುಮ್ಮನೆ ಕುಳಿತಿದ್ದರೂ ಅವನ ಮನಸ್ಸು ನರ್ತಿಸು ತ್ತಿದ್ದುದು ನನಗೆ ಎದ್ದು ಕಾಣಿಸುತ್ತಿತ್ತು. ಇನ್ನೊಂದೆರಡು ನಿಮಿಷಗಳಲ್ಲಿ ಆಸ್ಫೋಟವಾಗುವ ಸಿಡಿಮದ್ದಿನ ಗುಂಡಿನಂತೆ.

ನನ್ನಂತೆಯೇ ಸ್ಫೂರ್ತಿಯುಳ್ಳ, ವಾಗ್ದೇವಿಯ ಪ್ರಸನ್ನತೆಯುಳ್ಳ ಆತನು, ನನ್ನೆದುರು ತನ್ನ ಜೀವನದ ಆಗುಹೋಗುಗಳನ್ನು ನನ್ನ ಕೈಯ್ಯ ಲ್ಲಿಟ್ಟು ಕೂತಿರುವುದನ್ನು ಕಂಡು, ನನ್ನಂತೆ ಬರವಣಿಗೆಯಿಂದ ಜೀವಿಸು ತ್ತಿದ್ದ, ನನ್ನವರಲ್ಲಿಯೂ, ಬರವಣಿಗೆಗಾರರಿಂದ ಜೀವಿಸುತ್ತಿದ್ದ ಪ್ರಕಾಶಕ

ರಲ್ಲಿಯೂ, ಹೆಸರಿಗೆ ಮಾರುಹೋಗಿ, 'ಆ' ಎಂದು ಬಾಯಿಬಿಟ್ಟುಕೊಂಡಿರುವ ಸ್ವಂತ ಅಭಿಪ್ರಾಯವಿಲ್ಲದ ಓದುಗರ ಮೇಲೂ ಏಕಕಾಲದಲ್ಲಿ ಕೋಪ ಬಂತು.

ನನ್ನಂತೆ ಆತನಿಗೆ ಸ್ಫೂರ್ತಿ, ವಾಗ್ದೇವಿಯ ಅನುಗ್ರಹಗಳಿದ್ದರೂ ನನ್ನ ಸ್ಥಾನಮಾನಗಳ ಬಲವಿರಲಿಲ್ಲ. ಅವುಗಳಿಂದ ಶೂನ್ಯನಾದ ಆತನಿಗೆ ನಿಜವಾದ ಯೋಗ್ಯತೆಯಿದ್ದರೂ ನಾವು ಅದನ್ನು ಒಪ್ಪಿಕೊಳ್ಳಲು ಸಿದ್ಧರಾಗಿರಲಿಲ್ಲ.

ಸಿದ್ಧರಾಗಿದ್ದರೆ ಅವನಿಗೆ ಜೀವನಕ್ಕೆ ಕಷ್ಟವಾಗಬೇಕೆ!

ಲಕ್ಷ್ಮಿಯು ಒಲಿಯದಿದ್ದರೆ ಅವನ ಕೃತಿಗಳಿಗಾದರೂ ಮರ್ಯಾದೆ ಬೇಡವೆ!

ನನ್ನ ಕಡೆಯೇ ನೋಡುತ್ತಿದ್ದ ಆತನು, ನನ್ನ ಮುಸಿನಗೆಯನ್ನು ನೋಡಿ, ತನ್ನ ಮನಸ್ಸಿನ ಉದ್ವೇಗವನ್ನು ತಡೆದುಕೊಳ್ಳಲಾರದ ಮುಖವನ್ನು ಕೈಯಿಂದ ಮುಚ್ಚಿಕೊಂಡು ನಿಶ್ಶಬ್ದವಾಗಿ ಅತ್ತನು

ಆತನು ಸಮಾಧಾನಗೊಂಡ ಮೇಲೆ, ನಾನು ನಾಟಕ ಚೆನ್ನಾಗಿದೆ ಯೆಂತ ಹೇಳಿದೆ.

'ತಮ್ಮೆದುರು ನನ್ನ ಉದ್ವೇಗವನ್ನು ತೋರಿಸಿದುದಕ್ಕೆ ನನ್ನನ್ನು ಕ್ಷಮಿಸಬೇಕು ನಿಮ್ಮ ಕೈಯಲ್ಲಿ ನನ್ನ ಜೀವವನ್ನೇ ಕೊಟ್ಟಿದ್ದೆ, ನಿಮ್ಮ ಅಭಿಪ್ರಾಯವು ವಿರೋಧವಾಗಿ ಬಂದಿದ್ದರೆ ಏನೇನಾಗಿ ಹೋಗುತ್ತಿತ್ತೋ ನಾನು ಹೇಳಲಾರೆ.'

ಏನೇನಾಗಿ ಹೋಗುತ್ತಿತ್ತರೀ?

'ಆಗೋದೇನು! ಆತ್ಮವು ಕೃಶವಾದ ಈ ದೇಹವನ್ನು ಬಿಡುತ್ತಿತ್ತು!

ಏನು-ಹತ್ಯ ಮಾಡಿಕೊಳ್ಳುತ್ತಿದ್ದಿರಾ! ಅದು ಕೆಟ್ಟ ಕೆಲಸವಲ್ಲವೆ! ನಿಮ್ಮ ಮನಸ್ಸು ಅಷ್ಟು ಹೇಯವಾದ ಕಾರ್ಯಕ್ಕೆ ಕೈಹಾಕುವಷ್ಟು ದುರ್ಬಲವೆ ಮತ್ತು ನೀಚವೆ?

'ಆ ವಿಚಾರಗಳಲ್ಲಿ ಭಿನ್ನಾಭಿಪ್ರಾಯಗಳಿವೆ. ಈ ದೇಹಕ್ಕೆ ಮಾತ್ರ ನಾಶವುಂಟಾಗುತ್ತಿತ್ತು. ಆತ್ಮಕ್ಕಲ್ಲ. ದೇಹಕ್ಕಾದರೂ ಯಾಕೆ ನಾಶವಾಗಬೇಕು-ಎಂಬೀ ಪ್ರಶ್ನೆಗೆ ಶ್ರೀಮಂತನ ದೇಹಕ್ಕೂ ಭಿಕ್ಷುಕನ ದೇಹಕ್ಕೂ ವ್ಯತ್ಯಾಸವಿಲ್ಲವೇ—ಎಂಬ ವಿಚಾರ ಹೇಳಬಹುದು. ಈಗ ಆ ವಿಚಾರದ

ತರ್ಕವೇತಕ್ಕೆ? ನನ್ನ ನಾಟಕದ ವಿಷಯವೇನು, ಅಪ್ಪಣೆ ಕೊಡಿಸೋಣ ವಾಗಲಿ.'

ನಾನು ನಾಟಕವನ್ನು ನನ್ನ ಕೈಗೆ ತೆಗೆದುಕೊಂಡು ಇದರಲ್ಲಿ ಕೆಲವು ದೋಷಗಳಿವೆ ಎಂಬುದು ನಿಮ್ಮ ದೃಷ್ಟಿಗೆ ಬಂದಿದೆಯೆ—ಎಂದೆ.

'ಅದರಲ್ಲಿ ದೋಷಗಳಿವೆ ಎಂತ ನನ್ನ ಅಲ್ಪಮತಿಗೆ ತೋಚಿರಲಿಲ್ಲ.'

ನಾನು ಕಂಡುದುದನ್ನು ತೋರಿಸುತ್ತೇನೆ. ನಾಟಕವನ್ನು ಓದೋಣ. ನಾನೇ ಓದಲೇ, ನೀವು ಓದುತ್ತೀರೊ?

'ನನಗೆ ಬಾಯಿಗೆ ಬರುತ್ತೆ. ನೀವು ಪ್ರತಿ ನೋಡಿಕೊಳ್ಳಿ. ನಾನು ಹೇಳುತ್ತೇನೆ.'

ಹಾಗಾದರೆ ನೀವು ಅದನ್ನು ಅಭಿನಯಿಸಿ ಬಿಡುತ್ತೀರಿ. ಆಗ ಅದ ರಲ್ಲಿರುವ ದೋಷಗಳು ಮರೆಯಾಗಿ ಬಿಡುತ್ತವೆ. ಅದರಲ್ಲೂ ನೀವು ಅದರ ಕರ್ತರು. ನೀವು ಅದನ್ನು ಓದಿದರೆ ಆಯಾ ಪಾತ್ರಗಳು ಮೂರ್ತಿವತ್ತಾಗಿ ನಿಮ್ಮಿಂದ ಹೊರಬೀಳುತ್ತವೆ. ಆಗ ಅದರಲ್ಲಿ ಓದುವವರು ಇವೆಯೆಂದು ಭಾವಿಸುವ ತಪ್ಪುಗಳನ್ನು, ನೀವು ಸಮಯ ಸನ್ನಿವೇಶಗಳಿಂದ ಮುಚ್ಚಿ ಬಿಡುತ್ತೀರಿ. ಪ್ರತಿಯೊಬ್ಬರೂ ಓದುವಾಗ ನೀವು ಇರುತ್ತೀರಾ—ಅಥವ ಅವರಿಗಾಗಿ ನೀವು ಓದುತ್ತೀರಾ?

ಇದನ್ನು ಬೆಳಕಿಗೆ ತರಲು ಸಹಾಯ ಬೇಡುವುದಕ್ಕಾಗಿ ನನ್ನ ಬಳಿಗೆ ಬಂದಿರುತ್ತೀರಿ. ಇದನ್ನು ಯಾರಾದರೂ ಕೊಂಡುಕೊಳ್ಳಬೇಡವೆ? ಅವರು ಇದರಲ್ಲಿರುವ ಲೋಪ ದೋಷಗಳನ್ನು ತಿದ್ದಬೇಕೆಂದಾಗ ಆಗುವುದಿಲ್ಲ ವೆಂದರೆ ಕೊಂಡುಕೊಳ್ಳುತ್ತಾರೆಯೆ?

ನಾನು ಎಷ್ಟೋ ವಿಧವಾಗಿ ಹೇಳಿದರೂ ಆತನಿಗೆ ಅದರಲ್ಲಿ ದೋಷ ವಿದೆಯೆಂಬ ನಂಬಿಕೆಯೇ ಬರಲಿಲ್ಲ. ಅವನೇನು ಮೂರ್ಖನಪ್ಪ, ಎನಿಸಿತು, ನನಗೆ. ಆದರೆ ಆತನು ಮೂರ್ಖನಾಗಿರಲಿಲ್ಲ. ಅವನ ಕೃತಿಯಲ್ಲಿ ಅವನಿಗೆ ಲೋಪಗಳು ಕಾಣಿಸಲಿಲ್ಲ, ಅಷ್ಟೆ. ನನಗೆ ಬೇಜಾರಾಗಿ ನಾನು ಸುಮ್ಮ ನಾಗುವ ವೇಳೆಗೆ, ಆತ 'ನಾನು ಈ ನಾಟಕವನ್ನು ವಾಚಿಸಲೆ?' ಎಂದ.

ಬೇಡ ಎಂತ ಹೇಳುವುದಕ್ಕೂ ಇಷ್ಟವಿಲ್ಲದಷ್ಟು ಬೇಜಾರಾಗಿತ್ತು ನನಗೆ. ಆತ ಎದ್ದು ನಿಂತು ಅದನ್ನು ಪಠಿಸಲು ಪ್ರಾರಂಭಿಸಿದ. ಆತನ ಪಠನದಿಂದ ಅದರಲ್ಲಿದ್ದ ಲೋಪ ದೋಷಗಳು ಹಾಲಿನಲ್ಲಿ ಬೇರೆಸಿಸದ

ನೀರಿನಂತಾದುವು. ಅದು ಮುಗಿದ ಮೇಲೆ ದಿಗ್ವಿಜಯ ಮಾಡಿದವನಂತೆ ಆತನೆನ್ನನ್ನು ನೋಡಿದನು.

ಅದೇನು ಚೆನ್ನಾಗಿಲ್ಲವೆಂತ ನಾನು ಹೇಳಿದೆನೇ? ಆದರೆ ಅದರಲ್ಲಿರುವ ದೋಷಗಳನ್ನು ಲೋಕ ಖಂಡಿಸದೆ ಇರುವುದಿಲ್ಲ. ಅದರಲ್ಲಿ ಕೆಲವು ಸಣ್ಣ ವಿಷಯಗಳನ್ನು ನಾನು ತಿದ್ದಲೆ?

ಉಹುಂ.

'ಇದಲ್ಲದೆ ಬೇರೆ ಇನ್ನೂ ಏನಾದರೂ ಇವೆಯೋ?'

ಇವೆ.

'ನಾನು ಅದನ್ನು ನೋಡ ಬಹುದೋ, ಯಾವಾಗ ಬರಲಿ ನಿಮ್ಮ ಮನೆಗೆ?'

'ನೀವು ಅಷ್ಟು ತೊಂದರೆ ತೆಗೆದುಕೊಳ್ಳುವುದು ಬೇಡ. ನಾನೇ ಬರುತ್ತೇನೆ, ಯಾವಾಗ ಬರಲಿ?'

'ನಾಳೆ ಮಧ್ಯಾಹ್ನ ಬನ್ನಿ. ನನ್ನೊಡನೆಯೇ ಊಟ ಮಾಡಿ'

ಮಾರನೆಯದಿನ ಆತ ಬಂದ. ಊಟ ಮಾಡಿದ ಮೇಲೆ ನಾನು ಆತನ ಕೃತಿಗಳನ್ನು ನೋಡುತ್ತಾ ಕುಳಿತೆ. ಕುರ್ಚಿಯ ಮೇಲೆ ಕುಳಿತಿದ್ದ ಆತ ಹಾಗೆಯೇ ನಿದ್ದೆಹೋಗಿಬಿಟ್ಟಿದ್ದ. ಆತನ ಪದ್ಯಗಳಲ್ಲಿ ಕೆಲವನ್ನು ನೋಡಿದೆ. ಕೆಲವು ಸಣ್ಣ ಕತೆಗಳೂ ಇದ್ದುವು. ಎಲ್ಲವೂ ಬಹಳ ಚೆನ್ನಾಗಿದ್ದುವು. ಆದರೆ ಒಂದೊಂದರಲ್ಲಿ ಒಂದೊಂದು ದೋಷ. ದೋಷಗಳೇನೂ ಭಾರಿಯವಲ್ಲದಿದ್ದರೂ ಅವು ಇಲ್ಲದಿದ್ದರೆ ಬಹಳ ಚೆನ್ನಾಗಿರುತ್ತಿತ್ತು.

ಕೊನೆಗೆ ಆ ನಾಟಕದಲ್ಲಿನ ಒಂದು ಪಾತ್ರವನ್ನು ಸ್ವಲ್ಪ ಬದಲಾಯಿಸಬೇಕೆಂತ ನಾನು ಆತನಿಗೆ ಹೇಳಿ ಒಪ್ಪಿಸಿದೆ.

ಆತ ಹೊರಟು ಹೋದ

ಆತನ ಕತೆಗಳಲ್ಲಿ ಕೆಲವನ್ನು......ಗ್ರಂಥ ಮಾಲೆಯ ನಾಟಕವನ್ನು ........ಪ್ರಕಟನಾಲಯಕ್ಕೂ ಕಳಿಸಿದೆ.

ಈ ಮಧ್ಯೆ ಒಂದು ತಿಂಗಳಾಯಿತು. ಮಣಿಯು ಮತ್ತೆ ಬರಲಿಲ್ಲ.... ಗ್ರಂಥ ಮಾಲೆಯವರು 'ಕತೆಗಾರರು ತೀರ ಅಪರಿಚಯಸ್ಥರು. ಪುಸ್ತಕಗಳು ಉಳಿದು ಬಿಟ್ಟರೆ ನಮಗೆ ನಷ್ಟವಾಗುತ್ತದೆ. ಖರ್ಚುಗಳಲ್ಲಿ ಅರ್ಧ ಕೊಡಲು ಬರಹಗಾರರು ಒಪ್ಪಿದರೆ ನೋಡೋಣ. ಕತೆಗೆ ಬಹಳ ಬೆಲೆ

ಕೊಡುವುದಕ್ಕಾಗುವುದಿಲ್ಲ' ಎಂತ ಬರೆದಿದ್ದರು.........ಪ್ರಕಟನಾಲಯ ದಿಂದ ಆ ನಾಟಕದಲ್ಲಿನ, ನಾನು ಹೇಳಿದ್ದ ಪಾತ್ರವನ್ನು, ಸ್ವಲ್ಪ ಬದಲಾಯಿಸಿ ಕೊಡಬೇಕೆಂತ ಬರೆದಿತ್ತು.

ನಾನೇ ಕುಳಿತು ಅದನ್ನು ತಿದ್ದಲಾರಂಭಿಸಿದೆ. ಆದರೆ ಅದನ್ನು ಬದಲಾಯಿಸಲು ನಾನು ಪಟ್ಟ ಪ್ರಯತ್ನದಿಂದ ನನ್ನ ಕೊರಡಿಯೆಲ್ಲ ಅರ್ಧಂ ಬರ್ಧ ಬರೆದ ಕಾಗದಗಳಿಂದ ತುಂಬಿತೇ ವಿನಾ, ನಾಟಕವನ್ನು ವಿರೂಪ ಮಾಡದೆ ಬದಲಾಯಿಸಲು ಸಾಧ್ಯವಾಗಲಿಲ್ಲ

ಕೊನೆಗೆ ಬೇಜಾರಾಗಿ ಅದನ್ನು ಹಾಗೆಯೇ ಬಿಟ್ಟು, ಸಣ್ಣ ಕತೆಗಳಿಗೆ ಒಂದು ಮುನ್ನುಡಿಯನ್ನು ಬರೆದು .. . . ಗ್ರಂಥಮಾಲೆಯವರಿಗೆ ಕೊಟ್ಟು ಕಳಿಸಿದೆ.

ಇಷ್ಟರಲ್ಲಿ ಎರಡು ಮೂರು ತಿಂಗಳುಗಳು ಕಳೆದುಹೋಗಿ ನನಗೆ ಮಣಿಯ ವಿಷಯವೇ ಮರೆತು ಹೋಯಿತು.

ಒಂದು ದಿನ ಮಧ್ಯಾಹ್ನ ಪೇಟೆಯಲ್ಲಿ ಅಕಸ್ಮಾತ್ತಾಗಿ ಮಣಿಯ ಓಂಪೆ ಬರುತ್ತಿದ್ದಾತ ನನಗೆ ಸಿಕ್ಕಿದ. ಆತನನ್ನು ನಿಲ್ಲಿಸಿ, 'ಎಲ್ಲಯ್ಯ, ನಿಮ್ಮ ಮಣಿರಾಯರು? ಈ ನಡುವೆ ಬರಲಿಲ್ಲ ಅವರಿಗೆ ಬರೆಯಬೇಕೆಂದುಕೊಂಡಿದ್ದ. ಸಾಧ್ಯವಾಗಲಿಲ್ಲ. ಇಂದೋ ನಾಳೆಯೋ ಬರಹೇಳು.

'ಅಯ್ಯೋ, ಅದಕ್ಕೆ ಯಾಕೆ ಸ್ವಾಮಿ, ಅಷ್ಟೊಂದು ಆತುರ! ಹೊಟ್ಟೆ ತುಂಬಿದವರು ನೀವು; ಇನ್ನೂ ಅಷ್ಟು ದಿನ ನಿಧಾನಮಾಡಿ. ಅಷ್ಟು ಹೊತ್ತಿಗೆ ಆತನ ಪಾಡು ಮುಗಿದುಹೋಗಿರುತ್ತೆ.'

ಏನ್ರೀ, ಹಾಗೆಂದ್ರೆ!

'ನಿಮ್ಮ ಮುಖ ನೋಡಿದೊಡನೆಯೇ ಏನೂ ಸ್ವಾರಸ್ಯವಿಲ್ಲವೆಂತ ನಾನು ಗ್ರಹಿಸಿದೆ. ನಿಮ್ಮ ಧರ್ಮಕ್ಕೆ ಆತನಿಗೆ ಕಾಗದ ಬರೆಯಬೇಡಿ ಈಗಲೇ ಖಾಯಿಲೆ, ಮಲಗಿದ್ದಾನೆ. ಆಶೆಯ ತಂತು ಇನ್ನೂ ಸ್ವಲ್ಪ ತಗಲಿಕೊಂಡಿದೆ. ಆತನಿಗೆ ಸಹಾಯವೇನೂ ಮಾಡಲು ಸಾಧ್ಯವಿಲ್ಲವೆಂತ ಗೊತ್ತಾದರೆ, ನಿರಾಶೆಯಿಂದ ಹೃದಯ ಚಲನವೇ ನಿಂತು ಹೋದೀತು!'

ಏನು ಖಾಯಿಲೆ?

'ಹೊಟ್ಟೆಗಿಲ್ಲದ ಖಾಯಿಲೆ. ಹೊಟ್ಟೆ ತುಂಬಿದವರು ಹೊಟ್ಟೆಗಿಲ್ಲದವರನ್ನು ಏನು ಖಾಯಿಲೆ ಎಂತ ಕೇಳುವಂತೆ ಖಾಯಿಲೆಯೇ. ನಿಮ್ಮ ಹತ್ತಿರ

ಬಂದಿದ್ದಾಗಲೇ ನಾವು ಹೊಟ್ಟೆಗಿಲ್ಲದೆ ಸಾಯುತ್ತಿದ್ದವು ಪ್ರತಿಯೊಬ್ಬರೂ ಅವರ ಕತೆ ಚೆನ್ನಾಗಿದೆ ಎಂತ ಹೊಗಳುವವರೇ ಹೊರತು ಮೂರು ಕಾಸು ಯಾರೂ ಕೊಡುವವರಿಲ್ಲ! ಅಷ್ಟೇ ಆದರೆ ಎಷ್ಟೋ ಉಪಕಾರ! ಕತೆಗಳನ್ನೂ ನಾಟಕಗಳನ್ನೂ ಓದಿನೋಡಿ ಹೇಳುತ್ತೇವೆ ಎಂತ ಎಷ್ಟೋ ದೊಡ್ಡ ಮನುಷ್ಯರು ತೆಗೆದುಕೊಂಡ ಕೃತಿಗಳನ್ನು ಹಿಂದಕ್ಕೇ ಕೊಡಲಿಲ್ಲ! ಬರೆದ ಪ್ರತಿಯೊಂದು ಕೃತಿಯೂ ಬಾಯಿಪಾಠವಾಗಿರುತ್ತದಯೇ? ಅಥವ ಬರೆದ ಪ್ರತಿ ಒಂದಕ್ಕೂ ಎರಡೆರಡು ಪ್ರತಿ ಬರೆದಿಡಲು ಸಾಧ್ಯವೇ!

'ಹಾಗಾಗಿ ಹೀಗಾಗಿ ಬಡವರು ಅಕ್ಷರದಿಂದ ಬದುಕುತ್ತೇವೆಂದು ಹಂಬಲಿಸುವುದಕ್ಕಿಂತ ನೇಣು ಹಾಕಿಕೊಳ್ಳುವುದು ಉತ್ತಮ.'

ಅವಲ್ಲ ಇರಲ್ರೀ. ಅವರಿಗೆ ಏನಾಗಿದೆ?

'ಚಟ್ಟಕ್ಕೆ ಸಿದ್ಧರಾಗುತ್ತಿದಾರೆ. ಅವರ ಕೃತಿಗಳನ್ನೆಲ್ಲಾ ಒಂತಿರುಗಿಸಿ; ಅವರಿಗೆ ಬೆಂಕಿ ಹಚ್ಚಲು ಸಹಾಯವಾಗುತ್ತೆ'

ತಕ್ಷಣ ಮಣಿಯ ಮನೆಗೆ ಹೋದೆ ಖಾಯಿಲೆ ಮಲಗಿದ್ದ ಆತನನ್ನು ನೋಡಿ ನನ್ನ ಎದೆ ಒಡೆದುಹೋಯಿತು. ನಾನು ಬಾಗಿಲು ತೆಗೆದೆ. ಆತ ಕಣ್ಣು ತೆರೆದ. ನನ್ನನ್ನು ಗುರ್ತಿಸಿ ನಕ್ಕ ಹಾಗೆ ಮುಖಮಾಡಿದ. ಮತ್ತ ಕ್ಷೀಣ ಸ್ವರದಲ್ಲಿ 'ಏನಾಯಿತು' ಎಂದ. ಆತನಿಗೆ ಏನು ಉತ್ತರ ಕೊಡಬೇಕು!

'ನಾಟಕ ತೆಗೆದುಕೊಳ್ಳುವುದಕ್ಕೆ ಒಪ್ಪಿದ್ದಾರೆ'

ಆತನಿಂದ ತೃಪ್ತಿಯ ನಿಟ್ಟುಸಿರು ಒಂದು ಬಂತು

'ಮಾವ, ನನಿಗೆ ಹಸಿವು' ಎಂದ.

ಮನೆಯಲ್ಲೆಲ್ಲಾ ಏನೂ ಇಲ್ಲ. ಏನಾದರೂ ತರೋಣವೆಂತಲೇ ಆತನ ಮಾವ ಪೇಟೆಗೆ ಬಂದಿದ್ದಾನೆಂತ ತಿಳಿಯಿತು. 'ನಾಟಕಕ್ಕೆ ಬಂದಿರುವ ಮುಂಗಡ' ಎಂತ ಹತ್ತುರೂಪಾಯಿಗಳ ಐದು ನೋಟುಗಳನ್ನು ಆತನಿಗೆ ಕೊಟ್ಟು ಏನಾದರೂ ತಾ ಎಂದೆ.

ಮಣಿಯ ಸಂಗಡ ಮಾತನಾಡುತ್ತ ಕುಳಿತೆ.

'ನಾಟಕದಲ್ಲಿ ಬರುವ ಕಾಸನ್ನು ನಮ್ಮ ಮಾವನಿಗೆ ಕೊಡಿ. ಯಾರೂ ಪ್ರಕಟಿಸದ ನನ್ನ ಕೃತಿಗಳನ್ನು ನನ್ನ ಮೇಲಿಟ್ಟು ಸುಟ್ಟುಬಿಡಿ. ನನಗೆ ಅವುಗಳಿಂದ ಮೂರು ಕಾಸಿನ ಪ್ರಯೋಜನವಾಗದಿದ್ದರೂ, ನಾನು ಕತೆ

ಯನ್ನು ಬರೆದು, ಕೆಲವರ ಮನಸ್ಸನ್ನಾದರೂ ಸಂತೋಷಪಡಿಸಿದೆನೆಂಬ ಹೆಮ್ಮೆ ನನಗಿದೆ. ಆದರೆ ಅದೇ ಜನಾಂಗಕ್ಕೆ ಅಂಥಾ ಪ್ರಾಣಿಯೊಂದರ ಜೀವವನ್ನು ಕಾಪಾಡಲು ಶಕ್ತಿಯಿಲ್ಲವಲ್ಲ ಎಂಬ ಕೊರಗು ನಿಮಗಿರಲಿ.

'ನಿಮ್ಮ ಬಳಿ ನಾನೇಕೆ ಬಂದೆ, ಗೊತ್ತೇ? ನಿಮಗೂ ನನಗೂ ಇರುವ ವ್ಯತ್ಯಾಸಗಳನ್ನು ಕಂಡುಕೊಳ್ಳಲು! ನೀವು ಅದೃಷ್ಟವಂತರು, ಧನವುಳ್ಳವರು, ಸ್ಥಾನಮಾನಗಳುಳ್ಳವರು; ಮೇಲಾಗಿ ಸರಸ್ವತೀ ಕಟಾಕ್ಷವುಳ್ಳವರು. ನಾನು! ಅದೃಷ್ಟಹೀನ; ಸ್ಥಾನಮಾನಗಳಿಲ್ಲದವನು. ಆದ್ದರಿಂದ ನನ್ನ ಯೋಗ್ಯತೆಗೆ ಬೆಲೆಯಿಲ್ಲ. ನಮ್ಮಲ್ಲಿ ಮನುಷ್ಯನ ಗುಣಕ್ಕೆ ಪ್ರಾಮುಖ್ಯತೆ ಇಲ್ಲ! ಧನಕ್ಕುಂಟು! ಹೆಸರಿಗುಂಟು! ನಿಮ್ಮಂಥವರು ಏನು ಬರೆದರೂ ಅದು ಒಳ್ಳೆಯ ಕೃತಿ! ನಮ್ಮಂಥವರು ಬರೆದಿರುವುದು ಅಪೂರ್ವವಾದುದಾದರೂ ಅದನ್ನು ಕೇಳುವವರೇ ಇಲ್ಲ!

'ಸ್ಥಾನಮಾನ ಐಶ್ವರ್ಯಗಳ ಬಲದಿಂದ ಬೀಗುವ ನೀವು ಹೆಚ್ಚೋ? ಏನೂ ಇಲ್ಲದೆ ನಿಮ್ಮ ಯೋಗ್ಯತೆಗೆ ಸರಿತೂಗುವ ನಾವು ಹೆಚ್ಚೋ? ನೀವೆ ಹೇಳಿ.'

ಇದೇ ತರಹ ಜ್ಞಾನಾಜ್ಞಾನಗಳ ಮಾತನಾಡುತ್ತ ಆತನು ಇಹ ಲೋಕದ ವ್ಯಾಪಾರವನ್ನು ಮುಗಿಸಿಯೇ ಬಿಟ್ಟ.

ಆತನ ನಾಟಕವನ್ನು ನಾನೇ ಬರೆದೆನೆಂತ ಹೇಳಿ ಬೇರೆ ಇನ್ನೊಬ್ಬರಿಗೆ ಕೊಟ್ಟೆ.

ನನ್ನ ಹೆಸರಿನ ಬಲದಿಂದ ಅದು ನನ್ನ ನಾಟಕಗಳಿಗಿಂತ ಹೆಚ್ಚು ಮನ್ನಣೆಯನ್ನು ಪಡೆದಿದೆ.



Printed at the Harsha Printery, Puttur,
S. K. 51-6-1949, copies 1000.

# ತಿದ್ದುಪಡಿ.

| ಪುಟ. | ಪಂಕ್ತಿ. | ತಪ್ಪು. | ಒಪ್ಪು. |
|---|---|---|---|
| ೨ | ೨೦ | ಆತ್ಮ ಸಮರ್ಪಿಸಿ. | ಆತ್ಮ ನಿನಗೆ ಸಮರ್ಪಿಸಿ |
| ೩ | ೨೭ | ನಿನ್ನಿಂದ | ನನ್ನಿಂದ |
| ೪ | ೮ | ಜತೆಗೆ | ಚಿತೆಗೆ |
| ೫ | ೧೬ | ಅತ್ಮ | ಆತ್ಮ |
| | ೨೬ | ನನ್ನ | ನಿನ್ನ |
| ೬ | ೧ | ಕೊರೆಯ | ತೊರೆಯ |
| ೮ | ೪ | ಸನ್ನಿವೇಷ | ಸನ್ನಿವೇಶ |
| ೧೧ | ೫ | ಇನ್ನೆಂತೆಹ | ಇನ್ನೆಂತಹ |
| ೨೨ | ೨೦ | ಸತಃ | ಸ್ವತಃ |
| ೨೯ | ೭ | ಬರುವುದೇ | ಬರದಿರುವುದೇ |
| | ೧೧ | ಕಿಲ್ಲ | ಕಲ್ಲ |
| ೩೦ | ೨೮ | ತಳಿದ | ಕಳಿಸು |
| ೪೬ | ೧೪ | ಆತ್ಮನಿರೀಕ್ಷಣೆ | ಆತ್ಮಸಾಕ್ಷಾತ್ಕಾರ |
| ೪೭ | ೬ | ವಾಲೆಯ | ಖಾಲಿ |
| ೪೮ | ೪ | ನಿತ್ಯಮಾರ್ಗ | ಸತ್ಯಮಾರ್ಗ |
| ೫೬ | ೧೬ | ಸಾಮಾಜ | ಸಮಾಜ |
| ೬೧ | ೨೩ | ದಟ್ಟ | ದಟ್ಟಿ |
| ೬೫ | ೧೮ | ಒಲ್ಲರೂ | ಎಲ್ಲರೂ |
| ೬೫ | ೮ | ನೋಡುತ್ತಿದ್ದಾಗ | ನೋಡುತ್ತಿದ್ದಾತ |
| | ೨೫ | ನಿಮ್ಮನ್ನಾರಾದರೂ | ನಮ್ಮನ್ನಾರಾದರೂ |
| ೬೯ | ೧೧ | ನುಡಿಸು | ಮಡಿಸು |
| | ೨೮ | ಹೋಗವಿಯಂತೆ | ಹೋಗುವಿಯಂತೆ |
| ೭೩ | ೧೫ | ಮುಲ್ಕ | ಮುಲ್ಕ |
| | ೧೬ | ವಿಟ್ಲಾಲಿ | ಪಿಟ್ಲಾಲಿ |
| ೭೫ | ೧೧ | ಕುತಿದ್ದೀಯ | ಕೂತಿದ್ದೀಯಾ |
| | ೧೪ | ಸಿಂಪರಿಸು | ಸಿಂಡರಿಸು |

| | | | |
|---|---|---|---|
| ೮೩ | ೧೨ | ಪಟಲಾಂ | ಪಟಾಲಂ |
| ೮೫ | ೨೮ | ಇಲ್ಲದ | ಇಲ್ಲವೆ |
| ೯೦ | ೫ | ಂಡನಾ | ಷ್ಠಂಡನಾ |
| ೯೫ | ೩ | ಕೊಡ್ತೇವೆ | ಕೊಡ್ತೇನೆ |
| ೯೭ | ೩ | ಕೇಂಗವರಣಿ | ಕೆಂಗವರಕೆ |
| ೧೧೯ | ೯ | ಕನ್ಯಾನ್ವೇಶಣ | ಕನ್ಯಾನ್ವೇಷಣ |
| | ೧೫ | ಮರುಗಳಿಗೆ | ಮರುವಳಿಗೆ |
| ೧೨೦ | ೭ | ಮೈಗಾವಾಗಲೇ | ಮೈಗಾವಲೇ |
| ೧೪೦ | ೨ | ಪುನಃ ಒಬ್ಬಳನ್ನು | ಪುನಃ ಅವಳನ್ನು |
| ೧೫೨ | ೧೭ | ಹೊತ್ತು ಹೊತ್ತು | ಹೆತ್ತು ಹೊತ್ತು |
| ೧೫೩ | ೧ | ಮೂರನೆಯ | ಮಾರನೆಯ |
| ೧೫೭ | ೧೪ | ಮನೆಯಿಲ್ಲದ್ದ | ಮನೆಯಲ್ಲಿದ್ದ |
| ೧೬೧ | ೬ | ಏನೋ | ಏನೋ |
| ೧೭೪ | ೧೫ | ಪ್ರವಹಿಸಿ | ಪ್ರವಹಿಸು |
| ೧೮೯ | ೨೭ | ಎಂಟ್ರೆಂನ್ಸ್ | ಎಂಟ್ರೆನ್ಸ್ |
| ೧೯೨ | ೧೪ | ನಮೊರಾತ್ | ನಮೋರಾತ್ |
| ೧೯೩ | ೧೧-೧೨ | ಧರ್ಮಾಂಬುದಿ | ಧರ್ಮಾಂಬುಧಿ |
| ೧೯೫ | ೫೧ | ಸ್ವಿಮಿಂಗ್ | ಸ್ವಿಮ್ಮಿಂಗ್ |
| " | ೧೬ | ಸ್ಪೋರ್ಟ್ಸ್ | ಸ್ಪೋರ್ಟ್ಸ್ |
| " | ೧೭ | ಸ್ಪೋರ್ಟ್ಸ್‌ಮನ್ | ಸ್ಪೋರ್ಟ್ಸ್‌ಮೇನ್ |
| ೧೯೬ | ೫ | ಲಿಪ್ಟರ್ನ್ | ಲಿಫ್ಟರ್ನ್ |
| ೧೯೮ | ೨೫-೨೬ | ಇರಬೇಕಾದರೆ | ಇರುವಾಗ |
| ೧೯೯ | ೧೫ | ನಗೆ | ತನಗೆ |
| ೨೦೬ | ೨ | ಪ್ರಯಾಣವಾಗಿದ್ದವನು | ಪ್ರಯಾಣಕ್ಕೆದ್ದವನು |
| ೨೦೭ | ೧೫ | ಸ್ವಲ್ಪ | ಸ್ವಲ್ಪ |
| ೨೧೧ | ೨೩-೨೪ | ಸೆಕ್ರಿಟರಿ | ಸೆಕ್ರೆಟರಿ. |
| ೨೧೭ | ೧-೨ | ಪ್ರೀತಿಸುತ್ತಿದ್ದಳೋ | ಪ್ರೀತಿಸುತ್ತಿದ್ದಾಳೋ |
| ೨೨೨ | ೧೧ | ಅತನನ್ನು | ಆತನನ್ನು |

